ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.

# ಗೆಲವಿನ ಕತ್ತಿ!

(ಐತಿಹಾಸಿಕ ಕಾದಂಬರಿ.)

ಲೇಖಕ:
ನಾಗೇಶ.

ಪ್ರಕಾಶಕ:
ಭಿ. ಪ. ಕಾಳೆ,
ಸಂ. ಶ್ರೀ ಶೇಷಾಚಲ ಗ್ರಂಥಮಾಲೆ,
ಆನಂದವನ-ಅಗಡಿ.

೨ನೇ ಆವೃತ್ತಿ

ಜನವರಿ ೧೯೩೯

೧೨ ಆಣೆ

## ಮೊದಲನೇ ಮುದ್ರಣದ




ಭರತವರ್ಷವು ಪರವಶತೆ ಹೊಂದುವದಕ್ಕೆ ರಾಷ್ಟ್ರಧರ್ಮವಿಹೀನತೆಯೇ ಕಾರಣವು. ಜಯಚಂದ್ರ ರಾಠೋಡನು ರಾಷ್ಟ್ರಧರ್ಮವಿಹೀನನಾದುದರಿಂದ, ಪೃಥ್ವೀರಾಜ ಚಹ್ವಾಣನು ಭಾರತದ ಅಂತಿಮ ಆರ್ಯ ಸಮ್ರಾಟನಾದನು. ಉಜ್ವಲ ರಾಷ್ಟ್ರಧರ್ಮದ ವಿಭೂತಿಗಳ ಪ್ರಯತ್ನಗಳು ರಾಷ್ಟ್ರಧರ್ಮವಿಹೀನರಿಂದ ನಾಶವಾಗಿ ಹೋಗಿರುವವು. ಸ್ವಾತಂತ್ರ್ಯವನ್ನು ಗಳಿಸಿಕೊಳ್ಳಲಿಕ್ಕೂ ಪಾರತಂತ್ರ್ಯವನ್ನು ನಾಶಗೊಳಿಸಲಿಕ್ಕೂ ಐಕ್ಯವು ಮೇಲಾದ ಸಾಧನವು. ಐಕ್ಯವೇ ರಾಷ್ಟ್ರಧರ್ಮದ ಮೇಲಾದ ಗುಟ್ಟು. ಹೊರಗಿನವರ ಸಂಬಂಧವುಂಟಾದಾಗ ಪರಸ್ಪರರು ದ್ವೇಷಾಸೂಯೆಗಳನ್ನು ಮರೆತು, ಒಕ್ಕಟ್ಟಿನಿಂದ ನಡೆಯಲಿಕ್ಕೆ ಬೇಕು. ಕೌರವೇಶ್ವರ ದುರ್ಯೋಧನನು ಗಂಧರ್ವರಾಜನ ಸೆರೆಯಲ್ಲಿ ಸಿಕ್ಕಾಗ ಅಜಾತಶತ್ರುವಾದ ರಾಜಾ ಯುಧಿಷ್ಠಿರನು ಅರ್ಜುನನಿಗೆ ಮಾಡಿದ ರಾಷ್ಟ್ರಧರ್ಮೋಪದೇಶವು ಅನುಕರಣೀಯವಿರುವದು. 'ಪರೈಃ ಪರಿಭವೇ ಪ್ರಾಪ್ತೇ ವಯಂ ಪಂಚೋತ್ತರಂ ಶತಂ| ಪರಸ್ಪರ ವಿರೋಧೇಷು ವಯಂ ಪಂಚೈವ ತೇ ಶತಂ' ಇದೇ ಯುಧಿಷ್ಠಿರನ ರಾಷ್ಟ್ರಧರ್ಮದ ಉಜ್ವಲವಾದ ಮಂತ್ರವು.

ನಗದೇಶ ಸಂಸ್ಥಾನದ ಸೇನಾಪತಿಯಾದ ಮಯೂರಧ್ವಜನು ತನ್ನ ಬಂಧುಪುತ್ರನಾದ ರಣಮಲ್ಲನಿಗೆ ಇದೇ ರಾಷ್ಟ್ರಧರ್ಮವನ್ನುಪದೇಶಿಸಿ, ಅವನನ್ನು ರಾಷ್ಟ್ರಸೇವೆಗೆ ತೊಡಗಿಸಿದ ಉಜ್ವಲವಾದ ಇತಿಹಾಸವು ಈ ಚಿಕ್ಕ ಕಥೆಯಲ್ಲಿ ವರ್ಣಿಸಲ್ಪಟ್ಟಿದೆ.

ಈ ಕಥೆಯೊಳಗಿನ ಜಗಮಲ್ಲ, ಮಯೂರಧ್ವಜ, ರಣಮಲ್ಲ, ಕಲ್ಯಾಣಿ, ಶೀಲವತಿ ಮೊದಲಾದ ನರ-ನಾರೀರತ್ನಗಳು ಆದರ್ಶಭೂತರಾಗಿರುವರೆಂಬದರಲ್ಲಿ ಸಂದೇಹವಿಲ್ಲ.

ಮಹಾರಾಷ್ಟ್ರಭಾಷೆಯೊಳಗಿನ 'ವಿಜಯೀ ತಲವಾರ' ಎಂಬ ಕಥೆಯು ಈ ಕಾದಂಬರಿಗೆ ಮೂಲಧನವಾಗಿದೆ. ಇದನ್ನು ಬರೆಯಲಿಕ್ಕೆ ನಿರಪೇಕ್ಷಬುದ್ಧಿಯಿಂದ ಒಪ್ಪಿಗೆಯಿತ್ತ ಮೂಲಕಥಾಲೇಖಕರಾದ ಶ್ರೀಯುತ ಲಕ್ಷ್ಮಣ ನಾರಾಯಣ ಜೋಶಿ ಇವರಿಗೆ ಅತ್ಯಂತ ಕೃತಜ್ಞನಾಗಿರುವೆನು.

ಅಡರಕಟ್ಟಿ<br>ತಾ|| ೧೪-೧೦-೩೭ } ಕನ್ನಡಿಗರ ವಿಧೇಯ,<br>ನಾಗೇಶ

# ಪರಿವಿಡಿ.





——

ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.

# ಗೆಲುವಿನ ಕತ್ತಿ!



## ತಂತು.

***

ಅಂತರದಲ್ಲಿ ಅವನು ಸ್ವರ್ಣವರ್ಣ ಪ್ರಕಾಶ ಕಿರಣಗಳಲ್ಲಿ ತನ್ನ ಗೆಲುವಿನ ಕತ್ತಿಯನ್ನು ಹಿರಿದನು.

ಭವ್ಯತೆ ಮತ್ತು ಏಕಾಂತ ಇವುಗಳ ಮಿಶ್ರಣದ ಭಯಾನಕ ಭಾವವನ್ನು ಉತ್ಪನ್ನ ಮಾಡುವ ಪರ್ವತ ಶ್ರೇಣಿಗಳಿಂದ ಸುತ್ತುವರೆಯಲ್ಪಟ್ಟ ಆ ಭೂಮಿಯು ಅರವಲೀ ಪರ್ವತದ ಬಳಿಯಲ್ಲಿಯೇ ಇತ್ತು. ಮಾನವ ಜೀವಿತದ ಕ್ಷಣಭಂಗುರತೆಯ ಬಗ್ಗೆ ಸಾಕ್ಷೀಭೂತವಾಗಿದ್ದು, ಅತ್ಯಂತ ಭಯಂಕರವೂ ವಿಕರಾಳವೂ ಆಗಿತ್ತು.

ದೂರದಲ್ಲಿಯ ಸರ್ವೋಚ್ಚವಾದ ಪರ್ವತ ಶಿಖರದ ಮೇಲೆ ಸೂರ್ಯನಾರಾಯಣನು ಹೊಳೆಯುತ್ತಲಿದ್ದನು. ಶೂರ, ವೀರ, ಯೋದ್ಧಾ ನೃಪಶ್ರೇಷ್ಠನ ಮಸ್ತಕದ ಮೇಲಿನ ಸುವರ್ಣ ಮುಕುಟವೋ ಏನೋ ಎಂಬಂತೆ ಶಿಖರಾರೂಢ ಭಾಸ್ಕರನು ಭಾಸಮಾನನಾಗಿದ್ದನು.

ಇಂತಹ ಮಂಗಲ ಸುಪ್ರಭಾತ ಸಮಯದಲ್ಲಿ ಸುಲಿಗೆಗಾರರ ತಂಡದ ನಾಯಕನಾದ ವೀರವರ ಜಯಮಲ್ಲನು ಅರವಲೀ ಪರ್ವತದ ಬಳಿಯ ವನಪ್ರದೇಶದಲ್ಲಿ ವಿಚಾರಮಗ್ನನಾಗಿ ನಿಂತುಕೊಂಡಿದ್ದು, ತೀಕ್ಷ್ಣವೂ ಕ್ರೋಧಾಯಮಾನವೂ ಆದ ದೃಷ್ಟಿಯಿಂದ ನಾಲ್ಕು ಕಡೆಗೆ ನೋಡುತ್ತಲಿದ್ದನು. ಅವನ ತೀಕ್ಷ್ಣ ದೃಷ್ಟಿಯು ಆಸಮಂತಾತ್ ಪ್ರದೇಶದ ವಾತಾವರಣವನ್ನು ಭೇದಿಸುತ್ತಿರುವಂತೆ ತೋರುತ್ತಿತ್ತು.

ಪ್ರತಿಹಿಂಸೆಯೇ ಅವನ ಜೀವನದ ಮುಖ್ಯ ಧ್ಯೇಯವಾಗಿತ್ತು. ಆಗಿನ ವಾತಾವರಣದಲ್ಲಿ ಸೇಡು ತೀರಿಸಿಕೊಳ್ಳುವ ಭಾವನೆಯ ಗಂಧವು ಪರಿಪ್ಲುತವಾಗಿತ್ತು. ಆಗಿನ ಸೂರ್ಯ ಕಿರಣಗಳಾದರೂ ಸೇಡಿನ ಪ್ರಖರತೆಯ ಪ್ರತಿನಿಧಿಗಳಾಗಿದ್ದಂತೆ ತೋರತೊಡಗಿದ್ದವು.

ಶಕ್ತಿಸಮ್ರಾಟ್ ಜಗಮಲ್ಲನು ಇಂದು ತನ್ನ ತಂಡವನ್ನು ಬಿಟ್ಟು, ಏಕಾಂತ ಸಾಧನಕ್ಕಾಗಿ ಅಲ್ಲಿಗೆ ಹೋಗಿದ್ದನು; ಆದರ ಆ ಪರ್ವತಪ್ರದೇಶದಲ್ಲಿ ಅವನ ಹೃದಯವು ಶಾಂತವಾಗದೆ, ಸೇಡುತೀರಿಸಿಕೊಳ್ಳುವ ಭಾವನೆಯು ಮತ್ತಷ್ಟು ಜಾಗ್ರತವಾಗಹತ್ತಿತು. ಕೂಡಲೆ ಅವನು ಉದಯೋನ್ಮುಖ ಸೂರ್ಯನ ಪ್ರಕಾಶಮಯ ಕಿರಣ ಸಮೂಹದಲ್ಲಿ ತನ್ನ ಗೆಲವಿನ ಕತ್ತಿಯನ್ನು ಹಿರಿದನು.

ಕತ್ತಿಯ ಧಾರೆಯ ಮೇಲೆ ಆ ಸೂರ್ಯ ಕಿರಣಗಳು ಸೇಡುತೀರಿಸಿಕೊಳ್ಳುವ ಭಾವನೆಯಿಂದ ತಾಂಡವನೃತ್ಯ ಮಾಡುತ್ತಿರುವಂತೆಯೂ, ವಿಕಟ ಹಾಸ್ಯಗೈಯುತ್ತಿರುವಂತೆಯೂ ಭಾಸವಾಗುತ್ತಿದವು. ಕತ್ತಿಯನ್ನು ಒರೆಯಿಂದ ಹಿರಿಯುವಾಗ ಉತ್ಪನ್ನವಾದ ಸಪ್ಪಳವು ಸೇಡಿನ ಚೀತ್ಕಾರ ಮಾಡುತ್ತಿರುವಂತೆ ಜಗಮಲ್ಲನ ಕಿವಿಗೆ ಬೀಳಹತ್ತಿತ್ತು. ಒರೆಯಿಂದ ಹೊರಟ ಖಡ್ಗದ ಕಡೆಗೆ ಅವನು ತನ್ನ ದೃಷ್ಟಿಯನ್ನು ಸ್ಥಿರಪಡಿಸಿದನು. ಅದು ತನ್ನ ಗೆಲವಿನ ಕತ್ತಿಯೆಂಬುದರ ನಂಬಿಗೆಯು ಅವನಿಗಿದ್ದಿತು. ಅವನ ಆ ವಿಜಯ ಖಡ್ಗವು ಸೇಡು ತೀರಿಸಿಕೊಳ್ಳಬೇಕೆಂಬ ಉತ್ಕಟ ಇಚ್ಛೆಯನ್ನು ವ್ಯಕ್ತಪಡಿಸುತ್ತಿತ್ತು.

“ಈ ನನ್ನ ಗೆಲವಿನ ಕತ್ತಿಯು ನನಗೆ ಅನ್ಯಾಯಮಾಡಿದ ರಾಜನ ವಕ್ಷಸ್ಥಳವನ್ನು ಪ್ರವೇಶಿಸಿ ಬಿಸಿ ನೆತ್ತರವನ್ನು ಕುಡಿಯಬಲ್ಲದೆ? ಸೇಡು ತೀರಿಸಿಕೊಳ್ಳುವ ಭಾವನೆಯಿಂದ ಕನಸುಗಳನ್ನು ಕಾಣುತ್ತಿರುವ ನನ್ನೀ ವಿಜಯಿ ಖಡ್ಗವು ಇನ್ನು ಮೇಲೆಯೂ ಕಾರ್ಯಪರಾಙ್ಮುಖಾವಸ್ಥೆಯಲ್ಲಿಯೇ ಉಳಿಯಬಹುದೆ?” ಎಂದು ಜಗಮಲ್ಲನು ಉದ್ಗಾರ ತೆಗೆದು, ಮತ್ತೊಮ್ಮೆ ತನ್ನ ಕತ್ತಿಯನ್ನು ದಿಟ್ಟಿಸಿ ನೋಡಿದನು. ರವಿಕಿರಣ ರಂಜಿತವಾದ ಅವನ ಗೆಲವಿನ ಕತ್ತಿಯು ಒಂದು ಕಾಲ್ಪನಿಕ ಆಕೃತಿಯಿಂದ ಅಂಕಿತವಾಯಿತು. ಆ ಆಕೃತಿಯು ಯಾವ ವ್ಯಕ್ತಿಯದಿರಬಹುದು?

ಆ ಆಕೃತಿಯು ಮತ್ತೆ ಯಾರದೂ ಆಗಿರದೆ, ಅವನ ಪ್ರಾಣಸಖಿಯಾದ ಕಲ್ಯಾಣಿಯದು. ಕಲ್ಯಾಣಿಯು ಅವನ ಜೀವಿತದ ಸರ್ವಸ್ವವಾಗಿದ್ದಳು; ಆಯುಷ್ಯದ ಧ್ಯೇಯವಾಗಿದ್ದಳು; ಮನಾನಂದಕಾರಿಣಿಯಾಗಿದ್ದಳು!

o o o

ಜಗಮಲ್ಲನು ಮೊದಲು ಸುಲಿಗೆಗಾರನಾಗಿರಲಿಲ್ಲ. ಅವನು ನಿಜವಾದ ವೀರಕ್ಷತ್ರಿಯನು; ಸ್ವಾಮಿನಿಷ್ಠನು; ಸ್ವದೇಶಪ್ರೇಮಿಯು ಆಗಿದ್ದನು. ಅವನ ಅಣ್ಣನಾದ ಮಯೂರಧ್ವಜನು ನೆಗಳಿದ ರಾಜನಾದ ರಾಣಾ ರಾಯಸಿಂಹನ ಸೇನಾಪತಿಯು. ಜಗಮಲ್ಲನು ಅಗ್ರಜನನ್ನು ದೇವತಾಸಮಾನನವಾಗಿ ಭಾವಿಸಿದ್ದನು. ಮಾತೃಭೂಮಿಯು ಮತ್ತು ರಾಜನ ಸೇವೆ ಮಾಡಬೇಕೆಂಬ ಮನೋ

ಕಾಮನೆಯು ಅವನ ಹೃದಯದಲ್ಲಿ ವಿಕಸಿತವಾಗತೊಡಗಿತ್ತು; ಆದರೆ ನಿಯತಿಯ ನಿಯಮವು ಬೇರೆ ವಿಧವಾಗಿದ್ದಿತು. ಕಾಲಚಕ್ರಕ್ಕೆ ವಿರುದ್ಧಗತಿಯು ಪ್ರಾಪ್ತವಾಗಿತ್ತು.

ನಗದೇಶರಾಜ್ಯದ ಸೀಮಾಂತರಕ್ಕೆ ಹೋದಿದ್ದ ಅರುಣಗಡರಾಜ್ಯಕ್ಕೆ ಹೋಗುವ ಪ್ರಸಂಗವು ಜಗಮಲ್ಲನಿಗೆ ಬಂದಿತು. ಅವನು ಅಲ್ಲಿಗೆ ಹೋದದ್ದರಿಂದಲೇ ದುಃಖ ನೈರಾಶ್ಯಗಳನ್ನು ಭೋಗಿಸಬೇಕಾಯಿತು. ಅವನ ಜೀವನದ ಸ್ಥಿತಿಯೇ ಬೇರೆಯಾಗಿ ಹೋಯಿತು. ಅವನ ಹೃದಯದಲ್ಲಿ ಉಂಟಾಗಿದ್ದ ಉದ್ವೇಗವೇ ಪ್ರತಿಹಿಂಸೆಯನ್ನು ಪ್ರಜ್ವಲಿತವನ್ನಾಗಿ ಮಾಡಿತು!

ಜಗಮಲ್ಲನು ಅಶ್ವಾರೂಢನಾಗಿ ಅರುಣಗಡದ ರಾಜಮಾರ್ಗದಿಂದ ನಡೆದಾಗ ಅಲ್ಲಿಯ ರಜಪುತ ಸರದಾರ ವಿಜಯಸಿಂಹನ ಪುತ್ರಿಯಾದ ಲಾವಣ್ಯಮಯಿ ಕಲ್ಯಾಣಿಯು ಸೌಧಾಗ್ರದಲ್ಲಿ ಭಿತ್ತಿವಾತಾಯನದ ಬಳಿಯಲ್ಲಿ ನಿಂತಿರುವುದು ಅವನ ದೃಷ್ಟಿಗೆ ಬಿತ್ತು. ಅದೇ ವೇಳೆಯಲ್ಲಿ ಕಲ್ಯಾಣಿಯ ದೃಷ್ಟಿಯೂ ಅವನ ದೃಷ್ಟಿಗೆ ಭೆಟ್ಟಿಯಾಯಿತು. ಆ ದೃಷ್ಟಿಮಿಲನದ ಪರಿಣಾಮವೇನಾಗಿರಬಹುದು?

ಸ್ತ್ರೀ ದೃಷ್ಟಿಯೊಳಗಿನ ಗಾರುಡಿ ಪ್ರಭಾವವೂ, ಏಕದೃಷ್ಟಿಯಾಗುವದರಿಂದ ಆಗುವ ಪರಿಣಾಮವೂ [illegible]ದಲ್ಲಿ [illegible] ವೆಬ್ಬಿಸುವಂತಹ ಸ್ತ್ರೀ ದೃಷ್ಟಿಶಕ್ತಿಯ [illegible] ಜಗಮಲ್ಲನಿಗೆ ಗೊತ್ತಿರ[illegible] [illegible]ನು [illegible]ಸಾಲದ ವಿಷಯವಾಗಿ ಪೂರ್ಣ ಅನಭ್ಯಸಿಯು. ಸ್ತ್ರೀ ದೃಷ್ಟಿಯಿಂದ ಯಾವ ಪರಿಣಾಮವಾಗುತ್ತದೆಂಬದನ್ನು ಅನುಭವಿಸುವ ಪ್ರಸಂಗವು ಅವನಿಗೆ ಅಂದೇ ಮೊದಲನೆಯದು.

ಅಂದು ಅವನ ಸ್ಥಿತಿಯು ವಿಚಿತ್ರವಾಯಿತು. ಹೃದಯದಲ್ಲಿ ಚಮತ್ಕಾರಿಕವಾದ ವ್ಯಾಪಾರವು ಪ್ರಾರಂಭವಾಯಿತು. ಯಾರೋ ತನ್ನ ಹೃದಯಪ್ರದೇಶದಲ್ಲಿ ಸೇರಿ ಗೊಂದಲವನ್ನೆಬ್ಬಿಸಿರುವರೋ ಏನೋ ಎಂಬಂತೆ ಅವನಿಗಾಯಿತು. ನೋಡಿದನು, ಒಳಗೆ ಯಾರೂ ಇಲ್ಲ; ಹೊರಗೆ ಎದುರಿನ ಸೌಧಾಗ್ರದಲ್ಲಿದ್ದ ವ್ಯಕ್ತಿಯು ಪತಾಕದಿಂದ ಈ ಸ್ವಸ್ಥೆಯಾಗಿರುವದೆಂಬದು ಅವನಿಗೆ ಗೊತ್ತಾಯಿತು. ಈ ಸ್ತ್ರೀದೃಷ್ಟಿಯಲ್ಲಿ ಇಂತಹ ಮಾಯಾವಿದ್ಯೆನವಿರಬಹುದೇನೆಂದು ಅವನು ವಿಚಾರಿಸತೊಡಗಿದನು. ಬಹಳ ವೇಳೆ ವಿಚಾರಿಸಲಿಕ್ಕೂ ಅವನಲ್ಲಿ ಸ್ವಾಸ್ಥ್ಯವಿರಲಿಲ್ಲ. ಮನಸ್ಸನು ಒಂದು ಅಜ್ಞಾತಪಾಶವು ಜಗ್ಗುತ್ತಲಿತ್ತು. ಆಗ ಅವನ ಹೃದಯವು ಉಲ್ಲೋಲ ಕಲ್ಲೋಲವಾಗತೊಡಗಿತು!

**ಸಮಸ್ತ ವಿಶ್ವ ಸೌಂದರ್ಯವೂ, ಸಮಸ್ತ ಪ್ರಕೃತಿ ಸೌಂದರ್ಯವೂ,**

ಸಮಸ್ತ ಮಾನವೀಸೌಂದರ್ಯವೂ ಒಬ್ಬಳಿಗೂಡಿ ಸೌಧಾಗ್ರದಲ್ಲಿ ಪ್ರದರ್ಶಿತ ವಾಗತೊಡಗಿರುವವೆಂದು ಅವನು ತಿಳಿದನು. ಈ ಕ್ಷಣಕ್ಕಿಂತ ಮೊದಲು ಅವನು ಇಂತಹ ಪ್ರಮಾಣಬದ್ಧ ಶರೀರವನ್ನು ವಿಶ್ವಪಟದಲ್ಲೆಲ್ಲಿಯೂ ಕಂಡಿದ್ದಿಲ್ಲ; ಅಂಗದಲ್ಲಿಯ ಇಂತಹ ಕಮನೀಯತೆಯನ್ನು ಅವನು ಜಾಗ್ರತಾವಸ್ಥೆಯಲ್ಲಾಗಲಿ, ಸ್ವಪ್ನದಲ್ಲಾಗಲಿ ಕಂಡಿದ್ದಿಲ್ಲ. ತನ್ನಂತಹ ಕಠೋರ ನಿಶ್ಚಲ ಹೃದಯಿಯ ಮನಸ್ಸನ್ನು ಅರೆಕ್ಷಣದಲ್ಲಿ ಚಲವಿಚಲ ಮಾಡಿ, ವಿಜಯ ಪತಾಕೆಯನ್ನು ಮೆರೆಯಿಸತೊಡಗಿದ ಆ ನಿರ್ಜರಾಂಗನೆಯ ಮುಂದೆ ಮುಖವೆತ್ತಿ ನಿಲ್ಲಲಿಕ್ಕೆ ನಾಚಿ, ಅವನು ಕೆಳಗೆ ಮೋರೆ ಮಾಡಿದನು; ಆದರೆ ಅಲ್ಲಿಯೂ ಅದೇ ನೋಟ, ಅದೇ ಸ್ಥಿತಿ, ಅದೇ ಪರಾಭವ! ಅವನ ಗೆಲವಿನ ಶಕ್ತಿಯ ತೇಜಸ್ವಿಯಾದ ಧಾರೆಯ ಮೇಲೆ ಪ್ರತ್ಯಕ್ಷ ಕಂಡದ್ದಕ್ಕಿಂತಲೂ ಹೆಚ್ಚಾದ ಅಸಂಖ್ಯ ಘಟನೆಗಳ ಲೀಲಾಪಟವೇ ಕಂಡು, ಅವನಿಗೆ ಮತ್ತಷ್ಟು ನಾಚಿಕೆಯಾಗಲು ಮುಖವೆತ್ತಿದನು. ಬೇರೆ ದಿಶೆಗೆ ಮೋರೆ ಹೊರಳಿಸಿದನು; ಆದರೆ ಯಾವದೋ ಒಂದು ಶಕ್ತಿಯು ಅವನ ಮುಖವನ್ನು ಸೌಧಾಗ್ರದ ಕಡೆಗೆ ಹೊರಳಿಸಿತು ಈ ಆಕರ್ಷಣ ಶಕ್ತಿಯಿಂದ ಅವನುವಿಸ್ಮಿತನಾದನು ಪರಕ್ಷಣದಲ್ಲಿ ಅವನುಪ್ರವಾಹ ಪತಿತನಂತಾದನು. ನೀಲವಸ್ತ್ರ ಪರಿಧಾನ ಮಾಡಿ, ಸಂಗಮರವರೀ ವಾತಾಯನದ ಬಳಿಯಲ್ಲಿ ಪುತ್ಥಳಿಯಂತೆ ನಿಂತ ಷೋಡಶ ಪ್ರಾಯದ ಕುಂದರದನಿ ಕಲ್ಯಾಣಿಯು ಅವನ ಜೀವನವನ್ನು ದಾಸ್ಯದಲ್ಲಿ ಕೆಡಹಿಬಿಟ್ಟಿದ್ದಳು. ಜಗಮಲ್ಲನಂತಿದ್ದ ಜಗಮಲ್ಲನು ಇಂದು ಸ್ತ್ರೀದಾಸನಾದನು! ಆ ಕ್ಷಣದಿಂದಲೇ ಅವನು ಆ ಸಾತ್ವಿಕ ಸೌಂದರ್ಯದ ರಮಣೀ ಸುಲಭ ಸೌಮ್ಯತೆಯ ನಾರೀ ಶಾಸಿತ ಲಜ್ಜೆಯ ಆಜೀವ ಪರತಂತ್ರ ದಾಸನಾಗಿ ಹೋದನು.

"ನಾಥ! ಪರಾಭೂತಳಾದೆನು ಇಂತಹ ಪುರುಷಸಿಂಹನನ್ನು ನೋಡಿದ್ದು ಇದೇ ಮೊದಲು ನನ್ನನ್ನು ನಿಮ್ಮವಳನ್ನಾಗಿ ಮಾಡಿಕೊಳ್ಳಿರಿ!" ಎಂಬ ಉದ್ಗಾರವು ವಾತಾಯನದ ಮಾರ್ಗವಾಗಿ ಹೊರಟು ಜಗಮಲ್ಲನ ಕರ್ಣರಂಧ್ರ ಪ್ರವೇಶಿಸಿದಂತಾಯಿತು.

"ನನಗೆ ಒದಗಿದ ಪರಾಭವದ ಸುದ್ದಿಯನ್ನು ಯಾರಿಗೆ ಹೇಳಲಿ? ನನ್ನನ್ನು ನಿಮ್ಮ ಚರಣಕಿಂಕರನನ್ನಾಗಿ ಮಾಡಿಕೊಂಡರೆ ಕೃತಕೃತ್ಯನಾಗುವೆನು!" ಎಂಬ ಉದ್ಗಾರವು ತಿಳಿಯದೆ ಅವನ ಮುಖದಿಂದ ಹೊರಟಿತು. ಅವನ ಹೃದಯದಲ್ಲಿ ಸ್ವರ್ಗೀಯ ಆನಂದದ ಅಭೂತಪೂರ್ವವಾದ ನವ್ಯಸೃಷ್ಟಿಯ ಸ್ಥಾಪನೆಯಾಯಿತು.

ಅಷ್ಟರಲ್ಲಿ "ಜಗಮಲ್ಲ!" ಎಂಬ ಧ್ವನಿಯು ಕೇಳಿಸಿತು. ಕೂಡಲೆ

ಸೌಧಾಗ್ರದೊಳಗಿನ ಮೂರ್ತಿಯು ಮಾಯವಾದ್ದರಿಂದ ಅಲ್ಲಿ ಗಾಢಾಂಧ ಕಾರವು ವ್ಯಾಪಿಸಿದಂತೆ ಅವನಿಗೆ ಭಾಸವಾಯಿತು.

"ಜಗಮಲ್ಲ, ಹೀಗೆ ಹುಚ್ಚನಂತೆ ಏನನ್ನು ನೋಡುತ್ತ ನಿಂತಿರುವೆ?"

ಜಗಮಲ್ಲನು ಬೆಚ್ಚಿಬಿದ್ದನು. ಕೂಡಲೆ ಅವನು ಹೊರಳಿ ನೋಡು ತ್ತಾನೆ, ಮಿತ್ರನಾದ ರಣವೀರನು ಗಹಗಹಿಸಿ ನಗುತ್ತ ನಿಂತಿದ್ದಾನೆ.

"ರಣವೀರ, ಈ ರಮಣೀಯವಾದ ಮಂದಿರದ ಶೋಭೆಯನ್ನು ನಿರೀ ಕ್ಷಿಸುತ್ತಲಿದ್ದೆನು" ಎಂದು ಜಗಮಲ್ಲನು ತಡವರಿಸುತ್ತ ನುಡಿದನು

"ನೀನು ರಮಣೀಯವಾದ ಮಂದಿರದ ಶೋಭೆ ನೋಡುತ್ತಿದ್ದಂತೆ ನನಗೆ ತೋರುವದಿಲ್ಲ."

"ಮಿತ್ರಾ, ನಿನಗೆ ಹೇಗೆ ತೋರುವದು?"

"ರಮಣೀಯಳಾದ ರಮಣಿಯ ರಮಣೀಯತೆಯನ್ನು ನೋಡುತ್ತ ನಿಂತಿರಬಹುದೆಂದು ತೋರುವದು."

"ಈ ಗಾಢಾಂಧಕಾರದಲ್ಲಿ ರಮಣಿಯು ಕಾಣಲಿಕ್ಕೆ ನನಗೇನೂ ದಿವ್ಯ ದೃಷ್ಟಿಯಿಲ್ಲ."

"ಮಧ್ಯಾಹ್ನದಲ್ಲಿ ಸೃಷ್ಟಿಯನ್ನು ಅಂಧಕಾರಮಯ ಮಾಡಿದ ರಮ ಣಿಯು ನಿಜವಾಗಿ ಅದ್ವಿತೀಯಳೇ ಇರಲಿಕ್ಕೆಬೇಕು."

ಜಗಮಲ್ಲನು ಮತ್ತೆ ಸೌಧಾಗ್ರದ ಕಡೆಗೆ ನೋಡಿದನು ಅವನ ಉಲ್ಲಾಸ ದೀಪವು ರಣವೀರನ ಆಗಮನವಾದ ಕೂಡಲೆ ಮಾಯವಾದವ್ದು ತಿರುಗಿ ಅಲ್ಲಿ ಕಾಣಲಿಲ್ಲ. ಕೂಡಲೆ ನಾಲ್ಕೂ ಕಡೆಗೆ ಘನವಾದ ತಮವು ವ್ಯಾಪಿಸಿದಂತೆ ಅವ ನಿಗೆ ಭಾಸವಾಯಿತು.

"ಜಗಮಲ್ಲ! ಮಧ್ಯಾಹ್ನ ಮಾರ್ತಂಡನ ಅಧಿಪತ್ಯವಿದ್ದಾಗ ಘನಾಂಧ ಕಾರವು ವ್ಯಾಪಿಸಿದಂತೆ ನಿನಗೆ ತೋರುವ ಕಾರಣವೇನು?"

'ರಣವೀರ!' ಜಗಮಲ್ಲನು ತನ್ನ ತಪ್ಪು ಮುಚ್ಚಿಕೊಳ್ಳಬೇಕೆಂಬ ಉದ್ದೇಶ ದಿಂದ "ಪಿತ್ತವಿಕಾರದಿಂದ ಕಣ್ಣುಗಳಿಗೆ ಕತ್ತಲೆಗೂಡಿಸಿದಂತೆ ಆಗತೊಡಗಿದೆ."

"ನಿನ್ನ ಪಿತ್ತವ್ಯಾಧಿಗೆ ಔಷಧಿಯುಂಟು."

'ಎಲ್ಲಿದೆ?' ಜಗಮಲ್ಲನು ಸಹಜವಾಗಿ ಪ್ರಶ್ನೆ ಮಾಡಿದನು.

"ಎದುರಿಗೆ ಕಾಣುವ ಸೌಧಾಗ್ರದಲ್ಲಿಯೇ ಉಂಟು. ಅಲ್ಲಿ ನಿನ್ನ ವ್ಯಾಧಿಗೆ ಧನ್ವಂತರಿಯುಂಟು."

ರಣವೀರನು ಸೌಧಾಗ್ರದೊಳಗಿನ ರಮಣಿಯನ್ನು ನೋಡಿರುವನೆಂದು ಜಗಮಲ್ಲನು ತಿಳಿದನು. ಅವನು ಬುದ್ಧಿಪೂರ್ವಕವಾಗಿ ವಿಷಯಾಂತರ ಮಾಡಿ,

ಅನೇಕ ಬಗೆಯ ಸಂಭಾಷಣ ಮಾಡುತ್ತ ನಡೆದನು. ರಣವೀರನು ಹೇಳುತ್ತಿರುವ ಮಾತಿನ ಕಡೆಗೆ ಜಗಮಲ್ಲನ ಲಕ್ಷ್ಯವಿದ್ದಿಲ್ಲ; ತಾನು ಏನು ಮಾಡುತ್ತಿರುವೆನೆಂಬುದೂ ಅವನಿಗೆ ಗೊತ್ತಿದ್ದಿಲ್ಲ. ಟೊಂಕಕ್ಕೆ ಅವನ ಗೆಲವಿನ ಕತ್ತಿಯು ಅಲೆದಾಡುತ್ತಿತ್ತು. ಘಟಿಸಿದ ಸಂಗತಿಗಳ ಪ್ರತಿಬಿಂಬಗಳು ಒಂದರ ಹಿಂದೊಂದರಂತೆ ಆ ವಿಜಯೀ ಖಡ್ಗಧಾರಿಯ ಮೇಲೆ ಆತನಿಗೆ ಕಾಣತೊಡಗಿದ್ದವು.

ಅಂದು ಆ ವೀರವರ ಜಗಮಲ್ಲನು ಅರುಣಗಡದಲ್ಲಿಯೇ ಉಳಿದನು. ಕಲ್ಯಾಣಿಯೊಡನೆ ಗುಪ್ತಮೀಲನವಾದದ್ದರಿಂದ ಅವನು ಅಲ್ಲಿಂದ ಹೊರಡಲಿಕ್ಕೆ ಮನಸ್ಸು ಮಾಡದಾಗಿದ್ದನು. ಅಂದಿನ ನೇತ್ರಮೀಲನವು ಅವನಿಗೆ ಮೋಕ್ಷಪ್ರಾಪ್ತಿಯಂತೆ ಆಹ್ಲಾದಕಾರಕವೆನಿಸಿತ್ತು; ಆದರೆ ಮಾನವ ಮೀಲನ ಸನಾತನವೆಲ್ಲಿರುತ್ತದೆ? ಕೊನೆಗೆ ಕರ್ತವ್ಯವು ಅವನನ್ನು ಅರುಣಗಡದಿಂದ ತಳ್ಳಿತು. ಜಗಮಲ್ಲನು ಬಲುಮೆಯಿಂದ ಕಾಲುಕಿತ್ತಿ, ಹೇಗಾದರೂ ಒಮ್ಮೆ ತನ್ನ ತಂಡವನ್ನು ಸೇರಿದನು.

ಅನಂತರದಲ್ಲಿ ಕೆಲವು ದಿನಗಳ ಮೇಲೆ ಸಂಕ್ಷಿಪ್ತವೂ ಮಾರ್ಮಿಕವೂ ಆದ ಒಂದು ಪತ್ರವು ಅವನಿಗೆ ತಲುಪಿತು.

“ಪ್ರಿಯತಮ!

ಸಮೀಪದಲ್ಲಿದ್ದರೂ ದೂರದಲ್ಲಿದ್ದರೂ ಪ್ರಿಯವಾದದ್ದು ಪ್ರಿಯವೆ! ನಗದೇಶದ ರಾಣಾ ರಾಯಸಿಂಹನು ಈ ದೇಹದ ಮೇಲೆ ತನ್ನ ಒಡೆತನವನ್ನು ನೆಲೆಗೊಳಿಸಬೇಕೆಂದು ಹೊಂಚು ಹಾಕಿರುವನು. ಮನಸ್ಸು ಆತ್ಮವೂ ನಿಮ್ಮಲ್ಲಿ ಐಕ್ಯವಾಗಿರುವವೆಂಬುದು ಅವನಿಗೆ ಹೇಗೆ ಗೊತ್ತಾಗಬೇಕು? ರಾಣಾನು ಈ ದೇಹವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವನಿದ್ದರಿಂದ, ಈ ಜಗತ್ತಿಗೆ ಅನಂತ ಪ್ರಣಾಮಗಳಿರಲಿ!

ತಮ್ಮ ಚರಣದಾಸಿ,

ಕಲ್ಯಾಣಿ”

ಪತ್ರವನ್ನೋದಿದ ಕೂಡಲೆ ಅವನ ಸ್ವರ್ಗಕ್ಕೆ ವಜ್ರಾಘಾತವಾದಂತಾಯಿತು! ಮೈಮೇಲೆ ಆಕಾಶವೇ ಹರಿದುಕೊಂಡು ಬಿದ್ದಿತೋ ಏನೋ ಎಂಬಂತೆ ತೋರಹತ್ತಿತು. ಅವನು ಆ ಪತ್ರವನ್ನು ನಡಕಟ್ಟಿನಲ್ಲಿರಿಸಿದನು. ನಡಕಟ್ಟಿನಲ್ಲಿರಿಸಿದ ಪತ್ರದೊಳಗಿನ ಪ್ರತಿಯೊಂದು ವಾಕ್ಯಗಳು, ವಾಕ್ಯಗಳೊಳಗಿನ ಪ್ರತಿಯೊಂದು ಶಬ್ದಗಳು, ಶಬ್ದದೊಳಗಿನ ಪ್ರತಿಯೊಂದು ಅಕ್ಷರಗಳು ವೈರಿಯು ಸೇಡುತೀರಿಸಿಕೊಳ್ಳುವ ಬಗ್ಗೆ ಕಣ್ಣೀರುದುರಿಸುತ್ತ ಜಗಮಲ್ಲನಿಗೆ ಪ್ರಾರ್ಥಿಸತೊಡಗಿದ್ದವು.

ಕೂಡಲೆ ಅವನ ಹೃದಯವು ಶೋಕವಿಹ್ವಲವಾಯಿತು. ಗೆಲವಿನ ಖಡ್ಗವನ್ನು ಧರಿಸುವ ಹಸ್ತವು ಶಿಥಿಲವಾಯಿತು. ಅವನು ರಾಣಾ ರಾಯಸಿಂಹನಿಗೆ ಒಂದು ಪತ್ರ ಬರೆದನು. “ಕಲ್ಯಾಣಿಯು ನನ್ನ ಹೃದಯೇಶ್ವರಿಯಿರುವಳು. ಅವಳಾದರೂ ನನ್ನನ್ನೇ ವರಿಸಬೇಕೆಂದು ದೃಢಸಂಕಲ್ಪ ಮಾಡಿರುವಳು. ಪರಸ್ಪರರು ಆತ್ಮಸಮರ್ಪಣ ಮಾಡಿದ ಪ್ರಣಯಿಗಳ ಮೇಲೆ ದಾಳಿಮಾಡುವದು ನಿಮ್ಮ ಶೀಲವಲ್ಲ. ಹಿಂದಿನ ಪ್ರತಿಜ್ಞೆಯಂತೆ ವರ್ತಿಸದಿರುವದರಿಂದಲೇ ನಿಮಗೆ ಕೀರ್ತಿಯು ಪ್ರಾಪ್ತವಾಗುವದು.” ಎಂಬ ಅಭಿಪ್ರಾಯದ ಪತ್ರವು ರಾಯಸಿಂಹನ ಕೈಸೇರಿತು.

ರಾಯಸಿಂಹನು ಪತ್ರವನ್ನು ಬಿಸುಟಿದನು. ಅವನು ಆ ಲೋಕಸುಂದರಿಯಾದ ಕಲ್ಯಾಣಿಯನ್ನು ಒಲಿಸಬೇಕೆಂಬ ವಿಚಾರವನ್ನು ಮತ್ತಿಷ್ಟು ದೃಢಪಡಿಸಿದನು. ರಾಣಾನ ನಿರ್ಣಯವು ಜಗಮಲ್ಲನಿಗೆ ಗೊತ್ತಾಯಿತು. ಕೂಡಲೆ ಅವನ ಹೃದಯವು ಸಂತಪ್ತವಾಯಿತು. ಅವನು ಅಂದಿನಿಂದಲೇ ರಾಜದ್ರೋಹಿಯಾದನು; ಮಾತೃಭೂಮಿಯ ಮೇಲೆ ಶಸ್ತ್ರವೆತ್ತಲಿಕ್ಕೆ ಸಿದ್ಧನಾದನು; ನಗದೀಶ ರಾಜ್ಯದಲ್ಲಿ ಕೊಲೆ-ಸುಲಿಗೆ ಮಾಡಲಿಕ್ಕೆ ಅಂದೇ ಟೊಂಕಕಟ್ಟಿದನು!

ಃಃ ಃಃ ಃಃ ಃಃ

ಜಗಮಲ್ಲನು ಹಗಲು-ರಾತ್ರಿಯಲ್ಲಿ ಕಲ್ಯಾಣಿಯ ಸಂಬಂಧವಾದ ವಿಚಾರದಿಂದ ವ್ಯಥಿತಾಂತಃಕರಣನಾಗುತ್ತಿದ್ದನು. ಮನಸ್ಸು ಯಾವಾಗಲೂ ಅಸ್ಥಿರವಾಗುತ್ತಿತ್ತು. ಅವನು ಏಕಾಕಿಯಾಗಿದ್ದಾಗ ಹೃದಯವ್ಯಥೆಯಿಂದ ‘ಕಲ್ಯಾಣಿ! ಕಲ್ಯಾಣಿ! ಎಂದು ಕೂಗುತ್ತಿದ್ದನು; ಆದರೆ ಅವನಿಗೆ ಕಲ್ಯಾಣಿಯು ದೊರೆಯದೆ, ಮತ್ತೆ ‘ಕಲ್ಯಾಣಿ ಕಲ್ಯಾಣಿ!’ ಎಂಬ ಪ್ರತಿಧ್ವನಿಯೇ ಆ ವನಪ್ರದೇಶದಲ್ಲಿ ಕೇಳುತ್ತಿತ್ತು. ಕೂಡಲೆ ಅವನ ಕಣ್ಣುಗಳು ಅಶ್ರುಪೂರ್ಣವಾಗುತ್ತಿದ್ದವು; ಕಂಠವು ಸದ್ಗದಿತವಾಗುತ್ತಿತ್ತು; ನಿಟ್ಟುಸಿರು ಹೊರಬೀಳುತ್ತಿತ್ತು.

ಆದರೇನಾಯಿತು! ಅವನು ಹೀಗೆಯೇ ಅಳುತ್ತ ಕರ್ತವ್ಯವಿಮೂಢನಾಗುವವನಿದ್ದನೇನು? ಅವನು ನಾಮಾಂಕಿತ ಕ್ಷಾತ್ರಯೋದ್ಧಾನಿದ್ದನು. ಅವನ ಕೈಯಲ್ಲಿ ಗೆಲುವಿನ ಕತ್ತಿಯಿತ್ತು.

ಪ್ರೇಮಸ್ಮರಣೆಯ ಪ್ರತಿಯಾಗಿ ‘ಸೇಡು’ ನಿರ್ಧರಿಸಲ್ಪಟ್ಟಿತ್ತು; ಆದರೂ ಅವನು ಇದುವರೆಗೆ ಯಾವ ಕಾರ್ಯವನ್ನೂ ಮಾಡಿದ್ದಿಲ್ಲ. ಸುಲಿಗೆಯನ್ನು ಎಂದೂ ಸಾಧಿಸಿದ್ದಿಲ್ಲ. ಕಲ್ಯಾಣಿಯು ರಾಯಸಿಂಹನ ರಾಜಮಂದಿರವನ್ನು ಸೇರುವವಳಿರುವಳೆಂಬ ದಟ್ಟವಾದ ವಾರ್ತೆಯು ಹಬ್ಬಿತ್ತು. ಆ ವಾರ್ತೆಯು ಜಗಮಲ್ಲನ ಕಿವಿಗೆ ಬಿತ್ತು. ಕೂಡಲೆ ಹೃದಯದೊಳಗಿನ ಸೇಡಿನ ಭಾವನೆಯು

ಜಾಗ್ರತವಾಯಿತು. 'ಸೇಡು-ಸೇಡು!' ಎಂಬ ಧ್ವನಿಯು ಅವನ ಕರ್ಣದಲ್ಲಿ ಸೇರಹತ್ತಿತು.

"ಇಂದಿಲ್ಲ ನಾಳೆ, ನಾಳೆಯಲ್ಲದಿದ್ದರೆ ನಾಡದ್ದು, ತಿಂಗಳೆರಡು ತಿಂಗಳಿಗೆ, ವರ್ಷ ಎರಡು ವರ್ಷಗಳಲ್ಲಿ ಸೇಡು ತೀರಿಸಿಕೊಳ್ಳದೆ ಬಿಡುವದಿಲ್ಲ. ಸೇಡು ನನ್ನ ಆಯುಷ್ಯದ ಗುರಿಯು!" ಎಂದು ಜಗಮಲ್ಲನು ದೃಢನಿಶ್ಚಯ ಮಾಡಿದನು.

ಜಗಮಲ್ಲನು ವನಪ್ರದೇಶದಲ್ಲಿ ನಿಂತು ತನ್ನ ಗೆಲವಿನ ಕತ್ತಿಯ ಕಡೆಗೆ ದಿಟ್ಟಿಸಿ ನೋಡಿದನು.

ಆನಂತರದಲ್ಲಿ ಅವನು ಸ್ವರ್ಣವರ್ಣ ಪ್ರಕಾಶ ಕಿರಣಗಳಲ್ಲಿ ತನ್ನ ಗೆಲವಿನ ಕತ್ತಿಯನ್ನು ಹಿರಿದನು!

ಅಷ್ಟರಲ್ಲಿ ಹಿಂದೆ "ಸರದಾರರೆ!" ಎಂಬ ಧ್ವನಿಯು ಕೇಳಿಸಿತು.

ಜಗಮಲ್ಲನು ಧ್ವನಿಯನ್ನು ಕೇಳಿ ತಿರುಗಿ ನೋಡಿ:-"ಯಾರು, ಧೀರಸಿಂಹ!"

"ಹೌದು; ಸರದಾರರೇ, ನಾನು ಧೀರಸಿಂಹನು ಹೌದು. ಇಂದು ಸುಲಿಗೆಯು ಕೈಸೇರುವಂತಿದೆ. ಇಂದೇ ಸುಲಿಗೆಯು ಶ್ರೀಗಣೇಶವಾಗುವಂತಿದೆ."

"ಹೇಗೆಯೆನು!"

"ಹೌದು. ಒಂದು ರಾಜಪರಿವಾರವು ಹೊರಟಂತೆ ತೋರುವದು. ರಕ್ಷಕರೂ ಬಹಳ ಜನರಿಲ್ಲ."

ಕೂಡಲೆ ಜಗಮಲ್ಲನೂ ಧೀರಸಿಂಹನೂ ತಮ್ಮ ಕುದುರೆಗಳನ್ನು ವೇಗದಿಂದ ಸಾಗಿಸಿದರು. ಒಂದೆರಡು ಕ್ಷಣಗಳಲ್ಲಿ ಅವರು ಅಂವಲಿಯ ದಟ್ಟವಾದ ವನಪ್ರದೇಶದಲ್ಲಿ ಕಾಣದಂತಾದರು.

---

## ಯಾರು? ಕಲ್ಯಾಣಿ!

ಅರುಣಗಡದಿಂದ ನಗದೇಶ ರಾಜಧಾನಿಗೆ ಹೋಗುವ ಮಾರ್ಗದಲ್ಲಿದ್ದ ನಿಬಿಡವಾದ ಅರಣ್ಯದಲ್ಲಿ ಒಂದು ಸುಂದರವಾದ ರಥವು ಮಾರ್ಗಕ್ರಮಣ ಮಾಡತೊಡಗಿತ್ತು. ಅದು ಆವರಣಯುಕ್ತವಿದ್ದು, ಒಂದು ಕಡೆಯಲ್ಲಿ ಮಾತ್ರ ತೆರೆಯು ಇದ್ದಿಲ್ಲ. ಅದರಲ್ಲಿ ವಸ್ತ್ರಾಚ್ಛಾದಿತ ತರುಣಿಯರಿಬ್ಬರು ಕುಳಿತಿದ್ದರು. ರಥದ ಸುತ್ತು-ಮುತ್ತು ನಗ್ನ ಖಡ್ಗಧಾರಿಗಳಾದ ನಾಲ್ವರು ಅಶ್ವಾರೂಢ ರಜಪುತರು ಕಾವಲಾಗಿ ಹೊರಟಿದ್ದರು. ಆ ರಥವನ್ನು ಸುಲಿಗೆಗಾರರ ನಾಯಕನಾದ ಜಗಮಲ್ಲನ ಸಂಗಡಿಗರು ನೋಡಿದರು. ನಗದೇಶ ರಾಜ್ಯದಲ್ಲಿ ಸುಲಿ

ಗೆಯ ಕೆಲಸವಮಾಡಬೇಕೆಂದು ಸಂಕಲ್ಪ ಮಾಡಿಕೊಂಡಂದಿನಿಂದ ಅವರಿಗೆ ಅಂದೇ ಮೊಟ್ಟಮೊದಲಿನ ಸುವರ್ಣಸಂಧಿಯು ಪ್ರಾಪ್ತವಾಗಿತ್ತು; ಆದ್ದರಿಂದ ಅವರು ಒಳ್ಳೆಯ ಆನಂದೋತ್ಸಾಹಗೊಂಡರು. ಅಮೂಲ್ಯವಾದ ಬೇಟೆಯು ಕೈಸೇರುವದೆಂಬ ನಂಬಿಗೆಯಿದ್ದದರಿಂದ ಅವರು ಪ್ರಸನ್ನರಾಗಿದ್ದರು.

ಜಗಮಲ್ಲನ ಅನುಯಾಯಿಯಾದ ಧೀರಸಿಂಹನೂ ಅವನ ಸಂಗಡಿಗರೂ ಗಿಡದ ಗುಂಪಿನೊಳಗೆ ಅಡಗಿಕೊಂಡಿದ್ದರು. ಅವರು ಪ್ರವಾಸಿಗರ ದೃಷ್ಟಿಗೆ ಇನ್ನೂ ಬಿದ್ದಿರಲಿಲ್ಲ. ರಥವು ಮಾರ್ಗಕ್ರಮಣ ಮಾಡುತ್ತ ಸುಲಿಗೆಗಾರರನ್ನು ಸಮೀಪಿಸಿತು. ಧೀರಸಿಂಹನು ಗಿಡದ ಗುಂಪಿನೊಳಗಿಂದ ಹೊರಬಿದ್ದು ರಥ ರಕ್ಷಕರನ್ನು ಕುರಿತ :–"ಹಾ! ತಡೆಯಿರಿ. ಮುಂದೆ ಹೆಜ್ಜೆ ಇಡಕೂಡದು" ಎಂದು ದರ್ಪವಾಣಿಯಿಂದ ಗರ್ಜಿಸಿದನು.

ರಥರಕ್ಷಕರೂ ರಥದೊಳಗಿನ ಸ್ತ್ರೀಯರೂ ಚಕಿತರಾದರು! ಆಗ ಕಾವಲುಗಾರರಲ್ಲೊಬ್ಬನು ದಿಟ್ಟತನದಿಂದ:—"ನೀವು ಯಾರು? ನಮ್ಮನ್ನು ತಡೆಯುವ ಕಾರಣವೇನು?" ಎಂದು ಕೇಳಿದನು.

'ನಾನು ಸುಲಿಗೆಗಾರನು. ಸುಲಿಗೆ ಮಾಡಬೇಕೆಂದು ನಿಮ್ಮನ್ನು ತಡೆಯು ಹೇಳಿದೆನು.'

"ನೀನು ಸುಲಿಗೆಗಾರನೆ? ನಮ್ಮನ್ನು ಸುಲಿಯಲಿಕ್ಕೆ ಬಂದಿರುವೆಯಾ?" ಎಂದು ರಥರಕ್ಷಕನು ನುಡಿದನು.

"ಹೌದು. ನಾನು ನಿಮ್ಮನ್ನು ನಿಶ್ಚಯವಾಗಿ ಸುಲಿಯುವೆನು. ಇಂದಿನ ಸುಲಿಗೆಯೇ ಮೊದಲನೆಯದಾದ್ದರಿಂದ, ನೀವು ಒಳ್ಳೆಯ ಮಾತಿನಿಂದ ರಥದೊಳಗಿನ ಸ್ತ್ರೀಯರ ಅಲಂಕಾರಗಳನ್ನು ನನ್ನ ವಶಮಾಡಿ, ನಿರಾತಂಕವಾಗಿ ಹೊರಟು ಹೋಗಬಹುದು; ಹಾಗೆ ಮಾಡದಿದ್ದರೆ ಬಿಡುಗಡೆಯಿಲ್ಲ"

"ಇಂತಹ ಪೊಳ್ಳು ಬೆದರಿಕೆಗೆ ನಾವು ಬೆದರುವದಿಲ್ಲ. ಯಾಕೆ, ನಿನಗೆ ಜೀವವು ಬೇಡಾಗಿರುವದೆ?"

"ಜೀವವು ಯಾರಿಗೆ ಬೇಡಾಗಿದೆ?" ಎಂದು ಧೀರಸಿಂಹನು ನುಡಿದು, ಕೊಂಬು ಊದಿದನು. ಕೂಡಲೆ ಐವತ್ತು ಜನ ಸುಲಿಗೆಗಾರರು ಗಿಡದ ಗುಂಪಿನೊಳಗಿಂದ ಹೊರಬಿದ್ದು ರಥವನ್ನು ಸುತ್ತುಗಟ್ಟಿದರು.

ರಥರಕ್ಷಕರೂ ರಥದೊಳಗಿನ ಸ್ತ್ರೀಯರೂ ಭಯವಿಸ್ಮಯಚಕಿತರಾದರು. ಆಗ ಧೀರಸಿಂಹನು ಅವರನ್ನು ಕುರಿತು :–"ಜೀವವು ಯಾರಿಗೆ ಬೇಡವಾಗಿದೆ? ಸುಮ್ಮನೆ ಅಲಂಕಾರಗಳನ್ನು ಕೊಟ್ಟು ಸುರಕ್ಷಿತವಾಗಿ ಹೊರಟು ಹೋಗಿರಿ. ಪ್ರಾಣಕ್ಕಿಂತ ಆಭರಣಗಳೇನೂ ಹೆಚ್ಚಿನವಲ್ಲ. ಯಾಕೆ, ಬೇಗನೆ ಮಾತಾಡಿರಿ.

ನೀವು ನಾಲ್ಕೇ ಜನರಿರುವಿರಿ; ನಾವು ಐವತ್ತು ಜನರಿರುವೆವು. ಕುರಿಗಳನ್ನು ಕೊಯ್ದು ಚಲ್ಲುವಂತೆ ಮಾಡಬಾರದೆಂದು ನಿಮಗೆ ಸರಳವಾದ ದಾರಿಯನ್ನು ತೋರಿಸುವೆನು. ಬರಿಯ ಅಲಂಕಾರಗಳನ್ನು ಕೊಡುವಿರೋ, ಅಲಂಕಾರ-ಪ್ರಾಣಗಳೆರಡನ್ನೂ ಕೊಡುವಿರೊ?" ಎಂದು ತಿರಸ್ಕಾರಮಿಶ್ರಿತ ಗರ್ವೋದ್ಧತತನದಿಂದ ನುಡಿದನು

"ನಮ್ಮ ಖಡ್ಗದ ಪೆಟ್ಟು ಬಿದ್ದಿತೆಂದರೆ ಐವತ್ತು ಜನರಿರುವೆವೆಂಬ ಹೆಮ್ಮೆಯು ದೂರವಾಗುವದು." ಎಂದು ರಥರಕ್ಷಕರಲ್ಲೊಬ್ಬನು ಕಲಿತನದಿಂದ ಆಡಿದನು.

"ಅಬ್ಬಾ! ಅಂತಹ ಶೂರರೇನು ನೀವು? ಒಟ್ಟಿನ ಮೇಲೆ ನೀವು ಯಮಲೋಕದ ದಾರಿ ಸಾಧಿಸಬೇಕೆಂದು ಹೊಂಚು ಹಾಕಿರುವಿರೆಂತಾಯಿತು." ಎಂದು ಧೀರಸಿಂಹನ ಸಂಗಡಿಗರಲ್ಲೊಬ್ಬನಾದ ರಾಜಸಿಂಹನು ನುಡಿದನು.

"ಹೇಗಾದರೂ ನಮ್ಮ ಪ್ರಾಣವಿರುವವರೆಗೆ ಮಾತ್ರ ನಿಮಗೆ ಅಲಂಕಾರಗಳು ದೊರೆಯಲಾರವು"

"ಒಳ್ಳೇದು. ಇದು ನಮ್ಮ ಮೊದಲನೆಯ ಸುಲಿಗೆಯು. ಇದನ್ನು ನಾವು ಎಂದೂ ವ್ಯರ್ಥವಾಗಗೊಡುವದಿಲ್ಲ. ನಮ್ಮ ಒಡೆಯನ ಒಪ್ಪಿಗೆ ತೆಗೆದುಕೊಂಡೇ ರಕ್ತಪಾತಮಾಡಲಿಕ್ಕೆ ಪ್ರಾರಂಭಿಸುವದು ಉಚಿತವೆಂದು ತೋರುವದು." ಎಂದು ಧೀರಸಿಂಹನು ನುಡಿದು, ತನ್ನ ಸಂಗಡಿಗನಾದ ರಾಜಸಿಂಹನನ್ನು ಕುರಿತು—"ನಾನು ಜಗಮಲ್ಲರನ್ನು ಶೋಧಿಸಿಕೊಂಡು ಕರೆತರುತ್ತೇನೆ. ನಾನು ಬರುವವರೆಗೆ ಈ ಪ್ರವಾಸಿಗಳನ್ನು ಕಾಯ್ದಿರು ಸಾಧ್ಯವಾದ ಮಟ್ಟಿಗೆ ರಕ್ತಪಾತವಾಗದಂತೆ ಸಾವಧಗೊಂಡಿರು."

ಧೀರಸಿಂಹನು ಜಗಮಲ್ಲನನ್ನು ಶೋಧಿಸಲಿಕ್ಕೆ ಹೋದನು. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಒಡೆಯನಿಗೆ ಎಲ್ಲ ಸಮಾಚಾರವನ್ನು ತಿಳಿಸಿ, ಅವನನ್ನು ಅಲ್ಲಿಗೆ ಕರೆತಂದನು. ಅವರು ಬರುವಷ್ಟರಲ್ಲಿ ರಕ್ತಪಾತವಾಗಿ ಹೋಗಿತ್ತು! ರಥರಕ್ಷಕರಲ್ಲಿ ಇಬ್ಬರು ಗಾಯ ಹೊಂದಿ ಬಿದ್ದಿದ್ದರು. ಉಳಿದ ಇಬ್ಬರು ಸುಲಿಗೆಗಾರರೊಡನೆ ಕಾದತೊಡಗಿದ್ದರು. ಐವತ್ತು ಜನರೊಡನೆ ಕಾದುವ ಆ ರಜಪುತ ವೀರಾಗ್ರಣಿಗಳನ್ನು ನೋಡಿ ಜಗಮಲ್ಲನು ಕೌತುಕಪಟ್ಟನು. ಆಗ ಅವನು ತನ್ನ ಅನುಚರರನ್ನು ಕುರಿತು:"ಹಾ! ತಡೆಯಿರಿ, ಕೈ ಬಗಿಹಿಡಿಯಿರಿ; ಖಡ್ಗಗಳನ್ನು ಒರೆಗೂಣಿಸಿರಿ." ಎಂದು ಆಜ್ಞಾಪಿಸಿದನು.

ಜಗಮಲ್ಲನ ಆಜ್ಞೆಯಾದ ಕೂಡಲೆ ಅವನ ಅನುಯಾಯಿಗಳೆಲ್ಲರೂ ಹಿಂದೆ ಸರಿದು ತಮ್ಮ ಶಸ್ತ್ರಗಳನ್ನು ಒರೆಗೂಣಿಸಿದರು. ಆನಂತರದಲ್ಲಿ ಅವನು

ಕುದುರೆಯನ್ನು ಮುಂದೆ ಸಾಗಿಸಿ ರಥದ ಬಳಿಗೆ ಹೋಗಿ:—“ಈ ರಥದಲ್ಲಿ ಯಾರಿರುವರು?” ಎಂದು ಕೇಳಿದನು.

“ನಗರಕೋಶಕ್ಕೆ ಹೋಗುವ ಪ್ರವಾಸಿಗಳುಂಟು.” ರಥರಕ್ಷಕರಲ್ಲೊಬ್ಬನು ಉತ್ತರಕೊಟ್ಟನು

“ನೀವು ನಗರಕೋಶಕ್ಕೆ ಹೋಗುತ್ತಿರುವಿರೇನು? ನಿಮ್ಮ ಬಳಿಯಲ್ಲಿ ಅಮೌಲ್ಯ ವಸ್ತ್ರ-ಒಡವೆಗಳು ಇರುವವೆಂದು ತೋರುವದು ರಥದಲ್ಲಿ ಕುಳಿತ ತರುಣಿಯರಲ್ಲಿ ಒಬ್ಬಳಂತು ಬಂಗಾರದ ಆಭರಣವನ್ನೇ ಹಾಕಿಕೊಂಡಂತಾಗಿದೆ. ಒಟ್ಟಿನ ಮೇಲೆ ಇಂದಿನ ಮೊದಲನೆಯ ಬೇಟೆಯು ಲಾಭದಾಯಕವಾದಂತಾಯಿತು.” ಎಂದು ಧೀರಸಿಂಹನು ಉತ್ಸಾಹದಿಂದ ನುಡಿದನು.

“ಏಕಲಿಂಗಜಿಯು ಇಂದು ನಮ್ಮ ಮೇಲೆ ದಯಮಾಡಿದನು.” ರಾಜಸಿಂಹನು ಆನಂದಯುಕ್ತವಾಣಿಯಿಂದ ನುಡಿದನು.

ಅನಂತರದಲ್ಲಿ ಜಗಮಲ್ಲನು ರಥದೊಳಗಿನ ಇಬ್ಬರು ಸ್ತ್ರೀಯರಲ್ಲಿ ಅಮೌಲ್ಯವಾದ ಆ ಭೂಷಣಗಳನ್ನು ಧರಿಸಿದ ಯುವತಿಯನ್ನು ಕುರಿತು:—“ಮಾನಿನಿ! ನೀನು ನನ್ನ ಒಡಹುಟ್ಟಿದವಳಂತಿರುವೆ. ನಾನು ನಿನ್ನ ಶೀಲಕ್ಕೂ ಪಾವಿತ್ರ್ಯಕ್ಕೂ ಬಾಧೆಯುಂಟಾಗಬೇಕೆಂದು ಎಂದೂ ಇಚ್ಛಿಸುವದಿಲ್ಲ. ಇದು ನನ್ನ ಮೊದಲನೆಯ ಸುಲಿಗೆಯು ಆದ್ದರಿಂದ ನೀನು ಸುಮ್ಮನೆ ನಿನ್ನ ಆಭರಣಗಳನ್ನೆಲ್ಲ ನನ್ನ ವಶಕ್ಕೆ ಕೊಟ್ಟು ಮಾರ್ಗಕ್ರಮಣ ಮಾಡು. ನಿರರ್ಥಕವಾಗಿ ನಿನ್ನ ಅನುಚರರ ರಕ್ತಪಾನವಮಾಡಲಿಕ್ಕೆ ನನ್ನ ಮನಸ್ಸು ಹಿಂಜರಿಯುತ್ತದೆ. ನೀನು ನಿನ್ನ ಅಲಂಕಾರಗಳನ್ನು ಕೊಟ್ಟಿಯೆಂದರೆ ಯಾವ ಸಂಕಟವೂ ಇಲ್ಲ.”

ರಥದೊಳಗಿನ ಯುವತಿಯು ಭಯವಿಹ್ವಲಳಾದಳು ಅವಳು ಅಂಜಿಕೆಯಿಂದ ಥ ಥರನೆ ನಡುಗತೊಡಗಿದಳು. ಅಲಂಕಾರಗಳನ್ನು ಕೊಟ್ಟ ಹೊರತು ಗತ್ಯಂತರವಿಲ್ಲವೆಂಬದರ ನಂಬಿಗೆಯಾದ ಕೂಡಲೆ, ಅವಳು ತನ್ನ ಮೈಮೇಲಿನ ಒಂದೊಂದೇ ಒಡವೆಗಳನ್ನು ತೆಗೆದು ರಥದಲ್ಲಿಡತೊಡಗಿದಳು.

ಆ ತರುಣಿಯು ಅಲಂಕಾರಗಳನ್ನು ತೆಗೆದಿಡುವಾಗ ಜಗಮಲ್ಲನು ಅವಳ ಕಡೆಗೆ ಕೌತುಕಪೂರ್ಣ ದೃಷ್ಟಿಯಿಂದ ನೋಡತೊಡಗಿದನು. ನಗರಕೋಶ ರಾಜ್ಯದಲ್ಲಿ ಸುಲಿಗೆ ಮಾಡುತ್ತ, ರಾಣಾ ರಾಯಸಿಂಹನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂಬ ದೃಢಸಂಕಲ್ಪ ಮಾಡಿಕೊಂಡ ಅವನ ಮನಸ್ಸು ಈಗ ಯಾವ ವಿಷಯದಲ್ಲಿ ತೊಡಗಿರಬಹುದು? ಪತಿ ಮಂದಿರಕ್ಕೆ ಹೋಗುವವಳೂ, ಅನೇಕ ವಿಧದ ಸುಂದರ ಮನೋರಥಗಳಿಂದ ವ್ಯಾಪ್ತಳಾದವಳೂ, ಆಶಾಪೂರ್ಣಳೂ

ಆದ ಒಬ್ಬ ಗೃಹಿಣಿಯನ್ನು ದುರ್ವರ್ತಿಗೀಡು ಮಾಡ ವದೇ ಅವನ ಕಾರ್ಯವಾಗಿ ತ್ತೇನು? ಪ್ರತಾಪನಿಧಿಯಾದ ಆ ತೇಜಸ್ವಿಯು ಶೀಲವು ಇದೇ ಇರಬಹು ದೇನು? ಆ ಯುವತಿಯು ಒಂದೊಂದೇ ಆಭರಣಗಳನ್ನು ತೆಗೆಯತೊಡಗಿ ದ್ದಳು ಆಗ ಜಗಮಲ್ಲನ ಮನಸ್ಸು ಒಳ್ಳೆಯ ಗೊಂದಲದಲ್ಲಿ ಸಿಲುಕಿತ್ತು. ತಾನು ಧರ್ಮ-ನ್ಯಾಯ-ಸತ್ಯಗಳ ಕೊಲೆ ಮಾಡತೊಡಗಿರುವೆನೆಂದು ಅವನಿಗೆ ತಿಳಿಯಿತು. ಅನೇಕ ವಿಧವ ಸಾತ್ವಿಕ ವಿಕಾರಗಳಿಂದ ಅವನ ಮನಸ್ಸು ಜಾಗ್ರತ ವಾಯಿತು. ಅವನ ಕಠೋರ ಹೃದಯವು ಆರ್ದ್ರವಾಯಿತು. ಅವನ ಪ್ರಚಂಡ ವಾದ ದೇಹದಲ್ಲಿಯ ಕೋಮಲವಾದ ಅಂತಃಕರಣವು ಕಂಪಾಯಮಾನವಾ ಯಿತು. ತನ್ನಿಂದ ದೊಡ್ಡ ಪ್ರಮಾದವು ಘಟಿಸತೊಡಗಿರುವದೆಂದು ಅವನ ಮನವರಿಕೆಯಾಯಿತು. ರಾಣಾನ ಮೇಲಿನ ಸೇಡುತೀರಿಸಿಕೊಳ್ಳುವ ಭರದಲ್ಲಿ ತನ್ನಿಂದ ಕುಲಕಾಮಿನಿಯರ ವಿಡಂಬನೆಯಾಗತೊಡಗಿದ್ದಕ್ಕಾಗಿ ಅವನು ಅನು ತಾಪಗೊಂಡನು!

ರಥದೊಳಗಿನ ಸ್ತ್ರೀಯು ತನ್ನ ಎಲ್ಲ ಅಲಂಕಾರಗಳನ್ನು ರಥದೊಳಗೆ ಒಂದು ಸ್ಥಳದಲ್ಲಿಟ್ಟು, ಕೋಗಿಲೆಗಿಂತಲೂ ಶ್ರುತಿಮನೋಹರವಾದ ತನ್ನ ವಾಣಿಯಿಂದ:—“ಭವಾನಿಸಿಂಗ! ಈ ಎಲ್ಲ ಅಲಂಕಾರಗಳನ್ನು ಸರದಾರರ ಸ್ವಾಧೀನಪಡಿಸು!” ಎಂದು ನುಡಿದಳು.

ತರುಣಿಯ ವಾಣಿಯು ಮಂಜುಳವಿದ್ದರೂ ಹೃದಯವನ್ನು ಕರಗಿಸು ವಂತಹದಿತ್ತು. ಅವಳ ದೈನ್ಯಯುಕ್ತವಾದ ವಾಣಿಯನ್ನು ಕೇಳಿದ ಮೇಲಂತೂ ಜಗಮಲ್ಲನ ವಿಚಾರಗಳು ಒಮ್ಮೆಲೆ ಬೇರೆಯಾದವು. ಆಗ ಅವನು ದಯಾರ್ದ್ರತೆ ಯಿಂದ:—“ನಿನ್ನ ಈ ಆಭರಣಗಳು ನನಗೆ ಬೇಡ. ನೀನು ಇವುಗಳನ್ನು ಮೈಮೇಲೆ ಧರಿಸು”

ತರುಣಿಯು ವಿಸ್ಮಿತಳಾದಳು. ಸುಲಿಗೆಯೇ ಮುಖ್ಯ ಉದ್ದೇಶವೆಂದು ತಿಳಿದು, ವನವನಗಳಲ್ಲಿ ತಂಡಗಟ್ಟಿಕೊಂಡು ತಿರುಗಾಡುವ ಈ ನಾಯಕನು ಕೈಗೆ ಬಂದ ಅಮೌಲ್ಯವಾದ ಆ ಭೂಷಣಗಳನ್ನು ನಿರಾಕರಿಸಿದ್ದನ್ನು ನೋಡಿ ಅವಳು ವಿಚಾರಕ್ಕೀಡಾದಳು. ಅವನು ವಿನೋದಕ್ಕಾಗಿ ಹೀಗೆ ಆಡುತ್ತಿರ ಬಹುದೆಂದು ಆ ತರುಣಿಯು ಗ್ರಹಿಕೆಯಾಯಿತು. ಅವಳು ಸಿಟ್ಟಿನಿಂದ:-“ಸರ ದಾರರೇ, ಸುಮ್ಮನೆ ಏಕೆ ಉಪಹಾಸ ಮಾಡುವಿರಿ? ನಾನು ನಿಮ್ಮ ಕೈಯಲ್ಲಿ ಸಿಲುಕಿರುವದರಿಂದ ನೀವು ಕೇಳಿದಂತೆ ಕೇಳಬೇಕಾಗಿದೆ. ನನಗೆ ಈ ಅಲಂಕಾರ ಗಳ ಮೇಲೆ ವ್ಯಾಮೋಹವಿಲ್ಲ; ಇವುಗಳನ್ನು ತೆಗೆದುಕೊಳ್ಳುವದರಿಂದ ನನ ಗೇನೂ ವ್ಯಥೆಯಾಗುವದಿಲ್ಲ.”

“ಕುಮಾರಿ, ನನಗೆ ಈ ಸುಲಿಗೆಯು ಬೇಕಿಲ್ಲ. ನೀನು ಈಗ ಪತಿಮಂದಿರಕ್ಕೆ ಹೊರಟಿರುವೆ. ನಿನ್ನ ಅಲಂಕಾರಗಳನ್ನು ಸೆಳೆದುಕೊಂಡು ಕಳಿಸಿದರೆ, ನನ್ನ ಮನಸ್ಸು ಸಮಾಧಾನಗೊಳ್ಳಲಾರದು. ನೀನು ಮೇಲು ಮಾತಿಗಾಗಿ ಅಲಂಕಾರಗಳ ಮೇಲೆ ವ್ಯಾಮೋಹವಿಲ್ಲೆಂದು ಆಡುತ್ತಿರುವೆ. ನೀನು ನನಗೆ ಮಗಳೆಂತಿರುವೆ. ಚಲ್ಲೀ ಮುಹೂರ್ತದ ಮೇಲೆ ದೊರೆತ ಈ ಸುಲಿಗೆಯನ್ನು ಕುಮಾರಿಯಾದ ನಿನಗೆ ಪಾರಿತೋಷಕವೆಂದು ಕೊಡುವೆನು. ಮಗಳೇ, ನೀನು ಈ ಎಲ್ಲ ಭೂಷಣಗಳನ್ನು ಧರಿಸಮ್ಮಾ!”

ಆ ತರುಣಿಯು ಮಂಗಾಣಾದಾದಳು. ಅವಳಿಗೆ ಸತ್ಯಸ್ಥಿತಿಯೇನೆಂಬದೇ ಗೊತ್ತಾಗದಾಯಿತು. ಅವಳು ನಿರುತ್ತರಳಾಗಿ ಸುಮ್ಮನೆ ಕುಳಿತಳು.

ಆ ತರುಣಿಯು ಏನೂ ಮಾತಾಡದೆ ಕುಳಿತದ್ದನ್ನು ನೋಡಿ, ತನ್ನ ಮಾತಿನಲ್ಲಿ ಅವಳ ನಂಬಿಗೆಯಾಗಿಲ್ಲವೆಂದು ಜಗಮಲ್ಲನಿಗೆ ಗೊತ್ತಾಯಿತು. ತಾನು ಮನಃಪೂರ್ವಕವಾಗಿ ಆಡುವೆನೆಂಬದು ಅವಳಿಗೆ ಗೊತ್ತಾಗಬೇಕೆಂಬ ಉದ್ದೇಶದಿಂದ ಜಗಮಲ್ಲನು ಗಂಭೀರನಾಗಿ:-“ಮಾನಿನಿ! ಈ ರಜಪೂತ ವೀರನ ಮಾತುಗಳು ಬಾಲಭಾಷೆಯಲ್ಲ; ಅವು ಸತ್ಯವಾದವುಗಳಿರುವವು. ನಾನು ನಿನಗೆ ಈ ಭೂಷಣಗಳನ್ನು ನಿಜವಾಗಿ ಪಾರಿತೋಷಕವಿತ್ತಿರುವೆನು. ನೀನಾಗಿ ತೆಗೆದುಕೊಳ್ಳಲಿಕ್ಕೆ ಸಂಕೋಚವೆನಿಸುತ್ತಿದ್ದರೆ ನಾನೇ ಕೈಮುಟ್ಟಿ ಕೊಡುವೆನು. ಪುತ್ರೀ, ನಿನ್ನ ಮುಖವನ್ನಷ್ಟು ತೋರಿಸು. ಮಗಳ ಮೋರೆಯನ್ನು ನೋಡಬೇಕೆಂಬ ವಾತ್ಸಲ್ಯವು ಹುಟ್ಟಿದೆ.” ಎಂದು ಹೇಳಿ, ಜಗಮಲ್ಲನು ರಥವ ಬಳಿಗೆ ಹೋದನು.

ತನ್ನ ಮೇಲೆ ಉಪಕಾರ ಮಾಡಿದ ಮಹಾನುಭಾವನಿಗೆ ಮುಖವನ್ನು ತೋರಿಸಲಿಕ್ಕೆ ರಥದೊಳಗಿನ ತರುಣಿಗೆ ಸಂಕೋಚವೆನಿಸಲಿಲ್ಲ. ಅವಳು ತನ್ನ ಮುಖದ ಮೇಲಿನ ಆವರಣವನ್ನು ದೂರ ಮಾಡಿದಳು. ಜಗಮಲ್ಲನು ಆಗ ಅಲಂಕಾರಗಳನ್ನು ತನ್ನ ಕೈಯಲ್ಲಿ ತೆಗೆದುಕೊಳ್ಳುವದರಲ್ಲಿ ತೊಡಗಿದ್ದನು. ಅವನು ಆ ಅಲಂಕಾರಗಳನ್ನು ತೆಗೆದುಕೊಂಡು:—“ಮಗಳೆ, ನನ್ನ ಈ ಅಲ್ಪ ಪಾರಿತೋಷಕವನ್ನು ಸ್ವೀಕರಿಸು.” ಎಂದು ನುಡಿದು, ಆ ಅಲಂಕಾರಗಳನ್ನು ಆ ತರುಣಿಯ ಕೈಯಲ್ಲಿ ಕೊಟ್ಟು, ಅವಳ ಮುಖವನ್ನು ನಿರೀಕ್ಷಿಸಿದನು.

“ಯಾರು? ಕಲ್ಯಾಣಿ! ಪ್ರಿಯತಮೆ—”

ಜಗಮಲ್ಲನು ಸ್ತಂಭಿತನಾದನು. ಅವನು ಶಿಲಾಪ್ರತಿಮೆಯಂತೆ ನಿಂತು ಅವಳ ಮುಖವನ್ನು ನೋಡತೊಡಗಿದನು!

“ಹೃದಯೇಶ್ವರಾ!” ರಥದೊಳಗಿನ ಸ್ತ್ರೀಯ ಮುಖದಿಂದ ಉದ್ಗಾರವು

ಹೋಂಟಿತು.

"ಛೆ! ಈಗ ಆ ಸಂಬಂಧವಿಲ್ಲ ನೀನು ನನಗೆ ಮಗಳ ಸಮಾನಳಿರುವೆ. ಕಲ್ಯಾಣಿ, ಪ್ರಿಯ ಪುತ್ರಿ, ಕಲ್ಯಾಣಿ! ನೀನು ಅನುಚಿತವಾಗಿ ಸಂಬೋಧಿಸ ಬೇಡ" ಎಂದು ಜಗಮಲ್ಲನು ನುಡಿದನು:—"ಹಾಯ! ಹಾಯ! ವಿಧಾತಾ! ನಿನ್ನ ಕೃತಿಯು ಇದೆಂತಹದು? ಇದೇನು ಅನರ್ಥವನ್ನು ಮಾಡಿಬಿಟ್ಟೆ? ಕಲ್ಪನಾ ತೀತವಾದ ವಿಸ್ಮಯಜನಕ ಕೃತಿಯು! ಕಲ್ಪನಾತೀತ ಮನೋವ್ಯಥೆಯು! ಕಲ್ಪನಾತೀತ ದುಃಖವು! ಹಾಯ! ಹಾಯ!!"

ರಥದೊಳಗಿನ ಸ್ತ್ರೀಯು ಗದ್ಗದ ವಾಣಿಯಿಂದ:—"ನಾಥನೆ, ಅರಿಯದೆ ಸಂಬೋಧಿಸಿದ್ದನ್ನು ದೃಢವೆಂದು ತಿಳಿಯಬೇಡಿರಿ. ಅನ್ಯಾಯದ ರಾಜನಾದ ರಾಯಸಿಂಹನು ನನ್ನನ್ನು ಕರೆಯಿಸಿರುವನು ನನ್ನನ್ನು ನೀವು ಉದ್ಧರಿಸ ಬೇಕು ನಿಮಗೆ ನಾನು ಆತ್ಮಾರ್ಪಣೆ ಮಾಡಿರುವೆನು. ನನ್ನ ಮೇಲೆ ನಿಮ್ಮ ಪ್ರೇಮವಿರುವದೆಂಬದನ್ನು ನಾನು ಬಲ್ಲೆನು. ನೋಡದೆ ಸಂಭೋಧಿಸಿದ್ದಕ್ಕೆ ನೀವು ಮಹತ್ವಕೊಡಬೇಡಿರಿ"

"ಕಲ್ಯಾಣಿ!" ಜಗಮಲ್ಲನು ನಿಟ್ಟುಸಿರು ಬಿಟ್ಟು:—"ನೀನು ಅನ್ಯಥಾ ಮಾತಾಡಬೇಡ ನೀನು ರಾಯಸಿಂಹನ ವಧುವು. ನನ್ನ ಕುಮಾರಿಯು. ಮಗಳೇ, ಹೋಗಿ ಬಾರಮ್ಮಾ, ಹೋಗಿಬಾ! ನಿನಗೆ ಮಂಗಳವಾಗಲಿ!"

ಜಗಮಲ್ಲನು ಕುದುರೆಯನ್ನೇರಿದನು. ಮುಂದೆ ಹೋಗುವದಾಗ ಲೊಲ್ಲದು. ಶೂರ ವೀರ ಯೋದ್ಧಾ ಜಗಮಲ್ಲನು ಕುದುರೆಯ ಆಯಾಲದ ಮೇಲೆ ಮುಖವಿಟ್ಟು ಬಾಲಕರಂತೆ ದೊಡ್ಡ ದನಿಯಿಂದ ರೋದಿಸತೊಡಗಿದನು! "ವಿಧಾತಾ, ಇದೇನು ಮಾಡಿದೆ!" ಎಂಬ ದುಃಖೋದ್ಗಾರವು ಅವನ ಮುಖ ದಿಂದ ಹೊರಡತೊಡಗಿತ್ತು.

---

## ಏಕನಿಷ್ಠ ಹೃದಯ.

ಆಕಾಶಸ್ಥ ಗ್ರಹಗಳಾದ ಸೂರ್ಯ-ಚಂದ್ರರು ನಿಸರ್ಗದ ಪ್ರತಿನಿಧಿಯಂತೆ ಕಾಣತೊಡಗಿದ್ದರು. ಒಂದು ಕಡೆಯಲ್ಲಿ ಪಥಶ್ರಾಂತ ಭಾಸ್ಕರನು ಅಸ್ತಮಾನ ನಾಗತೊಡಗಿದ್ದನು; ಮತ್ತೊಂದು ಕಡೆಯಲ್ಲ ಪ್ರವಾಸದ ನವೋತ್ಸಾಹದಿಂದ ಚಂದ್ರನು ಉದಯಾಚಲವನ್ನೇರಿದ್ದನು. ಬೆಳ್ಳಿ-ಬಂಗಾರಗಳ ಸಮ್ಮಿಶ್ರಣದ ಬಣ್ಣವು ಆಕಾಶದಿಂದ ಭೂಪ್ರದೇಶದ ಮೇಲೆ ಬಿದ್ದಂತೆ ಕಾಣಹತ್ತಿತ್ತು ನಗ ಕೋಶದ ರಾಣಾ ರಾಯಸಿಂಹನ ಸುಂದರವಾದ ಉದ್ಯಾನವು ಈ ಬಣ್ಣದಿಂದ

ವಿಲೇಪನ ಹೊಂದಿದಂತೆ ಕಾಣತೊಡಗಿತ್ತು. ಉಪವನದ ಮೊದಲೇ ಮೋಹಕವಾದ ನೋಟವು ಈ ಹೊಸ ಬಣ್ಣದಿಂದ ಮತ್ತಿಷ್ಟು ಆಹ್ಲಾದಕಾರಕವಾಗಿತ್ತು. ಇಂತಹ ಶಾಂತಿಮಯ ಸಂಧ್ಯಾಸಮಯದಲ್ಲಿ ರಾಣಾ ರಾಯಸಿಂಹನು ರಾಜಶಾಸನದ ಅಸಹ್ಯವಾದ ಭಾರವನ್ನು ಕಡಿಮೆಮಾಡಿಕೊಳ್ಳುವದಕ್ಕಾಗಿ ತನ್ನ ಸಭಾಸದರೊಡನೆ ಆ ಉಪವನದಲ್ಲಿ ಕುಳಿತುಕೊಂಡಿದ್ದನು.

ಉಪವನದ ಮಧ್ಯಭಾಗದಲ್ಲಿ ಬಿಳಿಯ ಕಲ್ಲಿನ ಒಂದು ವೇದಿಕೆಯಿತ್ತು. ಆ ವೇದಿಕೆಯ ಮೇಲೆ ಜಯಪುರದ ರತ್ನಗಂಬಳಿಯು ಹಾಸಲ್ಪಟ್ಟಿತ್ತು. ಅದರ ಮೇಲೆ ಅಲ್ಲಲ್ಲಿ ರೇಶಿಮೆಯ ಹಾಗು ಕಿನಖಾಪಿನ ದಿಂಬುಗಳು ಇಡಲ್ಪಟ್ಟಿದ್ದವು. ಆ ವೇದಿಕೆಯ ಮೇಲೆ ಹಾಕಿದ ಉತ್ಕೃಷ್ಟಾಸನದಲ್ಲಿ ರಾಣಾ ರಾಯಸಿಂಹನು ಕುಳಿತುಕೊಂಡು ತನ್ನ ರಾಜಪರಿವಾರದೊಡನೆ ಒಂದು ಗಹನವಾದ ವಿಷಯದ ಬಗ್ಗೆ ಮಾತಾಡುತ್ತ ಕುಳಿತಿದ್ದನು. ಮನೋಹರವೂ ಸುಶೀತಲವೂ ಆದ ಉದ್ಯಾನವೂ, ಅಸ್ತಮಾನಭಾಸ್ಕರನ ಸ್ವರ್ಣಮಯ ರಶ್ಮಿಜಾಲವೂ, ಉದಯಮಾನ ಚಂದ್ರಮನ ಉಜ್ವಲ ಶ್ವೇತನಿರ್ಮಲ ಮುಖವೂ, ಶಾಂತಿಪೂರ್ಣವಾದ ಆ ಸಂಧ್ಯಾಸಮಯವೂ ರಾಣಾನ ಅಶಾಂತಿಪೂರ್ಣವಾದ ಹೃದಯವನ್ನು ಪ್ರಶಾಂತಗೊಳಿಸಲಿಕ್ಕೆ ಅಸಮರ್ಥವಾಗಿದ್ದವು.

ರಾಣಾನ ಬಳಿಯಲ್ಲಿ ಬಲಗಡೆಗೆ ನಗವೇಶದ ಮುಖ್ಯ ಸೇನಾಪತಿಯಾದ ವೀರಾಗ್ರಣಿ ಮಯೂರಧ್ವಜನು ಕುಳಿತಿದ್ದನು. ಅವನು ವೀರತ್ವದ ಮೂರ್ತಿಮಂತ ಪ್ರತಿನಿಧಿಯಾಗಿದ್ದನು. ರಾಣಾನ ಎದುರಿಗೆ ಮುಖ್ಯ ಅಮಾತ್ಯರಾದ ಅಚಲಸಿಂಹ, ರಾಜಬಾಹು, ದ್ಯುಮತ್ಸಿಂಹ ಈ ಮೂವರು ಕುಳಿತುಕೊಂಡಿದ್ದರು. ಈ ನಾಲ್ವರೂ ಮಂತ್ರಿ-ಸೇನಾಪತಿಗಳ ದೃಷ್ಟಿಯು ರಾಣಾಜಿಯ ಮುಖದ ಕಡೆಗೆ ಸ್ಥಿರವಾಗಿತ್ತು. ಪ್ರಭುವಿನ ಮುಖಚಿಹ್ನವು ಚಿಂತಾಯುಕ್ತವಾಗಿದ್ದಂತೆ ತೋರುತ್ತಿದ್ದರಿಂದ ಅವರ ಮನಸ್ಸುಗಳು ವಿಚಾರಕ್ಕೊಳಗಾಗಿದ್ದವು. ಕೆಲವು ವೇಳೆಯ ವರೆಗೆ ಸ್ತಬ್ಧರಾಗಿದ್ದರು. ಆ ಶಾಂತಿಮಯ ಸ್ಥಿತಿಯು ಅವರ ಮನಸ್ಸಿಗೆ ಸರಿಯಾಗಿ ಕಾಣಲಿಲ್ಲ. ರಾಣಾನ ಮನಸ್ಸು ಯಾವ ವಿಧದ ಯೋಚನೆಯಲ್ಲಿ ತೊಡಗಿರುವದೆಂಬದನ್ನು ತಿಳಿದುಕೊಳ್ಳಲಿಕ್ಕೆ ಆ ನಾಲ್ವರೂ ಆತುರರಾಗಿದ್ದರು. ಯಾವದೊಂದು ನೆವತೆಗೆದು ಭಾಷಣವನ್ನು ಪ್ರಾರಂಭಿಸಬೇಕೆಂಬ ಉತ್ಸಾಹದಿಂದ ರಾಜಬಾಹು ಮಂತ್ರಿಯು ರಾಣಾನನ್ನು ಕುರಿತು:-

“ಮಹಾರಾಜರೆ, ಇಡಿಯ ದಿವಸದ ಶ್ರಮವನ್ನೂ ಮನಸ್ಸಿನ ಉದ್ವಿಗ್ನತೆಯನ್ನೂ ದೂರ ಮಾಡುವದಕ್ಕಾಗಿ ಈಶ್ವರನು ಸಾಯಂಕಾಲದ ಪ್ರಶಾಂತ ವೇಳೆಯನ್ನು ನಿರ್ಮಾಣ ಮಾಡಿ, ಮನುಷ್ಯರ ಮೇಲೆ ಎಂತಹ ಉಪಕಾರ

ಮಾಡಿರುವನು ನೋಡಿರಿ!”

“ಮನುಷ್ಯರಿಗೆ ಶಾಂತಿ-ಸುವಿಚಾರಗಳ ಕಾಣಿಕೆಯನ್ನು ಕೊಡುವದ ಕ್ಕಾಗಿ ಪರಮಾತ್ಮ ಪ್ರೇಷಿತ ದೂತನಂದ ಶ್ವೇತ ಚಂದ್ರಮನು ನಭಪ್ರಾಂಗಣ ದಲ್ಲಿ ಆನಂದದಿಂದ ಹೇಗೆ ನಗುತ್ತಿರುವನು ನೋಡಿದಿರಾ? ಈಶ್ವರೀ ಸೃಷ್ಟಿ ಯಲ್ಲಿ ದುಃಖದ ಲವಲೇಶವಾದರೂ ಇರುವದಿಲ್ಲೆಂದು ಸದ್ಯದ ಸ್ಥಿತಿಯಲ್ಲಿ ಹೇಳಲಿಕ್ಕೆ ಧೈರ್ಯವಾಗುತ್ತಲಿದೆ.” ಎಂದು ಅಚಲಸಿಂಹನು ಹೇಳಿದನು.

ಅನಂತರದಲ್ಲಿ ದ್ಯುಮತ್ಸೇನನು:—“ಈ ರಾಜೋದ್ಯಾನದೊಳಗಿನ ವಿಶ್ರಾಂತಿದಾಯಕ ಮಾರುತನು ಇಡಿಯ ದಿನದ ಧರಣಿ ತಾಪ ಹರಣ ಮಾಡಿ ಶೀತಲತೆಯನ್ನುಂಟು ಮಾಡಿರುವನು.”

ಮಂತ್ರಿಗಳು ಹೀಗೆ ಮಾತಾಡುತ್ತಿದ್ದರೂ ರಾಣಾನ ಸಮಾಧಿ ಭಂಗ ವಾಗಲಿಲ್ಲ. ಮಯೂರಧ್ವಜಸೇನಾಪತಿಯು ಇನ್ನೂ ಅವನ ಮುಖಾವಲೋಕ ನದಲ್ಲಿಯೆ ಮಗ್ನನಾಗಿದ್ದನು.

ರಾಣಾ ರಾಯಸಿಂಹನು ಇಷ್ಟು ವೇಳೆಯ ವರೆಗೆ ದಿಂಬಿಗೆ ಆತು ಕುಳಿತಿ ದ್ದನು. ಅವನು ಎದ್ದು ಆಕಾಶದ ಕಡೆಗೆ ಮುಖವನ್ನು ಹೊರಳಿಸಿ ರಜನೀ ನಾಥನನ್ನು ನಿರೀಕ್ಷಿಸುತ್ತ:—“ಈ ಸುಧಾಕರನಲ್ಲಿ ಕಲಂಕವಿರದಿದ್ದರೆ ಎಷ್ಟು ಚನ್ನಾಗಿ ಆಗುತ್ತಿತ್ತು! ಎವರಿನ ಗುಲಾಬಿಯ ಗಿಡಗಳಿಗೆ ಮುಳ್ಳುಗಳಿರದಿದ್ದರೆ ಪುಷ್ಪಗಳ ಸುಗಂಧಕ್ಕೂ ಸೌಂದರ್ಯಕ್ಕೂ ಏನು ವ್ಯತ್ಯಾಸವಾಗುತ್ತಿತ್ತು? ಸಂಸಾರದೊಳಗಿನ ಸುಖದಲ್ಲಿ ದುಃಖದ ವಿಷಾದಪೂರ್ಣವಾದ ಅಂಶವು ಇರದಿದ್ದರೆ ಮನುಷ್ಯಜೀವನವು ಅಕ್ಷಯ್ಯವಾಗಿ ಸುಖಮಯವಾಗುತ್ತಿತ್ತಲ್ಲ!”

“ಮಹಾರಾಜರೆ!” ಸೇನಾಪತಿ ಮಯೂರಧ್ವಜನು ಸಂಶಯ ಮುದ್ರೆ ಯಿಂದ:—“ಭಾಷಣ ತಾತ್ಪರ್ಯವು ತಿಳಿಯಲಿಲ್ಲ.”

“ಮಹಾಸೇನಾಪತಿಗಳೆ! ರಾಣಾನು ಗಂಭೀರತೆಯಿಂದ:—“ನಿಮಗೆ ತಾತ್ಪರ್ಯವು ತಿಳಿಯಲಿಲ್ಲವೆ? ಹಾಗಾದರೆ ಕೇಳಿರಿ. ನನ್ನ ರಾಜಶಾಸನ ರೂಪಿ ಯಾದ ಚಂದ್ರನು ನಿಷ್ಕಲಂಕನಿರುವನೆ? ನನ್ನ ರಾಜಶಾಸನಕ್ಕೆ ಪುಷ್ಪದ ಉಪಮೆಯನ್ನು ಕೊಟ್ಟರೂ ಅದು ಕಂಟಕಹೀನವಿರುವದೆ?”

“ಮಹಾರಾಣಾಜಿ, ಚಂದ್ರನಿಗೆ ಕಲಂಕವೂ ಪುಷ್ಪಕ್ಕೆ ಮುಳ್ಳುಗಳೂ ಈಶ್ವರೀ ನಿಯಮದಿಂದ ಉತ್ಪನ್ನವಾಗಿರುವವು.” ಎಂದು ಮಯೂರಧ್ವಜನು ಉತ್ತರವಿತ್ತನು.

“ಹೇಗಾದರೂ ಆ ಮುಳ್ಳುಗಳು ಒಮ್ಮೆಲೆ ನಿರ್ಮೂಲನವಾಗದೆ ಇರುವದಿಲ್ಲ.”

“ಸರಕಾರ!” ಮಹಾಸೇನಾಪತಿಯು ಉಚ್ಚಸ್ವರದಿಂದ:—“ತಾವು

ಇಂತಹ ವ್ಯಥಾಪೂರ್ಣವಾದ ಮಾತುಗಳನ್ನಾಡುವಿರೇಕೆ? ಆ ಮುಳ್ಳುಗಳು ನಮ್ಮಂತಹ ಸೇವಕರಿಗೆ ಎಷ್ಟಾದರೂ ನಡಲಿ;- ಆದರೆ ಅವು ಪ್ರಜಾನಿಷ್ಠರಾದ ತಮಗೂ, ರಾಜನಿಷ್ಠರಾದ ಪ್ರಜೆಗಳಿಗೂ ತಗಲದಂತೆ ಮಾಡಲಿಕ್ಕೆ ಏಕನಿಷ್ಠ ಸೇವಕರಾದ ನಾವು ಸಿದ್ಧರಿರುವೆವು;"

"ಸೇನಾಪತಿಗಳೇ!" ರಾಣಾನು ಶುಷ್ಕಭಾವದಿಂದ ನಕ್ಕು;—"ಈ ಮುಳ್ಳಿನ ಉಪಮೆಯನ್ನು ಯಾರಿಗೆ ಕೊಡುವೆನೆಂಬದರ ಕಲ್ಪನೆಯು ನಿಮಗಿರುವದೇನು?"

"ಆ ಉಪಮೆಯು ಬೇಕಾದವರಿಗೆ ಇರಲಿ. ನಾನು ಅವರಿಗೆ ಬಿಗಿ ಮಾಡಲಿಕ್ಕೆ ಸಿದ್ಧನಿರುವೆನು."

"ರಾಜ್ಯದಲ್ಲಿ ದಿನದಿನಕ್ಕೆ ಸುಲಿಗೆಯ ಉಪದ್ರವವು ಹೆಚ್ಚಾಗುತ್ತ ನಡೆದಿದೆ. ಪ್ರಜಾಜನರ ವಿತ್ತ-ಜೀವಿತಗಳು ಗಂಡಾಂತರಕ್ಕೀಡಾಗಿರುವವು. ರಾಜ್ಯದಲ್ಲಿ ಹೀಗೆ ಪೀಡೆಯು ಹೆಚ್ಚಾಗಲಿಕ್ಕೆ ಯಾರು ಕಾರಣರಾಗಿರುವರೆಂಬದನ್ನು ನೀವು ಬಲ್ಲಿರಾ? ಡಾಕು ಜಗಮಲ್ಲನ ಪೀಡೆಯು ವರ್ಧಮಾನ ಸೂರ್ಯಪ್ರಕಾಶದಂತೆ ಪ್ರತಿಕ್ಷಣಕ್ಕೆ ಬೆಳೆಯುತೊಡಗಿರುವದು. ಅವನೇ ನಮ್ಮ ರಾಷ್ಟ್ರಕ್ಕೆ ಕಂಟಕರೂಪಿಯಾಗಿರುವನು."

"ಮಹಾರಾಣಾಜೀ! ಅಗ್ನಿ, ರೋಗ, ಶತ್ರು ಇವು ಮೂರನ್ನೂ ಬೆಳೆಯಗೊಡಬಾರದು. ಇವುಗಳು ಬೆಳೆದರೆ ಯಾವ ವೇಳೆಯಲ್ಲಿ ಪ್ರಾಣಘಾತ ಮಾಡುವವೆಂಬದರ ನಿಯಮವಿಲ್ಲ." ರಾಜಬಾಹು ಮಂತ್ರಿಯು ತನ್ನ ಅಭಿಪ್ರಾಯವಿತ್ತನು.

"ಮಂತ್ರಿ-ಸೇನಾನಾಯಕರೆ!" ರಾಣಾನು ಗಾಂಭೀರ್ಯದಿಂದ:—"ಇಂತಹ ರಾಷ್ಟ್ರಹಿತೈಷಿಗಳಾದ ರಾಜಪರಿವಾರವು ಯಾವಾಗಲೂ ನನ್ನ ಬಳಿಯಲ್ಲಿರುತ್ತಿದ್ದರೂ ಅತ್ಯಾಚಾರಿಗಳೂ ಸುಲಿಗೆಗಾರರೂ ಆದ ಜನರ ಪ್ರತೀಕಾರ ಮಾಡಲಿಕ್ಕೆ ಯಾವ ಬಗೆಯ ಉಪಾಯವೂ ಯೋಜಿಸಲ್ಪಡದ್ದನ್ನು ನೋಡಿ ವಿಸ್ಮಯವಾಗುತ್ತಲಿದೆ. ನನ್ನ ಹೃದಯದಲ್ಲಿ ಹೊತ್ತುತ್ತಿರುವ ಅಗ್ನಿಯನ್ನು ಶಾಂತಮಾಡುವದಕ್ಕಾಗಿ ನೀವು ಯಾವ ವಿಧದ ಪ್ರಯತ್ನ ಮಾಡಿರುವಿರೆಂಬದನ್ನು ಹೇಳಿರಿ. ರಾಜಶಾಸನವು ರೋಗಯುಕ್ತವಾಗಿ ಶಿಥಿಲವಾಗತೊಡಗಿದೆ. ಅದನ್ನು ಆರೋಗ್ಯಪಡಿಸುವದಕ್ಕಾಗಿ ಇಷ್ಟರಲ್ಲಿ ಯಾವ ಹಂಚಿಕೆ ಮಾಡಲ್ಪಟ್ಟದ್ದೂ ನನ್ನ ದೃಷ್ಟಿಗೆ ಬಿದ್ದಿಲ್ಲ. ನನ್ನ ಪ್ರೀತಿಯ ಸೇನಾಪತಿಗಳಾದ ಈ ಮಯೂರಧ್ವಜರ ಬಂಧು ಜಗಮಲ್ಲನು ರಾಷ್ಟ್ರದ ಹಾಗು ನನ್ನ ಕಟ್ಟುನಿಟ್ಟನ ವೈರಿಯಾಗಿರುವನು. ಅವನು ರಾಜ್ಯದಲ್ಲಿ ಅವ್ಯಾಹತವಾಗಿ ಕೊಲೆ-

ಸುಲಿಗೆ ನಡೆಯಿಸಿದ್ದರೂ, ರಾಜಪರಿವಾರದಿಂದ ಅವನ ಉಪೇಕ್ಷೆಯಾಗತೊಡ ಗಿದೆ. ಇದು ಯಾತರ ಲಕ್ಷಣವು? ಅವನನ್ನು ಸೆರೆಹಿಡಿದು ತರುವ ವಿಷಯ ದಲ್ಲಿ ನೀವು ಯಾವ ಉಪಾಯ ಮಾಡಿರುವಿರೆಂಬದನ್ನು ಹೇಳಿರಿ.”

ರಾಣಾನು ಹೀಗೆ ನುಡಿಯುವಾಗ ಅವನ ಹೃದಯವು ವ್ಯಾಕುಲ ವಾಗಿತ್ತು. ಕೊನೆಗೆ ಅವನ ಕಂಠವು ಸದ್ಗದಿತವಾಯಿತು. ಮಯೂರಧ್ವಜನು ಈ ಭಾಷಣವನ್ನು ಕೇಳಿ ಬಹಳೇ ತೊಂದರೆಗೀಡಾದನು. ಅವನ ಅಂತಃಕರಣ ದಲ್ಲಿ ಅನೇಕ ವಿಧದ ವಿಚಾರ ತರಂಗಗಳ ಅಲೆದಾಟಕ್ಕೆ ಪ್ರಾರಂಭವಾಯಿತು. ಲಕ್ಷಾವಧಿ ಆತ್ಮಗಳನ್ನು ಪಾಲನೆ ಮಾಡುವವನೂ, ಪ್ರಜೆಗಳ ಮುಕುಟ ಮಣಿಯೂ, ದೇವಸಮಾನ ಪೂಜ್ಯನೂ ಆದ ರಾಣಾನ ಹೃದಯದಲ್ಲಿಯ ವಿಷ ಪ್ರಾಯವಾದ ವ್ಯಥೆಯ ವಿಷಯವಾಗಿ ವಿಚಾರ ಮಾಡುತ್ತಿರುವಾಗ, ಸೇನಾ ಪತಿಯ ಹೃದಯವು ಅತ್ಯಂತ ವ್ಯಾಕುಲವಾಯಿತು. ಅವನ ಎದೆಯು ‘ಧಕ್-ಧಕ್’ ಎಂದು ಹಾರತೊಡಗಿತು. ಶ್ವಾಸಗತಿಯು ಹೆಚ್ಚಾಯಿತು. ದೇಹದೊಳ ಗಿನ ಪ್ರತಿಯೊಂದು ಧಮನಿಯಲ್ಲಿ ರಕ್ತವು ಒತ್ತರದಿಂದ ಹರಿಯತೊಡಗಿತು. ಅವನ ತುಟಿಗಳು ಒಂದನ್ನೊಂದು ಗಟ್ಟಿಯಾಗಿ ಹಿಡಿದವು. ದೃಷ್ಟಿಯು ವೀರ ತೆಯ ಓಜಸ್ವಿಯಾದ ಛಾಯೆಯನ್ನು ಪಸರಿಸಿತು. ಖಡ್ಗವನ್ನು ಹಿಡಿಯುವದ ಕ್ಕಾಗಿ ಅವನ ಕೈಯು ಉತ್ಸುಕವಾಯಿತು.

“ರಾಣಾಜಿ!” ಮಯೂರಧ್ವಜನಿಂದ ಯಾವ ಉತ್ತರವೂ ಹೊರಡ ದ್ದನ್ನು ನೋಡಿ, ಅಚಲಸಿಂಹನು ಶಾಂತವಾಣಿಯಿಂದ:—“ಜಗಮಲ್ಲನೆಂದರೆ ಸಾಮಾನ್ಯ ಶತ್ರುವಲ್ಲ. ಬರಿಯ ಶೌರ್ಯದಿಂದ ಅವನು ವಶನಾಗುವದಿಲ್ಲ; ಇಲ್ಲವೆ ಪರಾಭೂತನಾಗುವದಿಲ್ಲ. ಅಲೌಕಿಕ ಬುದ್ಧಿ-ಚಾತುರ್ಯಯುಕ್ತವಾದ ವ್ಯೂಹವು ರಚಿಸಲ್ಪಟ್ಟರೆ ಮಾತ್ರ ಅವನು ಕೈವಶನಾಗುವನು. ಜಗಮಲ್ಲನು ಅಲೌಕಿಕ ವೀರನೂ, ಅಸೀಮ ಸಾಹಸಿಯೂ, ಅತುಲನೀಯ ಧೈರ್ಯವಂ ತನೂ ಇದ್ದಂತೆ, ಅದ್ವಿತೀಯ ಚತುರನೂ ಇರುವನು.”

“ಶೂರತನ-ಚತುರತೆಗಳಿಂದ ಜಗಮಲ್ಲನು ಪರಾಭೂತನಾಗುವದಿಲ್ಲ. ರಾಜಪರಿವಾರದಲ್ಲಿ ಅಂತಹ ಸದ್ಗುಣಗಳಿದ್ದರೆ ದಿಗ್ವಿಜಯ ಮಾಡಬಹುದು.” ಎಂದು ರಾಣಾನು ನುಡಿದು, ಎಲ್ಲರ ಮುಖಗಳನ್ನು ಸೂಕ್ಷ್ಮದೃಷ್ಟಿಯಿಂದ ನೋಡುತ್ತ ಕುಳಿತನು.

“ರಾಜಪರಿವಾರದಲ್ಲಿ ಎಂತಹ ಗುಣಗಳಿರಬೇಕು ರಾಣಾಜಿ?” ಎಂದು ದ್ಯುಮತ್ಸೇನನು ಪ್ರಶ್ನೆ ಮಾಡಿದನು.

“ಅಖಂಡಸ್ವಾಮಿ ಭಕ್ತಿ, ಆದರ್ಶ ಸೇವಾಧರ್ಮ, ಅತುಲ ಸ್ವರಾಜ್ಯ

ಪ್ರೇಮ! ತಾವು ನಾಲ್ವರೂ ನನ್ನ ರಾಜಸಿಂಹಾಸನದ ಆಧಾರಸ್ತಂಭಗಳಾಗಿರು
ವಿರಿ. ನೀವು ವೀರರಿರುವಿರಿ; ಕೀರ್ತಿವಂತರಿರುವಿರಿ; ಚತುರರಿರುವಿರಿ; ಆದರೆ
ಮಾಡುವದೇನು? ಆ ಸದ್ಗುಣಗಳ ಜೊತೆಗೆ ಲವಮಾತ್ರವಾದರೂ ಸ್ವಾಮಿ
ಭಕ್ತಿಯಿದ್ದರೆ, ಆ ಸುಲಿಗೆಗಾರನು ನಗದೇಶ ರಾಜಸಿಂಹಾಸನದ ಸೇವಕನಾಗು
ತ್ತಿದ್ದನು; ಇಲ್ಲವೆ ಸೆರೆಯಾಳಾಗಿ ಕಾರಾಗೃಹದಲ್ಲಿ ಬೀಳುತ್ತಿದ್ದನು.”

ರಾಣಾನು ದ್ವೇಷದಿಂದಲೂ ಉಚ್ಚಸ್ವರದಿಂದಲೂ ಆಡಿದ ಮಾತುಗಳು
ಮಂತ್ರಿ-ಸೇನಾಪತಿಗಳ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮಕಾರಿಯಾದವು.
ತಮ್ಮಲ್ಲಿ ಲವಮಾತ್ರವಾದರೂ ಸ್ವಾಮಿಭಕ್ತಿಯಿಲ್ಲವೆಂಬ ಆರೋಪದಿಂದ
ಅವರು ಜರ್ಜರಿತರಾದರು. ಸ್ವಾಮಿನಿಷ್ಠ ಸೇನಾಪತಿಯಾದ ಮಯೂರಧ್ವಜನ
ಹೃದಯದಲ್ಲಿ ಅಲ್ಲೋಲ-ಕಲ್ಲೋಲವಾಗಹತ್ತಿತು. ರಾಣಾನು ಎಂತಹ ಭಯಂ
ಕರವಾದ ಆರೋಪ ಹೊರಿಸಿದನಲ್ಲ! ಸಂಪೂರ್ಣ ಸ್ವಾಮಿನಿಷ್ಠೆಯಂತು ಇಲ್ಲವೇ
ಇಲ್ಲ; ಸ್ವಾಮಿನಿಷ್ಠೆಯು ಲವಲೇಶವಾದರೂ ಇಲ್ಲವೆಂಬ ಮಾತು ಅಪಕೀರ್ತಿಗೆ
ಕಾರಣವಾಯಿತಲ್ಲ! ಎಂದು ಅವನು ಚಿಂತಿಸತೊಡಗಿದನು. ರಾಣಾನ ಆರೋಪ
ದಿಂದ ಅವನ ಹೃದಯವು ವಿದೀರ್ಣವಾಗಹತ್ತಿತು. ಈ ಆರೋಪವು ಮಂತ್ರಿ
ಗಳಿಗಿಂತ ಮಯೂರಧ್ವಜನಿಗೇ ವಿಶೇಷವಾಗಿ ಸಂಬಂಧಪಟ್ಟಿತ್ತು. ಅವನು
ಮಹಾಸೇನಾಪತಿಯಿದ್ದು, ಸುಲಿಗೆಗಾರರ ಹಾಗು ಬಂಡುಗಾರರ ಪ್ರತೀಕಾರದ
ಕೆಲಸವು ಅವನ ಕಡೆಗೇ ಇತ್ತು. ಮೇಲಾಗಿ, ಜಗಮಲ್ಲನು ಬಂಧುವಾದದ್ದರಿಂದ
ಕರ್ತವ್ಯವನ್ನು ದುರ್ಲಕ್ಷಿಸಿರುವನೆಂಬ ಆರೋಪವು ಅವನ ಮೇಲೆ ಬಂದಿತ್ತು.
ಮಯೂರಧ್ವಜನು ಅನುಪಮ ಸ್ವಾಮಿನಿಷ್ಠನಿದ್ದನು; ಸ್ವದೇಶ ಪ್ರೀತಿಯು
ಳ್ಳವನಾಗಿದ್ದನು; ಆದರೆ ಜಗಮಲ್ಲನು ಪ್ರೀತಿಯ ಬಂಧುವಾದದ್ದರಿಂದ ಒಮ್ಮೆಲೆ
ಕಠೋರವಾದ ಉಪಾಯ ಕೈಕೊಳ್ಳಲಿಕ್ಕೆ ಅವನು ಹಿಂಜರಿಯಹತ್ತಿದ್ದನು. ಈ
ಚಿಹ್ನವು ರಾಣಾನಿಗೆ ಗೊತ್ತಾದ್ದರಿಂದಲೇ ಅವನು ಮಾರ್ಮಿಕ ಮಾತಿನಿಂದ
ಮಂತ್ರಿ-ಸೇನಾನಾಯಕರಿಗೆ ಬುದ್ಧಿಗಲಿಸಬೇಕೆಂದು ಯೋಚಿಸಿದನು.

ರಾಣಾನ ಒಂದೇ ಒಂದು ಮಾತಿನಿಂದ ಮಯೂರಧ್ವಜನು ಮರ್ಮಾ
ಹತನಾದನು! ಮಾನವೀ ಜೀವನವು ಕ್ಷಣಭಂಗುರವಿರುವದು. ಆತ್ಮವೂ ಅದರ
ಭಾವನೆಯೂ ಮಾತ್ರ ಅಮರವಾದವುಗಳಾಗಿವೆ. ತನ್ನ ಹೃದಯದಲ್ಲಿ ಸ್ವಾಮಿ
ನಿಷ್ಠೆಯ ಜ್ಯೋತಿಯು ಅತ್ಯಂತ ಪ್ರಜ್ವಲಿತವಾಗಿದ್ದರೂ ಕೀಳುತನದ ಆರೋಪ
ವನ್ನು ಹೊರುವ ಪ್ರಸಂಗವೊದಗಿತು. ಜಗಮಲ್ಲನು ಬಂಧುವಾದರೇನಾಯಿತು?
ಕರ್ತವ್ಯದ ಮುಂದೆ ಈ ಸಂಬಂಧದ ಮಹತ್ವವೇನು! ಜಗಮಲ್ಲನು ಸ್ವಕರ್ತವ್ಯ
ದಲ್ಲಿ ದೃಢಪ್ರತಿಜ್ಞನಾದಂತೆ ತಾನಾದರೂ ಸ್ವಾಮಿಕಾರ್ಯ-ದೇಶಕಾರ್ಯ

ಕ್ಕಾಗಿ ನಿಷ್ಠೆಯುಳ್ಳವನಾದರೆ ತಪ್ಪೇನು? ಬಂಧುಘಾತಕಿಯೆನಿಸಿಕೊಳ್ಳುವದು ಸಹನೀಯವು; ಆದರೆ ಸ್ವಾಮಿಘಾತಕಿ-ರಾಷ್ಟ್ರಘಾತಕಿಯೆನಿಸಿಕೊಳ್ಳುವದು ಅಸಹ್ಯವು, ಮೊದಲಾದ ವಿಚಾರಗಳು ಮಯೂರಧ್ವಜನಲ್ಲಿ ಹುಟ್ಟಿದವು. ಕೆಲವು ವೇಳೆಯವರೆಗೆ ವಿಚಾರ ಮಾಡಿದ ಮೇಲೆ, ಅವನು ಆಸನದಿಂದೆದ್ದು ರಾಯಸಿಂಹನನ್ನು ಕುರಿತು:—"ರಾಣಾಜಿ! ನಗದೇಶ ರಾಜ್ಯದಲ್ಲಿ, ನಗದೇಶದ ಓಲಗದಲ್ಲಿ ಸ್ವಾಮಿನಿಷ್ಠರಿಲ್ಲವೆಂದು ಒಮ್ಮೆಲೆ ಭಾವಿಸಕೂಡದು. ಸ್ವಾಮಿಗೆ ಸುಖವುಂಟಾಗುವದಕ್ಕಾಗಿ, ಸ್ವಾಮಿಯ ಹೃದಯವ್ಯಥೆಯು ನಿವಾರಣೆಯಾಗುವದಕ್ಕಾಗಿ ಬ್ರಹ್ಮಾಂಡದ ಸರ್ವಶಕ್ತಿಯೊಡನೆ ಕಾದುವ ಪ್ರಸಂಗವೊದಗಿದರೂ, ಈ ನಿಮ್ಮ ಏಕನಿಷ್ಠ ಸೇವಕನು ಹಿಂಜರಿಯಲಾರನು. ಪ್ರಭೋ! ಒಬ್ಬ ಕೈಸಾಗದ ಸುಲಿಗೆಗಾರನ ಪರಿವೆಯು ನನಗೆ ಲವಲೇಶವಾದರೂ ಇಲ್ಲ."

ರಾಣಾನು ಆಶ್ಚರ್ಯಚಕಿತನಾಗಿ ಅನಿಮಿಷನೇತ್ರದಿಂದ ಸೇನಾಪತಿಯನ್ನು ನೋಡುತ್ತಲಿದ್ದನು. ಸೇನಾಪತಿಯ ಮುಖದ ಮೇಲಿನ ರಕ್ತಿಮೆಯು ಪ್ರಭಾತಸಮಯದ ಪ್ರಾಚೀದಿಸೆಯನ್ನು ಹೋಲುತ್ತಿತ್ತು. ಅವನ ನೇತ್ರಗಳು ಸ್ವಾಮಿಭಕ್ತಿಯ ಉಜ್ವಲ ತೇಜದಿಂದ ಹೊಳೆಯುತ್ತಿದ್ದವು. ಅನೇಕ ವಿಧದ ಆಂತರಿಕ ಅಲ್ಲೋಲ-ಕಲ್ಲೋಲದಿಂದ ಅವನ ಸರ್ವಾಂಗವು ಕಂಪಾಯಮಾನವಾಗತೊಡಗಿತ್ತು. ಅವನ ಸ್ಥಿತಿಯನ್ನು ನೋಡಿ ರಾಣಾನ ಮನಸ್ಸು ಸಮಾಧಾನಗೊಂಡಿತು. ತನ್ನ ಭಾಷಣದ ಪರಿಣಾಮವು ಒಳಿತಾಗಿ ಆಯಿತೆಂದು ಅವನು ತಿಳಿದುಕೊಂಡನು ಅನಂತರದಲ್ಲಿ ಅವನು ಮಯೂರಧ್ವಜನ ಸ್ವಾಮಿನಿಷ್ಠ ಹೃದಯವನ್ನು ಇನ್ನೂ ಒರೆಹಚ್ಚಬೇಕೆಂದು ಯೋಚಿಸಿ—"ಸೇನಾಪತಿಗಳೆ, ವಿಕಾರವಶರಾಗಕೂಡದು. ಪ್ರಸಂಗವು ಯಾರೊಡನೆ ಇರುವದೆಂಬದನ್ನು ಲಕ್ಷ್ಯದಲ್ಲಿಟ್ಟು ಮಾತಾಡಿರಿ."

'ಮತ್ತಾರ ಸಂಗಡ ಪ್ರಸಂಗವಿರುವದು ರಾಣಾಜಿ?' ಮಯೂರಧ್ವಜನು ಗಾಂಭೀರ್ಯದಿಂದ ನುಡಿದನು.

"ನಿಮ್ಮ ಒಡಹುಟ್ಟಿದ ಜಗಮಲ್ಲನ ಸಂಗಡ ಪ್ರಸಂಗವಿದೆ. ಬಂಧುವಿನ ಮೇಲೆ ಶಸ್ತ್ರವೆತ್ತಲಿಕ್ಕೆ ಮನಸ್ಸು ಒಪ್ಪಬಹುದೆ?"

"ಯಾರ ಬಂಧುವು?" ಸೇನಾಪತಿಯು ಆವೇಶಯುಕ್ತ ವಾಣಿಯಿಂದ:- "ನಾವೀರ್ವರೂ ಒಬ್ಬ ತಾಯಿಯ ಉದರದಿಂದ ಹುಟ್ಟಿರುವೆವೆಂದು ಜಗತ್ತು ಹಾಗೆ ಅನ್ನುತ್ತಿರುವದು. ಕರ್ತವ್ಯಶೀಲ ಮನುಷ್ಯನಿಗೆ ಧರ್ಮ-ಶೀಲ-ನೀತಿಗಳ ಬಂಧನವು ಬಂಧುವಿನಗಿಂತಲೂ ಹೆಚ್ಚಾಗಿರುತ್ತದೆ. ರಾಣಾಜಿ, ಈ ನಿಮ್ಮ ಮಯೂರಧ್ವಜನ ಅಸ್ತಿತ್ವವು ಸ್ವಾಮಿಕಾರ್ಯಕ್ಕಾಗಿ ಇರುವದು; ಬಂಧು-

ಬಾಂಧವರಿಗಾಗಿ ಇಲ್ಲ. ಸ್ವಾಮಿನಿಷ್ಠೆಯೇ ನನ್ನ ಧರ್ಮವು!"

ಸೇನಾಪತಿಯ ಮಾತುಗಳನ್ನು ಕೇಳಿ ಅಮಾತ್ಯನಾದ ರಾಜಬಾಹುವು ಉಪಹಾಸಾತ್ಮಕ ವಾಣಿಯಿಂದ:-"ದಳವಾಯಿಗಳೇ, ಎಲ್ಲಿಯ ವರೆಗೆ ಬಂಧುವಿನ ಮುಖಾವಲೋಕನ ಮಾಡಿಲ್ಲವೋ, ಅಲ್ಲಿಯ ವರೆಗೇ ಈ ಆವೇಶವು ಉಳಿಯುವದೆಂಬದರಲ್ಲಿ ಸಂದೇಹವಿಲ್ಲ. ಈಗ ರಾಜೋದ್ಯಾನದಲ್ಲಿ ರಾಜಸಮ್ಮುಖದಲ್ಲಿರುವದರಿಂದ ಇಲ್ಲದ ವೀರಶ್ರೀಯು ಸಂಚಾರವಾಗಿದೆ ಕೈಯಲ್ಲಿ ನಗ್ನಖಡ್ಗವನ್ನು ಧರಿಸಿ ಬಂಧುವಿನೆದುರಿಗೆ ನಿಂತಿರೆಂದರೆ, ಭ್ರಾತೃಪ್ರೇಮದ ಮಹಿಮೆಯು ನಿಮಗೆ ತಿಳಿಯುವದು. ಬಂಧುಪ್ರೇಮವು ಮಂತ್ರಶಕ್ತಿಯಂತೆ ನಿಮ್ಮನ್ನು ಕಟ್ಟಿಬಿಡಬಹುದು; ಆ ಪ್ರೇಮದಿಂದ ನಿಮ್ಮ ಖಡ್ಗವು ಕೈಯೊಳಗಿಂದ ಜಾರಿ ಕೆಳಗೆ ಬೀಳಬಹುದು; ಪಾವಿತ್ರ್ಯದ ಮೇಲೆ ನಿಂತ ಹೆಜ್ಜೆಯು ಹಿಂದೆ ಸರಿಯಬಹುದು; ನೀವು ಕರ್ತವ್ಯಮೂಢರಾಗಿ ಪ್ರವಾಹಪತಿತಾವಸ್ಥೆ ಹೊಂದಬಹುದು"

ಸಚಿವನ ಮಾತುಗಳು ಸೇನಾಪತಿಯನ್ನು ಮತ್ತಿಷ್ಟು ಆವೇಶಕ್ಕೊಳಪಡಿಸಿದವು. ಆಗ ಅವನು ಗಂಭೀರಭಾವದಿಂದ:-"ಮಮತೆಯು ತಾಯಿಯ ಉದರದಲ್ಲಿರುತ ದೆ; ಮಮತೆಯು ಸ್ತ್ರೀಯರ ಆಲಿಂಗನದಲ್ಲಿರುತ್ತದೆ; ಮಮತೆಯು ಸುಖವಿಲಾಸದ ಲಾಲಸೆಯಲ್ಲಿರುತ್ತದೆ; ಕರ್ತವ್ಯಪಾಲನೆಯಲ್ಲಿ ಮಮತೆಯು ಹೇಗೆ ಇರುವದು? ಕರ್ತವ್ಯವೆಂದರೆ, ಅದು ಕರ್ತವ್ಯವೇ! ಅದು ಸುಖಪ್ರದವಿರಲಿ, ದುಃಖಪ್ರದವಿರಲಿ ಅದನ್ನು ಪಾಲಿಸುವದರಲ್ಲಿಯೇ ನಿಜವಾದ ಪುರುಷಾರ್ಥವಿರುವದು; ನಿಷ್ಕಲಂಕವಾದ ಕೀರ್ತಿಯಿರುವದು. ಸಚಿವಶಿರೋಮಣಿಗಳೆ, ರಣಭೂಮಿಯಲ್ಲಿ ಮಮತೆಯಿರುತ್ತಿದ್ದರೆ, ಭಾರತ ಮಹಾಯುದ್ಧವು ಜರಗುತ್ತಿದ್ದಿಲ್ಲ. ಅಲ್ಲಿ ಮಾಯಾ-ಮೋಹಗಳಿಗೆ ಸ್ಥಳವಿಲ್ಲ"

"ಸೇನಾಪತಿಗಳೇ! ನಿಮ್ಮ ಮಾತುಗಳು ಅಯಥಾರ್ಥವಾದವುಗಳಲ್ಲ. ನೀವು ವಿರೋಚಿತವಾದ ಮಾತುಗಳನ್ನಾಡಿದಿರಿ. ಯೋಗ್ಯ ವೇಳೆಯಲ್ಲಿ ಶ್ರೀಕೃಷ್ಣನಂತಹ ಮಾರ್ಗದರ್ಶಕನು ಇರದಿದ್ದರೆ ಮಾಯಾ-ಮೋಹಗಳಿಂದ ಕರ್ತವ್ಯಮೂಢನಾದ ಅರ್ಜುನನು ಭಾರತ ಸಂಗ್ರಾಮಕಾರ್ಯವನ್ನು ಜರುಗಿಸುತ್ತಿದ್ದನೆಂದು ಹೇಳಲಾಗುವದಿಲ್ಲ. ವ್ಯಾಮೋಹವು ಎಂಥವರನ್ನೂ ಬಿಟ್ಟಿಲ್ಲ. ಅಂತೆಯೆ ರಾಜಬಾಹುಮಂತ್ರಿಗಳು ಸಾಮಾನ್ಯ ವಸ್ತುಸ್ಥಿತಿಯನ್ನು ಹೇಳಿದರು. ಆಯುತ್ತವಾದ ವೇಳೆಯಲ್ಲಿ ಗೆಲವಿನ ಕತ್ತಿಯನ್ನು ಹಿಡಿದ ನಿಮ್ಮ ಹಸ್ತವು ಶಿಥಿಲತೆ ಹೊಂದಿದರೆ ಮಾತ್ರ ನೀವು ಆಡಿದ ಮಾತುಗಳು ಅರ್ಥಹೀನವಾಗುವವು." ಎಂದು ರಾಣಾನು ನುಡಿದು, ಸೇನಾಪತಿಯ ಮುಖವನ್ನು

ನೋಡತೊಡಗಿದನು.

"ರಾಣಾಜಿ!" ಮಯೂರಧ್ವಜನು ಆವೇಶದಿಂದ:—"ಮೋಹಪರವಶವಾದ ಹಸ್ತವನ್ನು ಆಗಿಂದಾಗ ಕಡಿದು ಚೆಲ್ಲಿ, ಮತ್ತೊಂದು ಹಸ್ತದಿಂದ ಕರ್ತವ್ಯಪಾಲನೆ ಮಾಡುವೆನು!"

"ಪ್ರಸಂಗವೊದಗಿದ ಹೊರತು ಹೃದಯದ ಪರೀಕ್ಷೆಯಾಗುವದಿಲ್ಲ. ಬಂಧುವಿನೊಡನೆ ಕಾದುವ ಸಮಯವೇ ಒದಗಿದರೆ, ಅವನ ಪ್ರಾಣವೇ ನಿಮ್ಮ ಪ್ರಾಣವೆಂದು ತಿಳಿಯಬೇಕಾಗುವದು; ಯಾಕಂದರೆ, ಮೋಹವು ದುರತಿಕ್ರಮವು." ಎಂದು ದ್ಯುಮತ್ಸಿಂಹನು ನುಡಿದನು.

"ಅರ್ಜುನನು ಭಾರತಯುದ್ಧಕ್ಕೆ ಹೊರಡುವಾಗ ಬಂಧು-ಬಾಂಧವರೊಡನೆ ಕಾದುವ ಪ್ರಸಂಗವಿರುವದೆಂಬದು ಗೊತ್ತಿದ್ದರೂ ಆಗ ಅವನಿಗೆ ಯಾವ ವಿಧದ ವೈಷಮ್ಯವೂ ತೋರಲಿಲ್ಲ; ಆದರೆ ಸಮರಭೂಮಿಯಲ್ಲಿ ನಿಂತ ಕೂಡಲೆ ಅವನ ಮನಸ್ಥಿತಿಯು ಹೇಗಾಯಿತು ನೋಡಿರಿ? ಅಂತಹ ಪರಿಪಕ್ವ ವಿಚಾರಿಗಳನ್ನು ಸಹ ಮೋಹವು ಬಿಟ್ಟಿಲ್ಲ; ಆದರೆ ಸಾಮಾನ್ಯರ ಪಾಡೇನು? ಅಂತೆಯೆ ದ್ಯುಮತ್ಸಿಂಹರು ಮೋಹವು ದುರತಿಕ್ರಮವೆಂದು ಹೇಳಿದರು." ಎಂದು ಅಮಾತ್ಯ ಅಚಲಸಿಂಹನು ನುಡಿದನು

"ಆ ಮೋಹಕ್ಕೆ ಎಡೆಗೊಟ್ಟಾಗ ಅದು ದುರತಿಕ್ರಮವೆನಿಸಬಹುದು; ಕರ್ತವ್ಯಪಾಲನೆಗೆ ಪ್ರಾಮುಖ್ಯತೆಯನ್ನು ಕೊಟ್ಟಿರುವಾಗ ಮೋಹಕ್ಕೆ ಹೃದಯದಲ್ಲಿ ಪ್ರವೇಶವು ಹೇಗೆ ದೊರೆಯುವದು? ಸ್ವಾಮಿಭಕ್ತಿಯ ತುಲನೆಯಲ್ಲಿ ಬಂಧುವಿನ ಪ್ರಾಣವು ಮಹಾಸಾಗರದೊಳಗಿನ ಬಿಂದುವಿಗಿಂತಲೂ ಹೆಚ್ಚಿನ ಯೋಗ್ಯತೆ ಹೊಂದಲಾರದು." ಎಂದು ಮಯೂರಧ್ವಜನು ನಿಶ್ಚಯಾತ್ಮಕ ಸ್ವರದಿಂದ ಹೇಳಿದನು.

"ಸೇನಾನಾಯಕರೆ!" ರಾಯಸಿಂಹನು ಬುದ್ಧಿಪುರಸ್ಸರವಾಗಿ:-"ಯಾವದೊಂದು ವಿಧದ ಪುರಸ್ಕಾರವು ದೊರೆಯುವದೆಂದು ಬಂಧುಘಾತದಂತಹ ಕಟು ಕರ್ತವ್ಯದಲ್ಲಿ ತೊಡಗಬೇಡಿರಿ ನೀವು ನಿಮ್ಮ ಸ್ವಾಮಿದ್ರೋಹಿಯಾದ ಬಂಧುವಿನ ಕೊಲೆಮಾಡಿದರೆ ಇಲ್ಲವೆ ಸೆರೆಹಿಡಿದು ತಂದರೆ, ನಿಮಗೆ ಯಾವ ಬಗೆಯ ಪಾರಿತೋಷಕವೂ ಬಹುಮಾನದ ಪದವಿಯೂ ದೊರಕಲಾರವೆಂದು ಖಂಡಿತವಾಗಿ ನಂಬಿರಿ."

"ಕರ್ತವ್ಯಪಾಲನೆ ಮಾಡಿ ದೊರಕಿಸಿಕೊಂಡಂತಹ ಸಂತುಷ್ಟತೆಯು ಯಾವ ಪುರಸ್ಕಾರದಲ್ಲಿಯೂ ಇರುವದಿಲ್ಲ ರಾಣಾಜೀ!" ಮಯೂರಧ್ವಜನು ಸ್ಪಷ್ಟವಾದ ಉತ್ತರವಿತ್ತನು.

“ಸ್ವಾಮಿನಿಷ್ಠೆಯ ಆಡಂಬರದಿಂದ ಬಂಧು ಹತ್ಯೆಯಂತಹ ಅಘೋರ ಕರ್ಮವು ಘಟಿಸಿದ್ದಕ್ಕೆ ಜಗತ್ತು ನಿಮ್ಮನ್ನು ಧಿಕ್ಕರಿಸುವದು. ಅದಕ್ಕೆ ಹೇಗೆ ಮಾಡುವಿರಿ?” ರಾಜಬಾಹುವು ಏಕನಿಷ್ಠ ಹೃದಯವನ್ನು ಒರೆಹಚ್ಚುವದಕ್ಕಾಗಿ ನುಡಿದನು.

“ಪಿತೃಸಮಾನನಾದ ರಾಜನ ಹೃದಯದೊಳಗಿನ ವ್ಯಥೆಯನ್ನು ನಿವಾರಿಸಲಿಕ್ಕೂ, ಒಬ್ಬ ಕಡು ವಿರೋಧಿಯಿಂದ ಮಾತೃಭೂಮಿಗೊದಗಿದ ಪೀಡೆಯನ್ನು ನಾಶಗೊಳಿಸಲಿಕ್ಕೂ ಯತ್ನಿಸದಿದ್ದರೆ ಮಾತ್ರ ನಾನು ತುಚ್ಛನೂ ಧಿಃಕಾರಪಾತ್ರನೂ ಆಗುವೆನು” ಮಯೂರಧ್ವಜನು ತನ್ನ ಶುದ್ಧವಾದ ಹೃದಯವನ್ನು ಪ್ರಕಟೀಕರಿಸಿದನು.

ಸೇನಾಪತಿಯ ಮಾತುಗಳು ರಾಣಾನ ಮನಸ್ಸನ್ನು ಪ್ರಸನ್ನೀಕರಿಸಿದವು ಆಗ ಅವನ ಹೃದಯದಲ್ಲಿ ಆವೇಶವುತ್ಪನ್ನವಾದಂತಾಗಿ ಕುಳಿತ ಸ್ಥಳದಿಂದೆದ್ದು ಸೇನಾಪತಿಯ ಬಳಿಗೆ ಹೋಗಿ ಅವನ ಹೆಗಲ ಮೇಲೆ ಕೈಯಿಟ್ಟನು. ಆಗ ಅವನ ಕೈಯಲ್ಲಿ ಅಪೂರ್ವವಾದ ಹರ್ಷಾವೇಗವಿತ್ತು. ಏಕನಿಷ್ಠ ಹೃದಯದ ಸೇವಕನು ಬಳಿಯಲ್ಲಿದ್ದುದರಿಂದ, ಅವನಿಗೆ ಒಳ್ಳೆಯ ಅಭಿಮಾನವೆನಿಸಿತು ಅವನ ಮುಖದ ಮೇಲೆ ವೀರಶ್ರೀಯ ತೇಜವು ಪ್ರಕಟವಾಯಿತು. ಆಗ ಅವನು:—“ಮಯೂರಧ್ವಜರೇ, ಖಡ್ಗವನ್ನು ಹಿರಿಯಿರಿ!”

ರಾಜಾಜ್ಞೆಯ ಮೇರೆಗೆ ಸೇನಾಪತಿಯು ಖಡ್ಗವನ್ನು ಹಿರಿದು, ಅದನ್ನು ವಾತಾವರಣದಲ್ಲಿ ಗರಗರನೆ ತಿರುಗಿಸಿ ಮೇಲೆ ಎತ್ತಿದನು. ಅನಂತರದಲ್ಲಿ ರಾಣಾನು: “ಸೇನಾಪತಿಗಳೇ, ಈ ನಿಮ್ಮ ಖಡ್ಗವನ್ನು ಹಿಡಿದ ಹಸ್ತವೂ, ಹಸ್ತಕ್ಕೆ ಕಠೋರ ಕರ್ಮ ಮಾಡಹಚ್ಚುವ ಹೃದಯವೂ ದೃಢವಿರುವವಲ್ಲವೆ?”

“ರಾಣಾಜೀ, ನನ್ನ ಖಡ್ಗಪಾಣಿಪಾದಹೃದಯಗಳು ಹಿಮಾಲಯದಂತೆಯೂ ಧ್ರುವತಾರೆಯಂತೆಯೂ ಸ್ಥಿರವಾಗಿರುವವು.” ಮಯೂರಧ್ವಜನು ಗಂಭೀರತೆಯಿಂದ ನುಡಿದನು.

“ಸೇನಾಪತಿಗಳೇ, ನಾನು ನಿಮಗೆ ಆಶೀರ್ವಾದವೀಯುವೆನು. ನೀವು ಕಾರ್ಯಸಿದ್ಧಿ ಮಾಡಿಕೊಂಡು ನನ್ನನ್ನು ಕಾಣಿರಿ.”

ಮಯೂರಧ್ವಜನು ರಾಣಾನ ಪಾದಗಳ ಮೇಲೆ ಮಸ್ತಕವಿರಿಸಿದನು. ರಾಣಾನು ಅವನಿಗೆ ಶುಭಾಶೀರ್ವಾದವಿತ್ತನು. ಅನಂತರದಲ್ಲಿ ಅವನು ಧೃತಪದದಿಂದ ರಾಜೋದ್ಯಾನವನ್ನು ಬಿಟ್ಟು ತೆರಳಿದನು. ಅವನ ಏಕನಿಷ್ಠ ಹೃದಯವನ್ನು ನೋಡಿ ರಾಣಾಜಿಯು ವಿಸ್ಮಿತನಾದನು. ಆಗ ಅವನು:— “ನಿಮ್ಮಂತಹ ಏಕನಿಷ್ಠ ಹೃದಯದ ಸೇವಕರಿರುವದರಿಂದಲೆ ನಗದೇಶದ ಗೌರ

ವವು ಉಳಿದಿರುವದು!" ಎಂದು ಧನ್ಯೋದ್ಗಾರ ತೆಗೆದನು

ರಾಣಾನೂ ಅಮಾತ್ಯರೂ ವೀರವೀರತೆಯ ಪ್ರತಿನಿಧಿಯಾದ ವಿಶಾಲ ಕಾಯ ಮಹಾಬಾಹುಯುಕ್ತ ದಳವಾಯಿಯನ್ನು ಕಣ್ಣುಮರೆಯಾಗುವ ವರೆಗೂ ಎವೆಯಿಕ್ಕದೆ ನೋಡುತ್ತ ನಿಂತಿದ್ದರು,

---

## ತೇಜಸ್ವಿಯ ಮನೋರಥ.

ಭಗವಾನ್ ಸಹಸ್ರರಶ್ಮಿಯು ಮಧ್ಯಾಕಾಶದಲ್ಲಿ ಬಂದಿದ್ದನು. ಪ್ರಖರವಾದ ಉಷ್ಣತೆಯಿಂದ ಧರಣಿಯು ಕಾಯ್ದು ತಪ್ತವಾಗಿತ್ತು. ಪಶು-ಪಕ್ಷಿಗಳೂ ಮನು ಷ್ಯರೂ ತಮ್ಮ ನಿವಾಸಸ್ಥಾನವನ್ನು ಆಶ್ರಯಿಸಿದ್ದರು. ಇಂತಹ ಪ್ರಖರವಾದ ಬಿಸಿಲಿನ ವೇಳೆಯಲ್ಲಿ ಡಾಕು ಜಗಮಲ್ಲನು ತನ್ನ ವಿಶ್ವಾಸಿಗಳಾದ ಕೆಲ ಜನ ಸಂಗಡಿಗರೊಡನೆ ಅರವಲೀ ಪರ್ವತದ ಒಂದು ಗುಹೆಯಲ್ಲಿ ಕುಳಿತಿದ್ದನು. ಆ ಗುಹೆಯು ಜಗಮಲ್ಲನ ಕಾರಸ್ಥಾನದ ಸ್ಥಳವಾಗಿದ್ದುದರಿಂದ ಅಲ್ಲಿ ಅವನ ನಂ- ಬಿಗೆಯ ಸಂಗಡಿಗರ ಹೊರತು ಬೇರೆಯವರ ಪ್ರವೇಶವಾಗುತ್ತಿದ್ದಿಲ್ಲ. ನಗ ದೇಶದ ರಾಣಾ ರಾಯಸಿಂಹನನ್ನು ಸೆರೆಹಿಡಿದು ಆ ಗುಹೆಗೆ ತರುವದೇ ಜಗ ಮಲ್ಲನ ಕಾರಸ್ಥಾನವಾಗಿತ್ತು. ಈ ಕಾರ್ಯವು ನೆರವೇರುವದಕ್ಕಾಗಿ ಅವನು ಸೇನಾಬಲವನ್ನೂ ದ್ರವ್ಯವನ್ನೂ ಅನುಕೂಲಮಾಡಿಕೊಳ್ಳಹತ್ತಿದ್ದನು. ಅದ ಕ್ಕಾಗಿ ಅವನು ನಗದೇಶದ ರಾಜ್ಯದಲ್ಲಿ ಸುಲಿಗೆಯ ಕೆಲಸವನ್ನು ಪ್ರಾರಂಭಿಸಿ ದ್ದನು. ಇತ್ತಿತ್ತ ಅವನಲ್ಲಿ ಹೇರಳವಾದ ಧನಸಂಚಯುವಾದದ್ದಲ್ಲದೆ, ಮನು ಷ್ಯಬಲವೂ ಬೆಳೆದಿತ್ತು. ಇದೇ ಮೇರೆಗೆ ಇನ್ನೂ, ಸ್ವಲ್ಪ ದಿನ ಪ್ರಯತ್ನ ಮಾಡಿದರೆ ನಗದೇಶದ ರಾಜಸಿಂಹಾಸನವನ್ನು ಬೇರುವೆರಿಸಿ ಕಿತ್ತು ಚೆಲ್ಲ ಬಹುದೆಂದು ಜಗಮಲ್ಲನು ಅನ್ನತೊಡಗಿದ್ದನು.

ಜಗಮಲ್ಲನು ತನ್ನ ನಂಬಿಗೆಯವರಾದ ರಾಜಸಿಂಹ, ಧೀರಸಿಂಹ, ರಣ ಮಲ್ಲ ಈ ಮೂವರನ್ನೂ ಒಬ್ಬಿಬ್ಬರು ಸೇವಕರನ್ನೂ ಆ ಗುಹೆಯಲ್ಲಿ ಕರೆಯಿಸಿ ದ್ದನು. ಅಂದು ಯಾವದೋ ಒಂದು ಮಹತ್ವದ ಸಂಗತಿಯ ಬಗ್ಗೆ ವಿಚಾರ- ವಿನಿಮಯ ಮಾಡುವದಿದ್ದುದರಿಂದ ಮಿಕ್ಕ ಜನರು ಬೇರೆ ಕಡೆಗೆ ಕಳುಹಿಸಲ್ಪ ಟ್ಟಿದ್ದರು. ಕೆಲವು ಹೊತ್ತಿನವರೆಗೆ ಅವರು ವಿಚಾರ-ವಿನಿಮಯ ಮಾಡಿದ ಮೇಲೆ ಜಗಮಲ್ಲನು:—"ನಮ್ಮ ದೀರ್ಘಪ್ರಯತ್ನಕ್ಕೆ ಯಶವು ಲಭಿಸುವ ದೆಂಬದರಲ್ಲಿ ಸಂದೇಹವಿಲ್ಲ. ಇನ್ನು ಮೇಲೆ ನಾವು ಒಳ್ಳೆಯ ಸಾವಧಗೊಂಡು

ಕೆಲಸ ಮಾಡಲಿಕ್ಕೆ ಬೇಕು. ರಾಣಾನು ನಮ್ಮ ಪ್ರತೀಕಾರಕ್ಕಾಗಿ ಸಾಹಸ ಮಾಡ ತೊಡಗಿರುವನು. ಅವನನ್ನು ಜೀವಂತವಾಗಿ ಈ ಗುಹೆಯಲ್ಲಿ ತಂದರೆ ನಮ್ಮ ಕರ್ತವ್ಯವು ಪೂರೈಸಿದಂತಾಯಿತು. ಇಂದಿನ ಕಾರ್ಯವನ್ನು ಒಳ್ಳೆಯ ತತ್ಪರತೆಯಿಂದ ಮಾಡಿರಿ. ನೀವು ಇಲ್ಲಿಂದ ಬೇಗನೆ ಹೊರಟು ರಾಜಮಂದಿರದ ಹಿಂದಿನ ಗೋಡೆಯ ಮೇಲಿಂದ ನಿಶ್ಚಯಿಸಿದ ಸ್ಥಳಕ್ಕೆ ಬರ್ರಿ. ನಾನೂ ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಬರುವೆನು. ನಮ್ಮ ಕಾರ್ಯದಲ್ಲಿ ನಿಶ್ಚಯವಾಗಿ ಯಶ ದೊರೆಯುವದು; ಆದರೆ ನೀವು ಎಷ್ಟೂ ಅಸಾವಧತೆ ಹೊಂದಲಾಗದು. ಒಂದು ವೇಳೆ ಯಾರಾದರೂ ಅಜಾಗ್ರತೆಯಿಂದ ನಡೆದರೆ, ನಮ್ಮ ಕಾಂಸ್ಥಾನವೆಲ್ಲ ಹಾಳಾಗಿ, ದೊಡ್ಡ ಗಂಡಾಂತರದಲ್ಲಿ ಬೀಳಬೇಕಾಗುವದೆಂಬದನ್ನು ಯಾರೂ ಮರೆಯತಕ್ಕದ್ದಲ್ಲ."

ಜಗಮಲ್ಲನ ಮಾತುಗಳನ್ನು ಕೇಳಿ ಧೀರಸಿಂಹನು ಗಂಭೀರತೆಯಿಂದ: "ಸರದಾರರೇ, ಇಷ್ಟು ದಿನಗಳ ವರೆಗೆ ನಿಷ್ಠೆಯಿಂದಲೂ ಸಾಹಸದಿಂದಲೂ ಜಾಗ್ರತೆಯಿಂದಲೂ ರಚಿಸಿದ ವ್ಯೂಹವನ್ನು ಹಾಳುಮಾಡುವಂತಹ ಎಚ್ಚರಗೇಡಿಗಳು ನಿಮ್ಮ ತಂಡದಲ್ಲಿ ಯಾರೂ ಇಲ್ಲ. ನೀವು ಈ ವಿಷಯದಲ್ಲಿ ನಿಶ್ಚಿಂತರಾಗಿರಿ."

"ಸರದಾರರೇ, ನಮ್ಮಂತಹ ಏಕನಿಷ್ಠ ಸೇವಕರು ಎಚ್ಚರಗೇಡಿಗಳಾಗಿ ನಡೆಯುವರೆಂಬ ಕಲ್ಪನೆಯು ನಿಮ್ಮಲ್ಲಿ ಹುಟ್ಟಿದ್ದನ್ನು ನೋಡಿ ವಿಸ್ಮಯವಾಗುವದು." ಎಂದು ಗರ್ವೋದ್ಧತತನದಿಂದ ರಾಜಸಿಂಹನು ನುಡಿದನು.

"ರಾಜಸಿಂಹ!" ಜಗಮಲ್ಲನು ಅಹಂಕಾರಕ್ಕೊಳಪಟ್ಟ ರಾಜಸಿಂಹನನ್ನು ದಾರಿಗೆ ತರುವದಕ್ಕಾಗಿ:—"ನೀವು ಎಂತಹ ಏಕನಿಷ್ಠರಿದ್ದರೂ, ಎಷ್ಟು ಎಚ್ಚರದಿಂದ ಕೆಲಸ ಮಾಡುತ್ತಿದ್ದರೂ ಒಮ್ಮೊಮ್ಮೆ ಜಾರುವ ಸಂಭವವುಂಟು. ದೊರೆತ ವಿಜಯಗಳಿಂದ ಮನುಷ್ಯನು ಅಹಂಕಾರಿಯಾಗಿ ಎಚ್ಚರಗೇಡಿತನದಿಂದ ವರ್ತಿಸುವ ಸಂಭವವೂ ಉಂಟು. ಒಂದು ವೇಳೆ ಹಾಗಾದರೆ, ಆಯತ್ತಾದ ಸಮಯದಲ್ಲಿ ಕೆಲಸವು ಹಾಳಾಗಿ, ಮನೋರಾಜ್ಯವು ಮಣ್ಣುಪಾಲಾಗುವದು. ನಿಮ್ಮೆಲ್ಲರ ಸತ್ವವನ್ನವಲಂಬಿಸಿಯೇ ನಾನು ರಾಣಾನ ವಿರುದ್ಧವಾಗಿ ವ್ಯೂಹ ರಚನೆ ಮಾಡಿರುವೆನು. ನೀವೆಲ್ಲರೂ ನಿಷ್ಠೆಯಿಂದಲೂ, ಸಾಹಸದಿಂದಲೂ, ಜಾಗ್ರತೆಯಿಂದಲೂ ಕಾರ್ಯ ಮಾಡಿದರೆ ವಿಜಯಲಾಭವಾಗುವದರಲ್ಲಿ ಸಂದೇಹವಿಲ್ಲ"

'ಸರದಾರರೆ,' ರಾಜಸಿಂಹನು ಮನಃಪೂರ್ವಕವಾಗಿ:—"ವಿಜಯಾನಂದದ ಭರದಲ್ಲಿ ನಾನು ಅಹಂಕಾರಯುಕ್ತವಾದ ಮಾತನಾಡಿದೆನು. ನೀವು ನನ್ನ

ಅಪರಾಧವನ್ನು ಕ್ಷಮಿಸಿರಿ. ನಾವೆಲ್ಲರೂ ಸ್ವಾಮಿಕಾರ್ಯಕ್ಕಾಗಿ ಆತ್ಮಾರ್ಪಣೆ ಮಾಡಲಿಕ್ಕೆ ಹಿಂದುಮುಂದೆ ನೋಡುವದಿಲ್ಲವೆಂದು ಖಂಡಿತವಾಗಿ ಭಾವಿಸಿರಿ."

ಅನಂತರದಲ್ಲಿ ಜಗಮಲ್ಲನು ಎದುರಿಗೆ ಕುಳಿತ ತರುಣನನ್ನು ಕುರಿತು: 'ರಣಮಲ್ಲ?'

'ಯಾಕೆ ಪಿತಾಜಿ?' ಹೀಗೆಂದು ಆ ತರುಣನು ಜಗಮಲ್ಲನ ಮುಂದೆ ನಿಂತನು.

"ರಣಮಲ್ಲ, ಈ ಹೊತ್ತು ನೀನು ನನ್ನ ಸಂಗಡ ಹೊರಡು. ನಿನ್ನ ಗರಡಿಯೊಳಗಿನ ಎಂಟು ಜನ ಮಲ್ಲರನ್ನು ಆರಿಸಿ ಕರೆದುಕೊಂಡು ಬಾ. ನಿನಗೆ ಇನ್ನೊಂದು ಸಂಗತಿಯನ್ನು ಹೇಳುವದಿದೆ. ಅದೇನಂದರೆ—"

ಜಗಮಲ್ಲನು ಅರ್ಧ ಮಾತಿಗೇ ನಿಂತಿದ್ದರಿಂದ ರಣಮಲ್ಲನು ಉತ್ಕಂಠೆಯಿಂದ:—'ಪಿತಾಜಿ, ಅವಶ್ಯವಾಗಿ ಹೇಳಿರಿ.'

"ರಣಮಲ್ಲ, ನಿನಗೆ ಇನ್ನೊಂದು ವಿಷಯವನ್ನು ಹೇಳುವದಿರುವದು. ಅದೇನಂದರೆ, ನಾನು ಯೋಚಿಸಿದ ಕಾರ್ಯದಲ್ಲಿ ಒಂದು ವೇಳೆ ಪರಾಜಯವು ದೊರೆತರೆ?...."

"ಪರಾಜಯವೆ! ಅದು ಹೇಗೆ ಬರುವದು? ಬರಬಾರದರಿ!' ಎಂದು ರಾಜಸಿಂಹ-ಧೀರಸಿಂಹರು ಏಕಕಂಠದಿಂದ ಪ್ರಶ್ನೆ ಮಾಡಿದರು.

ಜಗಮಲ್ಲ:—'ಒಂದು ವೇಳೆ ಭಗವದಿಚ್ಛೆಯೇ ಹಾಗಿದ್ದರೆ?...."

ಜಗಮಲ್ಲನು ತನ್ನ ವಿಶಾಲವಾದ ದೃಷ್ಟಿಯನ್ನು ರಣಮಲ್ಲನ ಮೇಲೆ ಸ್ಥಿರಪಡಿಸಿ—"ನೀನು ನಿನ್ನ ಅಂತಿಮ ಸಮಯದವರೆಗೆ ನನ್ನ ವೈರಿಯ ಮೇಲಿನ ಸೇಡು ತೀರಿಸಿಕೊಳ್ಳುವ ಬಗ್ಗೆ ಪ್ರಯತ್ನ ಮಾಡಲಿಕ್ಕೇಬೇಕು. ಕುಮಾರಾ, ರಣಮಲ್ಲ! ನೀನು ನನ್ನ ಈ ಉತ್ಕಟೇಚ್ಛೆಯನ್ನು ಈಡೇರಿಸುವ ಬಗ್ಗೆ ನನಗೆ ವಚನ ಕೊಡು."

'ಪಿತಾಜಿ!' ರಣಮಲ್ಲನು ಗಾಂಭೀರ್ಯದಿಂದ—"ನನ್ನ ತಂದೆಯವರು ಮೃತಿ ಹೊಂದಿದ ಮೇಲೆ ನೀವು ನನ್ನನ್ನು ತಂದೆಯಂತೆಯೆ ಜೋಪಾನ ಮಾಡಿರುವಿರಿ. ನಿಮ್ಮ ಆಜ್ಞೆಯಂತೆ ನಡೆಯದಿದ್ದರೆ ನಾನು ಪಿತೃದ್ರೋಹಿಯಾಗಲಿಕ್ಕಿಲ್ಲವೆ? ಪರಮಾತ್ಮನ ಅನುಗ್ರಹದಿಂದ ನೀವೇ ನಿಮ್ಮ ಕಾರ್ಯವನ್ನು ಪೂರ್ಣವಾಗಿ ನೆರವೇರಿಸುವಿರಿ. ಒಂದು ವೇಳೆ ನಿಮ್ಮಿಂದ ಆ ಕಾರ್ಯವು ನೆರವೇರದೆ ಉಳಿದರೆ, ಅದನ್ನು ನಾನು ನಿಶ್ಚಯವಾಗಿ ಕೊನೆಗಾಣಿಸುವೆನು. ಇದೇ ನನ್ನ ಪ್ರತಿಜ್ಞೆಯು!"

ರಣಮಲ್ಲನ ಪ್ರತಿಜ್ಞಾವಾಣಿಯನ್ನು ಕೇಳಿ ಜಗಮಲ್ಲನಿಗೆ ಸಂತೋಷ

ವಾಯಿತು. ಆಗ ಅವನು ಸಂಭ್ರಮದಿಂದ—"ಮಗೂ! ನಿನ್ನ ಪಿತೃಭಕ್ತಿಯ ಬಗ್ಗೆ ನನಗೆ ವಿಶ್ವಾಸವಿದೆ. ನಿನ್ನ ಮುಖದಿಂದ ಈ ಮಾತು ಹೊರಡಬೇಕೆಂಬ ಇಚ್ಛೆಯಿದ್ದುದರಿಂದ ಪ್ರಸ್ತಾಪ ತೆಗೆದೆನು."

ಇಷ್ಟು ಮಾತಾಡಿ ಜಗಮಲ್ಲನು ಸ್ತಬ್ಧನಾದನು. ಉಳಿದವರೂ ಸ್ವಸ್ಥವಾಗಿ ಕುಳಿತಿದ್ದರು. ಗುಹೆಯಲ್ಲಿ ಶಾಂತತೆಯು ತನ್ನ ಸಾಮ್ರಾಜ್ಯವನ್ನು ಸ್ಥಾಪಿಸಿತ್ತು; ಆದರೆ ಹೊರಗಿನ ಭೂಮಿಯೂ ವಾತಾವರಣವೂ ಸೂರ್ಯನ ಪ್ರಖರವಾದ ಕಿರಣಗಳಿಂದ ಕಾಯ್ದಿದ್ದವು. ಅಲ್ಲಿಂದ ಉಷ್ಣವಾದ ಗಾಳಿಯು ಒಂದೇ ಸವನೆ ಒಳನುಗ್ಗತೊಡಗಿದ್ದರಿಂದ, ಗುಹೆಯಲ್ಲಿ ಕುಳಿತ ಜನರ ಮುಖದಿಂದ 'ಉಶ್-ಉಶ್' ಎಂಬ ಧ್ವನಿಯು ಹೊರಟು, ಅಲ್ಲಿ ಪ್ರಸ್ಥಾಪಿತವಾದ ಶಾಂತತೆಯು ಭಂಗವಾಗತೊಡಗಿತ್ತು.

ಜಗಮಲ್ಲನು ತನ್ನ ಪಾಲಿತಪುತ್ರನಾದ ರಣಮಲ್ಲನ ಕಡೆಗೆ ಏಕದೃಷ್ಟಿಯಿಂದ ನೋಡುತ್ತ ಕುಳಿತಿದ್ದನು. ರಣಮಲ್ಲನು ಜಗಮಲ್ಲನನ್ನು ತಂದೆಯಂತೆ ಮನ್ನಿಸುತ್ತಿದ್ದನು. ಜಗಮಲ್ಲನಿಗೆ ಈ ವಿಶಾಲವಾದ ಜಗತ್ತಿನಲ್ಲಿ ಎರಡೇ ಪ್ರೇಮಪಾತ್ರ ವಸ್ತುಗಳಿದ್ದವು. ಒಂದು ವಸ್ತುವೆಂದರೆ ನಾರಿಯಾದ ಕಲ್ಯಾಣಿ; ಎರಡನೆಯ ವಸ್ತುವೇ ಈ ಪಾಲಿತಪುತ್ರ ರಣಮಲ್ಲನು. ರಣಮಲ್ಲನೇನೂ ಸಾಮಾನ್ಯನಿದ್ದಿಲ್ಲ. ಅವನ ವಯಸ್ಸು ಇಪ್ಪತ್ತೈವರೊಳಗೆ ಇರಬಹುದು. ಅವನು ಯೌವನ-ಬಲಗಳ ಸಾಕ್ಷಾತ್ ಪ್ರತಿಮೆಯಾಗಿದ್ದನು ತನ್ನ ಪ್ರತಾಪಶಾಲಿಯಾದ ಪುತ್ರನು ತನ್ನ ಕಾರ್ಯವನ್ನು ಈಡೇರಿಸುವನೆಂಬ ಆತ್ಮವಿಶ್ವಾಸವು ಜಗಮಲ್ಲನಿಗಿತ್ತು.

'ಪಿತಾಜಿ!' ರಣಮಲ್ಲನು ಜಗಮಲ್ಲನನ್ನು ಕುರಿತು-"ನಾನು ನಿಶ್ಚಿತವಾದ ವೇಳೆಯಲ್ಲಿ ಸಿದ್ಧನಿರುತ್ತೇನೆ ನನ್ನ ಗರಡಿಯ ವೀರರಿಗೆ ಪ್ರಯಾಣದ ಸಿದ್ಧತೆ ಮಾಡಿಕೊಳ್ಳುವದಕ್ಕಾಗಿ ಸೂಚನೆ ಮಾಡುವದಕ್ಕೆ ಹೊರಡುವೆನು."

"ಓಹೋ! ಅವಶ್ಯವಾಗಿ ಹೊರಡು"

ರಣಮಲ್ಲನು ಗುಹೆಯಿಂದ ಹೊರಬಿದ್ದು ಬಾಣದಂತೆ ವೇಗದಿಂದ ಹೊರಟುಹೋದನು ಅವನ ಉತ್ಸಾಹಪೂರ್ವವಾದ ಪದಾಘಾತದ ಪ್ರತಿಧ್ವನಿಯು ಗುಹೆಯಲ್ಲಿ. ಕುಳಿತ ವೀರರ ಕರ್ಣರಂಧ್ರವನ್ನು ಪ್ರವೇಶಿಸತೊಡಗಿತು. ಅನಂತರದಲ್ಲಿ ಜಗಮಲ್ಲನು: -"ವೀರರೇ, ನೀವೆಲ್ಲರೂ ರಣಮಲ್ಲನನ್ನು ಸರದಾರನೆಂದು ತಿಳಿದು ಅವನ ಆಜ್ಞೆಯಂತೆ ನಡೆಯಬೇಕು. ಒಟ್ಟಿನ ಮೇಲೆ ನೀವೂ ರಣಮಲ್ಲನೂ ಬದುಕಿರುವವರೆಗೆ ನನ್ನ ಇಚ್ಛೆಯನ್ನು ಈಡೇರಿಸುವವಕ್ಕಾಗಿ ಯತ್ನಿಸಲಿಕ್ಕೆಬೇಕು. ಇದು ನನ್ನ ಆಜ್ಞೆಯಲ್ಲ; ಬಿನ್ನಹವೆಂದು

ತಿಳಿಯಿರಿ. ನೀವು ನನ್ನ ಇಚ್ಛೆಯನ್ನು ನೆರವೇರಿಸಿ, ವಿಜಯಧ್ವನಿ ಮಾಡಿದ್ದನ್ನು ನಾನು ಸ್ವರ್ಗದಲ್ಲಿ ಕೇಳಿ, ಅಲ್ಲಿಯೇ ಆನಂದಮಯನಾಗುವೆನು."

"ಸರದಾರರೇ!" ಧೀರಸಿಂಹನು ವಿನಯದಿಂದ:—"ನೀವು ಇಂತಹ ಅಭದ್ರವಾದ ಮಾತುಗಳನ್ನಾಡಕೂಡದು. ನೀವು ಸ್ವೀಕೃತಕಾರ್ಯವನ್ನು ಅವಶ್ಯವಾಗಿ ನೆರವೇರಿಸುವಿರಿ. ನಿಮಗೆ ವಿಜಯಾನಂದವು ಇಹಲೋಕದಲ್ಲಿಯೇ ದೊರೆಯುವದು."

"ಧೀರಸಿಂಹರೇ, ಹಾಗಾದರೆ ದೇವರ ಅನುಗ್ರಹವೆನ್ನುವೆನು. ಒಂದು ವೇಳೆ ದುರ್ದೈವದಿಂದ ವಿಪರೀತಸ್ಥಿತಿಯೊದಗಿದರೆ ಮಾತ್ರ ನೀವು ಭಗ್ನ ಮನೋರಥರಾಗದೆ, ನನ್ನ ಮಹತ್ವಾಕಾಂಕ್ಷೆ ಈಡೇರಿಸುವ ಭಾರವನ್ನು ವಹಿಸಿರಿ. ರಣಮಲ್ಲನು ನನ್ನಷ್ಟೇ, ಕಿಂಬಹುನಾ ನನಗಿಂತ ಹೆಚ್ಚು ಪ್ರತಿಭಾಶಾಲಿಯಿರುವನು. ಅವನ ಆಧಿಪತ್ಯದಲ್ಲಿ ನೀವು ಕೆಲಸ ಮಾಡಬೇಕೆಂದು ನನ್ನ ಇಚ್ಛೆಯಿದೆ."

"ಸರದಾರರೆ, ನೀವು ನಮ್ಮ ಪಂಚಪ್ರಾಣಗಳಂತಿರುವಿರಿ. ನಾವು ಜೀವಿಸಿರುವ ವರೆಗೆ ನಿಮ್ಮ ಜೀವಕ್ಕೆ ಅಪಾಯ ಮಾಡುವ ಧೈರ್ಯವು ಅದಾವನದು? ದೈವದುರ್ವಿಲಾಸದಿಂದ ನಿಮಗೆ ಅಕಾಲಮೃತ್ಯುವು ಒದಗಿದರೆ ರಣಮಲ್ಲರೇ ನಮಗೆ ಒಡೆಯರಾಗುವರು. ಈಗಿನಂತೆ ಆಗಲೂ ಸ್ವಾಮಿನಿಷ್ಠೆಯಿಂದ ವರ್ತಿಸುವೆವು." ಎಂದು ರಾಜಸಿಂಹನು ಮನಃಪೂರ್ವಕವಾಗಿ ಹೇಳಿದನು.

"ನಿಮ್ಮ ಮಾತುಗಳನ್ನು ಕೇಳಿ ನನ್ನ ಮನಸ್ಸು ಶಾಂತವಾಯಿತು. ನೀವು ಇನ್ನು ಈಗಲೇ ಹೋಗಿರಿ. ನಿಮ್ಮ ಸಿದ್ಧತೆ ಮಾಡಿಕೊಳ್ಳಿರಿ."

ಅಲ್ಲಿದ್ದ ಜನರೆಲ್ಲರೂ ಜಗಮಲ್ಲನ ಆಜ್ಞೆಯ ಮೇರೆಗೆ ಮುಂದಿನ ಕಾರಸ್ಥಾನದ ಸಿದ್ಧತೆಗಾಗಿ ಅಲ್ಲಿಂದ ಹೊರಟುಹೋದರು. ಮುಂದೆ ಸ್ವಲ್ಪ ವೇಳೆಯಲ್ಲಿ ಜಗಮಲ್ಲನ ಒಬ್ಬ ದೂತನು ಅಲ್ಲಿಗೆ ಬಂದು, ಒಡೆಯನ ಕಡೆಗೆ ಒಂದು ಪತ್ರವನ್ನು ಕೊಟ್ಟನು.

"ಇದು ಯಾರ ಪತ್ರವು?" ಜಗಮಲ್ಲನು ಸೇವಕನನ್ನು ಕೇಳಿದನು.

"ನಿಮ್ಮ ಅಣ್ಣಂದಿರದು." ಸೇವಕನು ವಿನಯದಿಂದ ಉತ್ತರವಿತ್ತನು.

ನಗದೇಶ ರಾಜಧಾನಿಯಿಂದ ಹೊರಟ ಮೇಲೆ ಜಗಮಲ್ಲನು ಅಣ್ಣನ ಮುಖವನ್ನು ಕಂಡಿದ್ದಿಲ್ಲ. ಪರಸ್ಪರ ಪತ್ರವ್ಯವಹಾರವೂ ಇದ್ದಿಲ್ಲ. ಅಂದು ಅಕಲ್ಪಿತವಾಗಿ ಪತ್ರವು ಬಂದದ್ದರಿಂದ, ಜಗಮಲ್ಲನಿಗೆ ಸೋಜಿಗವಾಯಿತು. ಅತ್ಯಾಚಾರಿಯಾದ ರಾಜನಲ್ಲಿ ನಿಷ್ಠೆಯುಳ್ಳವನಾಗಿ ನಡೆಯತೊಡಗಿದ್ದ ಮಯೂರಧ್ವಜನ ವರ್ತನದ ಬಗ್ಗೆ ಜಗಮಲ್ಲನು ತಿರಸ್ಕಾರಭಾವವನ್ನು ತಳೆದಿದ್ದನು.

ಅದಕ್ಕಾಗಿಯೆ ಅವನು ಪರಮಪೂಜ್ಯನಾದ ಅಣ್ಣನ ಉಪದೇಶವನ್ನು ತುಚ್ಛೀಕರಿಸಿ, ಕ್ರಾಂತಿಸಂಗ್ರಾಮಕ್ಕೆ ಸಿದ್ಧನಾಗಿದ್ದನು. ಆರು ತಿಂಗಳಿಲ್ಲದೆ ಇಂದು ಅಕಸ್ಮಾತ್ತಾಗಿ ಪತ್ರ ಬಂದದ್ದರಿಂದ, ಆವನಿಗೆ ವಿಸ್ಮಯವಾಯಿತು. ಆಗ ಅವನು ಸೇವಕನನ್ನು ಕುರಿತು:—"ಈ ಪತ್ರವನ್ನು ನಿನಗೆ ಯಾರು ಕೊಟ್ಟರು?"

"ಒಡೆಯರೆ, ಒಬ್ಬ ಕುದುರೆಯ ಸವಾರನು ಕೊಟ್ಟನು 'ಇದು ಮಯೂರಧ್ವಜ ಸೇನಾಪತಿಗಳ ಪತ್ರವು; ಇದನ್ನು ಬೇಗನೆ ನಿನ್ನ ಒಡೆಯನಿಗೆ ತಲುಪಿಸು' ಎಂದು ಹೇಳಿ ಅವನು ಹೊರಟು ಹೋದನು."

"ಒಳ್ಳೇದು; ನೀನು ಹೋಗು." ಎಂದು ಜಗಮಲ್ಲನು ಆ ಸೇವಕನನ್ನು ಕಳುಹಿಸಿ, ಪತ್ರವನ್ನು ಓದತೊಡಗಿದನು.

"ಪ್ರಿಯ ಬಂಧು, ಜಗಮಲ್ಲ!

ಇಂದು ಸಂಧ್ಯಾಕಾಲಕ್ಕೆ ಸುಹಾಗ ಕೆರೆಯ ದಂಡೆಯಲ್ಲಿ ನನಗೆ ಭೆಟ್ಟಿಯಾಗು. ಸಂಗಡ ಯಾರನ್ನೂ ಕರೆತರಲಾಗದು; ಕೇವಲ ನಿನ್ನ ಗೆಲವಿನ ಕತ್ತಿಯನ್ನು ಮಾತ್ರ ತರಬೇಕು. —ಮಯೂರಧ್ವಜ."

ಪತ್ರವನ್ನೋದಿದ ಕೂಡಲೆ ಜಗಮಲ್ಲನ ಹೃದಯವು ವಿಚಾರ ತರಂಗಯುಕ್ತವಾಯಿತು. ಅವನು ಎಷ್ಟು ಶೂರನೂ ಸಾಹಸಿಯೂ ಇದ್ದನೋ, ಅಷ್ಟೇ ಚತುರನೂ ಇದ್ದನು. ತನ್ನ ಅಣ್ಣನು ಬರಿಯ ಖಡ್ಗ ತರಬೇಕೆಂದು ತಿಳಿಸಿದ್ದರ ಇಂಗಿತವು ಹೊಳೆಯಲಿಕ್ಕೆ ಅವನಿಗೆ ಬಹಳ ವೇಳೆ ಹತ್ತಲಿಲ್ಲ. ಆಗ ಅವನು ಮನಸ್ಸಿನಲ್ಲಿ:—"ಕೇವಲ ಗೆಲವಿನ ಕತ್ತಿಯನ್ನು ತರಬೇಕೆ? ಕೇವಲ ಖಡ್ಗವನ್ನೆ? ಮತ್ತೆ ಯಾರನ್ನೂ ತರಬಾರದೆ? ತಿಳಿಯಿತು; ಎಲ್ಲ ಸಂಗತಿಯೂ ಗೊತ್ತಾಯಿತು. ಅಣ್ಣಾ, ನೀನು ಯಾವ ತಾಯಿಯ ಹಾಲು ಕುಡಿದು ಬೆಳೆದೆಯೋ, ನಾನಾದರೂ ಅವಳ ಹಾಲಿನಿಂದಲೆ ದೊಡ್ಡವನಾಗಿರುವೆನು ಯಾವ ಗುರುವಿನ ಶಿಕ್ಷಣದಿಂದ ನೀನು ಶಸ್ತ್ರವಿದ್ಯಾಪಾರಂಗತನಾದೆಯೋ, ಅದೇ ಗುರುವು ನನ್ನನ್ನು ಯುದ್ಧನಿಷ್ಣಾತನನ್ನು ಮಾಡಿರುವನು. ನಾನು ಬರುವೆನು; ಕೇವಲ ನನ್ನ ವಿಜಯಿ ಖಡ್ಗವನ್ನಷ್ಟೇ ತೆಗೆದುಕೊಂಡು ಬರುವೆನು." ಎಂದು ನುಡಿಯುತ್ತ, ಅತ್ತಿತ್ತ ತಿರುಗಾಡಹತ್ತಿದನು.

'ಪಿತಾಜಿ!' ರಣಮಲ್ಲನು ತಂದೆಯ ಬಳಿಗೆ ಬಂದು—"ನಿಮ್ಮ ಹೇಳಿಕೆಯಂತೆ ಎಲ್ಲ ಸಿದ್ಧತೆ ಮಾಡಿರುವೆನು. ಕಿರೀಟಸಿಂಹನಾದರೂ ನಮ್ಮ ಜೊತೆಯಲ್ಲಿ ಬರುವ ಇಚ್ಛೆಯುಳ್ಳವನಾಗಿರುವನು. ಆಜ್ಞೆಯಾದರೆ ಸಂಗಡ ಕರೆದುಕೊಳ್ಳುತ್ತೇನೆ. ಅವನೊಬ್ಬನಾದರೆ ನಾವು ಒಟ್ಟು ಒಂಬತ್ತು ಜನರಾಗುವೆವು."

'ರಣಮಲ್ಲ!' ಜಗಮಲ್ಲನು ವಿಚಾರ ತಂದ್ರಿಯಲ್ಲಿಯೆ—'ಇಂದು ಹೋ-

ಗುವದಾಗುವದಿಲ್ಲ.''

'ಅದೇಕೆ ಪಿತಾಜಿ?' ವಿಸ್ಮಯದಿಂದ ರಣಮಲ್ಲನು ಕೇಳಿದನು.

''ಇಂದು ನಾವು ಯಾವ ಮಹತ್ವದ ಕೆಲಸಕ್ಕೆ ಹೊರಡಬೇಕೆಂದು ನಿರ್ಧರಿಸಿದ್ದೆವೋ, ಅದಕ್ಕಿಂತ ಹೆಚ್ಚಿನ ಕೆಲಸಕ್ಕಾಗಿ ನಾನು ಇಂದು ಸಾಯಂ ಕಾಲಕ್ಕೆ ಹೊರಡಬೇಕಾಗಿದೆ.''

ಅಂದು ನಗದೇಶದ ರಾಜಮಂದಿರದ ಮೇಲೆ ದಾಳೀ ಮಾಡಿ, ರಾಣಾ ರಾಯಮಲ್ಲನನ್ನು ಸೆರೆಹಿಡಿದು ತರುವ ಮಹತ್ವದ ಕಾರ್ಯ ಮಾಡಬೇಕೆಂದು ನಿರ್ಧರಿಸಲ್ಪಟ್ಟಿತ್ತು. ಇಂತಹ ಕಾರ್ಯವನ್ನು ಬಿಟ್ಟು ಮತ್ತಾವ ದೊಡ್ಡ ಕೆಲ ಸಕ್ಕೆ ಹೋಗುವ ಪ್ರಸಂಗವೊದಗಿರಬಹುದೆಂದು ರಣಮಲ್ಲನು ವಿಚಾರಕ್ಕೊಳ ಗಾದನು. ಈ ವಿಷಯದಲ್ಲಿ ತಂದೆಯನ್ನು ಕೇಳುವ ಧೈರ್ಯವು ಅವನಿ ಗಾಗದ್ದರಿಂದ, ಅಲ್ಲಿಂದ ಸುಮ್ಮನೆ ಹೊರಡಲನುವಾಗಿ—''ಪಿತಾಜಿ, ನಾನು ಹೋಗುತ್ತೇನೆ.'' ''ಒಳ್ಳೇದು, ಹೋಗು.''

ರಣಮಲ್ಲನು ಹೊರಟನು. 'ರಣಮಲ್ಲ!' ಜಗಮಲ್ಲನು ಕೂಗಿದನು.

'ಪಿತಾಜಿ!' ''ನೀನು ಬೇಗನೆ ಇಲ್ಲಿಗೆ ಬರಬಹುದಲ್ಲವೆ?''

''ಇಂದಿನ ಕಾರ್ಯಕ್ರಮವು ನಿಲ್ಲಿಸಲ್ಪಟ್ಟಿತೆಂದು ಎಲ್ಲ ಅನುಯಾಯಿ ಗಳಿಗೆ ತಿಳಿಸಿದವನೇ ಬರುವೆನು.''

''ಬರುವಾಗ ಲೇಖನ ಸಾಮಗ್ರಿಯನ್ನು ತೆಗೆದುಕೊಂಡು ಬಾ.''

'ಒಳ್ಳೇದು.'

ರಣಮಲ್ಲನು ಲಗುಬಗೆಯಿಂದ ನಡೆದನು. ಜಗಮಲ್ಲನು ಅವನನ್ನು ಕಣ್ಣುಮರೆಯಾಗುವವರೆಗೂ ದಿಟ್ಟಿಸಿ ನೋಡಹತ್ತಿದ್ದನು. ಅವನು ಕಣ್ಣಿಗೆ ಕಾಣದ ಹಾಗಾದ ಮೇಲೆ ಜಗಮಲ್ಲನು ತನ್ನೊಳಗೆ-''ಎಂತಹ ತೇಜಸ್ವಿಯಾದ ಬಾಲಕನಿವನು! ಗೌರವರ್ಣದ ಮುಖದಲ್ಲಿಯ ರಕ್ತಿಮೆಯನ್ನು ನೋಡಿದರೆ, ವೀರವಹ್ನಿಯ ಕಣಗಳು ಹೊರಬೀಳುತ್ತಿರುವಂತೆ ಭಾಸವಾಗುತ್ತಲಿದೆ. ಈ ವಿಶಾಲವಾದ ಜಗತ್ತಿನಲ್ಲಿ ಎರಡೇ ಜೀವಗಳು ನನ್ನ ಪ್ರೇಮವನ್ನು ಆಕರ್ಷಿ ಸಿರುವವು. ಕಲ್ಯಾಣಿಯೊಬ್ಬಳು ಸ್ತ್ರೀಯು. ಅವಳು ನನ್ನ ಪ್ರೇಮವನ್ನು ಆಕರ್ಷಿಸಿದ್ದರೂ ನಿಷ್ಫಲವಾಯಿತು. ನನ್ನ ಮನೋಭಂಗ ಮಾಡಿದ ರಾಣಾ ರಾಯಸಿಂಹನ ಮೇಲಿನ ಸೇಡು ತೀರಿಸಿಕೊಳ್ಳುವವರೆಗೆ ಸಂತಪ್ತವಾದ ಹೃದ ಯವು ಶಾಂತವಾಗುವಂತಿಲ್ಲ. ಇನ್ನು ಎರಡನೆಯ ಪ್ರೇಮದ ವಸ್ತುವೆಂದರೆ ರಣ ಮಲ್ಲನು. ರಣಮಲ್ಲನಲ್ಲಿರಿಸಿದ ನನ್ನ ಪ್ರೇಮವಾದರೂ ಸಾರ್ಥಕವಾಗಬಹುದೆ? ಇಂದು ಸುಹಾಗ ಪುಷ್ಕರಣಿಯ ಬಳಿಯಲ್ಲಿ ಅಣ್ಣನ ಭೆಟ್ಟಿಯಾದ ಮೇಲೆ

ಯಾವದೊಂದು ಅನಿಷ್ಟ ಪ್ರಸಂಗವೊದಗಿದರೆ?...."

ಅವನ ಮುಖದಿಂದ ಮುಂದೆ ಶಬ್ದಗಳು ಹೊರಡದಂತಾದವು. ಅವನು ನಿರ್ಬಲವೂ ಮೋಹವಿಕಾರಯುಕ್ತವೂ ಆದ ಮನಸ್ಸನ್ನು ಗಟ್ಟಿ ಮಾಡುವದಕ್ಕಾಗಿ ಪ್ರಯತ್ನಿಸತೊಡಗಿದನು. ಮುಂದೆ ಸ್ವಲ್ಪವೇಳೆಯಲ್ಲಿ ಅವನ ನೇತ್ರಗಳು ಸತೇಜವಾದವು. ಮುಖವು ಆರಕ್ತತೆಯನ್ನು ಹೊಂದಿತು.

"ನಾನು ಜೀವಿಸಿರುವ ವರೆಗೆ ರಾಣಾನ ಮೇಲಿನ ಸೇಡು ತೀರಿಸಿಕೊಳ್ಳಲಿಕ್ಕೆ ಯತ್ನಿಸುವವನೇ. ಒಂದು ವೇಳೆ ಅನಿಷ್ಟವೊದಗುವ ಲಕ್ಷಣ ತೋರಿದರೆ, ನನ್ನ ಪಾಲಿತ ಪುತ್ರನಾದ ರಣಮಲ್ಲನಿಂದಾದರೂ ಕಾರ್ಯ ಸಾಫಲ್ಯವಾಗುವಂತೆ ವ್ಯವಸ್ಥೆ ಮಾಡುವೆನು." ಎಂದು ಜಗಮಲ್ಲನು ತನ್ನೊಳಗೆ ತಾನೇ ಯೋಚಿಸುತ್ತಿರುವಾಗ, ರಣಮಲ್ಲನು ಲೇಖನಸಾಮಗ್ರಿಗಳನ್ನು ತೆಗೆದುಕೊಂಡು ಅಲ್ಲಿಗೆ ಬಂದನು.

ಜಗಮಲ್ಲನು ಪತ್ರ ಬರೆಯತೊಡಗಿದನು. ರಣಮಲ್ಲನು ಅವನ ಎದುರಿಗೆ ಸ್ವಸ್ಥವಾಗಿ ಕುಳಿತುಕೊಂಡನು. ಆಗ ಆ ಗುಹೆಯಲ್ಲಿ ಶಾಂತತಾಸಾಮ್ರಾಜ್ಯವು ವ್ಯಾಪಿಸಿತ್ತು. ರಣಮಲ್ಲನು ಪತ್ರ ಬರೆಯತೊಡಗಿದ ತಂದೆಯ ಮುಖಾವಲೋಕನ ಮಾಡತೊಡಗಿದನು. ಅವನ ಮುಖದಲ್ಲಿ ಅಂದಿನಂತಹ ಗಾಂಭೀರ್ಯ ನೆಲೆಗೊಂಡದ್ದನ್ನು ರಣಮಲ್ಲನು ಮೊದಲು ಎಂದೂ ಕಂಡಿದ್ದಿಲ್ಲ.

ಪತ್ರಬರೆಯುವದಾದ ಮೇಲೆ ಜಗಮಲ್ಲನು ಅದನ್ನು ವಾತಾವರಣದಲ್ಲಿ ಅತ್ತ ಇತ್ತ ತಿರುಗಿಸಿದನು. ಅದು ಪೂರಾ ಆರಿದ್ದನ್ನು ನೋಡಿ, ಮಡಿಚಿ—

"ರಣಮಲ್ಲ!" "ಪಿತಾಜಿ!" "ಇತ್ತ ಮುಂದೆ ಬಾ."

ರಣಮಲ್ಲನು ಮುಂದೆ ಹೋಗಿ ತಂದೆಯ ಬಳಿಯಲ್ಲಿ ಕುಳಿತನು.

"ಈ ಪತ್ರವನ್ನು ನಿನ್ನ ಕೊರಳೊಳಗಿನ ತಾಯಿತದಲ್ಲಿ ಹಾಕುತ್ತೇನೆ. ನನ್ನ ಮೃತ್ಯುವಿನ ವಾರ್ತೆಯನ್ನು ನೀನು ಯಾವಾಗ ಕೇಳುವೆಯೋ, ಆಗ ನೀನು ತಾಯಿತದೊಳಗಿನ ಈ ಪತ್ರವನ್ನು ನನ್ನ ಪರಮ ಪೂಜ್ಯ ಬಂಧುಗಳಾದ ಮಯೂರಧ್ವಜರ ಕಡೆಗೆ ಕೊಡು." ಎಂದು ನುಡಿದು, ಜಗಮಲ್ಲನು ಪತ್ರವನ್ನು ತಾಯಿತದಲ್ಲಿರಿಸಿ-"ಮಧ್ಯದಲ್ಲಿ ಮಾತ್ರ ಇದನ್ನು ತೆಗೆದು ಕೊಡಬೇಡ."

ತಾಯಿತವನ್ನು ಕಟ್ಟುವಾಗ ಜಗಮಲ್ಲನ ಕೈಗಳು ನಡುಗತೊಡಗಿದ್ದವು. ಮುಖದಲ್ಲಿ ಎಂದೂ ಕಾಣದಿದ್ದಂತಹ ವಿಶಿಷ್ಟವಾದ ಕಳೆಯು ಬಂದಿತ್ತು.

ಈ ದೃಶ್ಯವನ್ನು ನೋಡಿ ರಣಮಲ್ಲನ ಎದೆಯು ಹಾರತೊಡಗಿತು. ಮುಂದೆ ಯಾವದಾದರೊಂದು ಅಘಟಿತ ಕೃತ್ಯವು ಘಟಿಸುವದಿರುವದೋ ಏನೋ ಎಂದು ಅವನು ವಿಚಾರಮಗ್ನನಾದನು.

ತಾಯಿತದಲ್ಲಿ ಪತ್ರವನ್ನು ಹಾಕಿದ ಮೇಲೆ ಜಗಮಲ್ಲನು ಮಗನ ಲಲಾಟವನ್ನು ಚುಂಬಿಸಿ—"ರಣಮಲ್ಲ, ಈಗ ನೀನು ಹೋಗು. ನಾನು ಬೇರೆ ಕಡೆಗೆ ಹೋಗಬೇಕಾಗಿದೆ. ನಿನಗೆ ನಾನು ಕೊನೆಯ ಮಾತು ಹೇಳುವದೇನಂದರೆ, ನಿನ್ನನ್ನು ನಾನು ಮಗನೆಂದು ಭಾವಿಸಿ ರಕ್ಷಿಸಿರುವೆನು. ನೀನು ಇಡೀ ಆಯುಷ್ಯದಲ್ಲಿ ಯಾರಿಗೂ ಅಂಜಬೇಡ. ಜೀವನರೂಪಿಯಾದ ತಕ್ಕಡಿಯ ಒಂದು ಪರಡಿಯಲ್ಲಿ ವೀರತ್ವವನ್ನೂ, ಎರಡನೇ ಪರಡಿಯಲ್ಲಿ ಪ್ರಾಣವನ್ನೂ ಇಟ್ಟು, ಸಾಹಸ ಮಾಡು ನನ್ನ ಉತ್ಕಟೇಚ್ಛೆಯನ್ನು-ರಾಣಾನ ಮೇಲಿನ ಸೇಡು ತೀರಿಸಿಕೊಳ್ಳುವದನ್ನು-ಮರೆಯಬೇಡ."

ಜಗಮಲ್ಲನ ಭಾಷಣವು ವಾತ್ಸಲ್ಯಯುಕ್ತವೂ, ಕರುಣಾರಸಪೂರ್ಣವೂ, ವೀರಶ್ರೀಮಂಡಿತವೂ ಆದ ಅವನ ಹೃದಯದ ಭಾವನೆಯ ಕಂಪನವಾಗಿತ್ತು.

"ಪಿತಾಜಿ!" ಜಗಮಲ್ಲನ ಮಾತುಗಳನ್ನು ಕೇಳಿ, ರಣಮಲ್ಲನು ಆವೇಶಗೊಂಡು—"ನಿಮ್ಮಂತಹ ದಿವ್ಯಪ್ರತಾಪಶಾಲಿಗಳಲ್ಲಿ ಬೆಳೆದು ದೊಡ್ಡವನಾಗಿ, ನಿಮ್ಮಲ್ಲಿಯೇ ಉಚ್ಚತಂದ ನೈತಿಕಶಿಕ್ಷಣವನ್ನೂ ಯುದ್ಧಶಿಕ್ಷಣವನ್ನೂ ಹೊಂದಿ, ನಿಮ್ಮ ಇಚ್ಛೆಯನ್ನು ನೆರವೇರಿಸದಿದ್ದರೆ ನಾನು ಅಧಮನಾಗಲಿಕ್ಕಿಲ್ಲವೆ? ನೀವು ನಿಶ್ಚಿಂತಭಾವದಿಂದಿರಬೇಕು. ಶೌರ್ಯವೇ ನನ್ನ ಶ್ವಾಸೋಚ್ಛ್ವಾಸವಿರುವದು. ಪಿತಾಜಿ, ನೀವು ಇಂದು ಈ ಬಗೆಯ ಭಾಷಣಮಾಡುತ್ತಿರುವ ಉದ್ದೇಶವೇನು? ಏನಾದರೂ ಅನಿಷ್ಟಕಾರಕವೂ ಚಿಂತಾಜನಕವೂ ಆದ ಪ್ರಸಂಗವಿರುವದಿಲ್ಲವಷ್ಟೆ?"

ಜಗಮಲ್ಲನು ತನ್ನ ಮುಖದಲ್ಲಿ ಕೃತ್ರಿಮ ಹಾಸ್ಯವನ್ನು ತಂದುಕೊಂಡನು. ಅನಂತರದಲ್ಲಿ ಬಲುಮೆಯ ಗಾಂಭೀರ್ಯಭಾವವನ್ನು ತಳೆದು:—"ಛೇ! ಚಿಂತಾಜನಕ ಪರಿಸ್ಥಿತಿಯೇನೂ ಇರುವದಿಲ್ಲ. ಪ್ರಸಂಗಗಳು ಹೇಳಿ ಕೇಳಿ ಬರುತ್ತಿರುವದಿಲ್ಲ. ಅಂತೆಯೆ ಎಲ್ಲ ವಿಧದ ವಿಷಯಗಳ ಬಗ್ಗೆ ಮುಂದಾಗಿ ವ್ಯವಸ್ಥೆ ಮಾಡಿಡುವದು ಒಳ್ಳೇದು. ರಣಮಲ್ಲ, ನಿನ್ನ ಕೊರಳೊಳಗಿನ ತಾಯಿತದಲ್ಲಿ ಹಾಕಿದ ಪತ್ರದ ವಿಷಯವನ್ನು ಮಾತ್ರ ಮರೆಯಬೇಡ. ಮಗೂ, ಇನ್ನೊಮ್ಮೆ ನಿನ್ನ ಲಲಾಟದ ಚುಂಬನವನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯಾಗಿದೆ, ಮುಂದೆ ಬಾ."

ರಣಮಲ್ಲನು ಮುಂದೆ ಬಂದನು. ಜಗಮಲ್ಲನು ಅರ್ಧೋನ್ಮೀಲಿತ ನೇತ್ರಗಳುಳ್ಳವನಾಗಿ ಅವನ ಲಲಾಟದ ಚುಂಬನವನ್ನು ತೆಗೆದುಕೊಂಡನು. ಆಗ ಜಗಮಲ್ಲನ ಉಷ್ಣಶ್ವಾಸವು ರಣಮಲ್ಲನ ಮುಖಮಂಡಲವನ್ನು ಸ್ಪರ್ಶಮಾಡಿದ್ದರಿಂದ ಅವನ ಹೃದಯದಲ್ಲಿ ವಾತ್ಸಲ್ಯದ ಉಷ್ಣತೆಯು ಪಸರಿಸಿತು.

'ರಣಮಲ್ಲ!' ಚುಂಬನವನ್ನು ತೆಗೆದುಕೊಂಡ ಮೇಲೆ ಜಗಮಲ್ಲನು— "ಇನ್ನು ನೀನು ಬೇಕಾದಲ್ಲಿಗೆ ಹೊರಡು. ದೇವರು ನಿನಗೆ ಸರ್ವದಾ ಕಲ್ಯಾಣ ಮಾಡಲಿ!"

ರಣಮಲ್ಲನು ಗಹನವಾದ ವಿಚಾರತಂದ್ರಿಯಲ್ಲಿ ಮುಳುಗಿ, ತಂದೆಯ ಚರಣ ರಜವನ್ನು ಮಸ್ತಕದಲ್ಲಿರಿಸಿಕೊಂಡು, ಮಂದಗತಿಯಿಂದ ತನ್ನ ತಂಡವು ವಾಸಿಸಿದ ಸ್ಥಳಕ್ಕೆ ತೆರಳಿದನು.

ಅನಂತರದಲ್ಲಿ ಜಗಮಲ್ಲನು ಗುಹೆಯೊಳಗೆ ಹೋದನು. ಅಲ್ಲಿಯ ಒಂದು ಗೋಡೆಗೆ ತೂಗಹಾಕಿದ್ದ ತನ್ನ ಗೆಲುವಿನ ಕತ್ತಿಯನ್ನು ಕಡೆಗೆ ತೆಗೆದುಕೊಂಡನು. ಆಗ ಅವನು ಮನಸ್ಸಿನಲ್ಲಿ—"ಒಮ್ಮೊಮ್ಮೆ ಜಡಪದಾರ್ಥಗಳಾದರೂ ಮನುಷ್ಯನ ಸಿದ್ಧಾಂತದ ಪಾಲನೆ-ಪೋಷಣೆ ಮಾಡಲಿಕ್ಕೆ ಎಷ್ಟು ಉಪಯೋಗ ಬೀಳುವವು! ಈಗ ಈ ನನ್ನ ವಿಜಯಿ ಖಡ್ಗವು ನಗದೇಶ ರಾಜ್ಯದಲ್ಲಿ ಕೊಲೆ-ಸುಲಿಗೆ ಮಾಡಲಿಕ್ಕೆ ಉಪಯೋಗವಾಯಿತು; ಮುಂದೆ ಜೀವಿಸಿ ಉಳಿದರೆ, ರಾಣಾನ ಸೇಡು ತೀರಿಸಿಕೊಳ್ಳಲಿಕ್ಕೂ ಇದು ಅನುಕೂಲಿಸುವದು. ಈ ನನ್ನ ಗೆಲವಿನ ಕತ್ತಿಯು ನನ್ನ ಕೊನೆಯ ಶ್ವಾಸದ ವರೆಗೆ ನನ್ನನ್ನು ನಿಶ್ಚಯವಾಗಿ ವಿಜಯಿಯನ್ನಾಗಿ ಮಾಡುವದು." ಎಂದು ನುಡಿದು, ಅದನ್ನು ಟೊಂಕಕ್ಕೆ ಕಟ್ಟಿದನು. ತರುವಾಯ ಅಲ್ಲಿಯೇ ಇದ್ದ ಢಾಲನ್ನು ಬೆನ್ನಿಗೆ ಕಟ್ಟಿಕೊಂಡು ಗುಹೆಯಿಂದ ಹೊರಬಿದ್ದನು. ಆಗ ಸೂರ್ಯನು ಪಶ್ಚಿಮಾಕಾಶವನ್ನು ಸಮೀಪಿಸಹತ್ತಿದ್ದನು. ಇನ್ನು ಕ್ಷಣಮಾತ್ರವಾದರೂ ತಡಮಾಡುವದುಚಿತವಲ್ಲೆಂದು ತಿಳಿದು, ಅವನು ಗುಹೆಯ ದ್ವಾರದಲ್ಲಿದ್ದ ತನ್ನ ಸುಸಜ್ಜಿತವಾದ ಕುದುರೆಯನ್ನೇರಿ, ಪರಮಾತ್ಮನನ್ನು ಅನನ್ಯಭಾವದಿಂದ ಪ್ರಾರ್ಥಿಸುತ್ತ, ವಾಯುಗತಿಯಿಂದ ಸುಹಾಗ ಪುಷ್ಕರಣಿಯ ಮಾರ್ಗವನ್ನು ಹಿಡಿದು ನಡೆದನು.

---

## ನ್ಯಾಯನಿಷ್ಠ ಸುಲಿಗೆಗಾರ.

ನಗದೇಶದ ರಾಜಧಾನಿಯಿಂದ ಸ್ವಲ್ಪ ಅಂತರದ ಮೇಲೆ ಇದ್ದ ಮರಡಿಯ ಪ್ರದೇಶದಲ್ಲಿ ಒಂದು ಶಿವಾಲಯವಿತ್ತು. ಆ ಮಂದಿರವನ್ನು ಎಂದು, ಯಾರ್‍ರು ಕಟ್ಟಿದರೆಂಬ ಇತಿಹಾಸವು ಯಾರಿಗೂ ಗೊತ್ತಿರದಿದ್ದರೂ, ಅದರ ಪ್ರಾಚೀನ ಮಹತ್ವ-ಗೌರವಗಳಿಗೆ ಸಾಕ್ಷೀಭೂತವಾಗಿತ್ತೆಂಬವರಲ್ಲಿ ಸಂದೇಹವಿದ್ದಿಲ್ಲ. ಆ ದೇವಸ್ಥಾನದಲ್ಲಿ ಪ್ರತಿವರ್ಷ ಮಹಾಶಿವರಾತ್ರಿಯ ದಿನ ಪೂಜೆ-ಅಭಿಷೇಕಗಳು ಒಳ್ಳೆಯ ವಿಜೃಂಭಣೆಯಿಂದ ನಡೆಯುತ್ತಿದ್ದವು. ಅಂದು ರಾಣಾರಾಯ

ಸಿಂಹನ ಕನ್ಯೆ ಕುಮಾರೀ ಶೀಲವತೀದೇವಿಯು ಅಲ್ಲಿಗೆ ಪೂಜೆಗಾಗಿ ಬರುತ್ತಿದ್ದಳು.

ಸಂಧ್ಯಾ ಸಮಯವಾಗಿತ್ತು. ಉಗ್ರವಾದ ಆತಪದಿಂದ ಸೃಷ್ಟಿಯನ್ನು ತಲ್ಲಣಗೊಳಿಸಿದ ಭಾಸ್ಕರನು ಪಶ್ಚಿಮಾಂಬುಧಿಯಲ್ಲಿ ಧುಮುಕಲಿಕ್ಕೆ ಸಿದ್ಧನಾಗಿದ್ದನು. ಸೂರ್ಯಾಸ್ತಸಮಯವಾಗಿದ್ದರೂ ಉಷ್ಣತೆಯು ಕಡಿಮೆಯಾಗದ್ದರಿಂದ ಜನರ ಮುಖದಿಂದ 'ಶಿವ! ಶಿವ!' ಎಂಬ ಉದ್ಗಾರವು ಹೊರಡುತ್ತಲಿತ್ತು. ಜನರು ಶಿವಾಲಯಕ್ಕೆ ಹೋಗಿ ಪ್ರದೋಷ ಪೂಜೆಯನ್ನು ನೆರವೇರಿಸತೊಡಗಿದ್ದರು. ಪೂಜಾರಿಯು ಮಹಾದ್ವಾರದ ಬಳಿಯಲ್ಲಿ ನಿಂತು, ರಾಜಕುಮಾರಿ ಶೀಲವತಿಯ ಆಗಮನವನ್ನು ಒಳ್ಳೆಯ ಆಸ್ಥೆಯಿಂದ ನಿರೀಕ್ಷಿಸತೊಡಗಿದ್ದನು. ಬರಬರುತ್ತ ಶಿವಮಂದಿರದಲ್ಲಿಯ ಭಕ್ತರೆಲ್ಲರೂ ಹೊರಟು ಹೋ-ದರು. ಇಷ್ಟು ವೇಳೆಯಾದರೂ ರಾಜಕುಮಾರಿಯು ಬಾರದೆ ಇರುವ ಕಾರಣವೇನಿರಬಹುದೆಂದು ಪೂಜಾರಿಯು ಯೋಚನೆಗೊಳಗಾದನು ಅವನು ಕ್ಷಿತಿಜದ ವರೆಗಿನ ಪ್ರದೇಶವನ್ನು ಎವೆಯಿಕ್ಕದೆ ದಿಟ್ಟಿಸಿ ನೋಡುತ್ತ ನಿಂತುಕೊಂಡಿದ್ದನು. ಇಡಿಯ ವರ್ಷದಲ್ಲಿ ಆದೇ ದಿನವು ಅವನ ಭಾಗ್ಯದ ದಿನವಾಗಿತ್ತು; ಯಾಕಂದರೆ ರಾಜಕುಮಾರಿಯು ರುದ್ರಾಭಿಷೇಕ ಮಾಡಿಸಿ, ಪೂಜಾರಿಗೆ ಭೂರಿ ದಕ್ಷಿಣೆಯಿತ್ತು, ಅವನನ್ನು ಸಂತುಷ್ಟಗೊಳಿಸುತ್ತಿದ್ದಳು.

ಎಷ್ಟೋ ವೇಳೆಯ ಮೇಲೆ ದೂರದಲ್ಲಿ ಧೂಳವೆದ್ದಂತೆ ಪೂಜಾರಿಗೆ ಕಂಡಿತು. ಆಗ ಅವನಿಗೆ ಜೀವದಲ್ಲಿ ಜೀವ ಬಂದಂತಾಯಿತು. ಯಾವದೊಂದು ನಿಮಿತ್ಯದಿಂದ ರಾಜಕುಮಾರಿಯ ಆಗಮನಕ್ಕೆ ವಿಘ್ನವೊದಗಿ, ತನಗೆ ಪ್ರಾಪ್ತವಾಗುವ ಲಾಭವೆಲ್ಲ ನಷ್ಟವಾಗುವದೋ, ಎಂದು ಅವನು ಎದೆಯೊಡೆದಿದ್ದನು. ಮುಂದೆ ಸ್ವಲ್ಪ ವೇಳೆಯಲ್ಲಿ ರಾಜಕುಮಾರಿಯು ರಕ್ಷಕ ಸೇನೆಯೊಡನೆ ಶಿವಮಂದಿರವನ್ನು ಸಮೀಪಿಸಿದಳು. ಶಿಬಿಕೆಯು ಮಹಾದ್ವಾರದ ಬಳಿಗೆ ಬಂತು. ಶಿಬಿಕಾಧಾರಿಗಳು ಅದನ್ನು ಕೆಳಗಿಳಿಸಿದರು. ಕೂಡಲೆ ರಾಜಕುಮಾರಿಯೂ ದಾಸಿಯಾದ ಸುರೂಪೆಯೂ ಶಿಬಿಕೆಯಿಂದಿಳಿದು, ದ್ವಾರದಲ್ಲಿದ್ದ ಪೂಜಾರಿಗೆ ನಮಸ್ಕರಿಸಿ, ಮಂದಿರವನ್ನು ಪ್ರವೇಶಿಸಿದರು. ಕಾವಲುಗಾರರು ದ್ವಾರದಲ್ಲಿಯೇ ಉಳಿದರು.

ಪೂಜಾರಿಯು ಶಿವಾಲಯದಲ್ಲಿ ದೀಪಹಚ್ಚಿದನು. ಅಂಧಕಾರದಲ್ಲಿ ವಾಸಮಾಡಿದ್ದ ನೀಲಕಂಠಮಹಾದೇವನ ಮೂರ್ತಿಯು ಪ್ರಕಾಶಸ್ನಾನ ಮಾಡಲಾರಂಭಿಸಿತು. ರಾಜಕನ್ಯೆಯು ಮೂರ್ತಿಯ ಬಳಿಗೆ ಹೋಗಿ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ 'ಶಂಭೋ, ಹರಹರ ಮಹಾದೇವ!' ಎಂದು ನಾಮಘೋಷ ಮಾಡಿದಳು. ಸುರೂಪೆಯು ಬಳಿಯಲ್ಲಿ ತಂದ ಪೂಜಾ

ಸಾಮುಗ್ರಿಗಳನ್ನು ಪೂಜಾರಿಯ ಕಡೆಗೆ ಒಪ್ಪಿಸಿದಳು. ಕೂಡಲೆ ಅಭಿಷೇಕವು ಪ್ರಾರಂಭವಾಯಿತು. ಅಭಿಷೇಕವು ಮುಗಿದ ಮೇಲೆ ರಾಜಕುಮಾರಿಯು ಪೂಜಾರಿಯ ಮನಸ್ಸು ಸಮಾಧಾನಗೊಳ್ಳುವಂತೆ ದಕ್ಷಿಣೆ ಕೊಟ್ಟಳು. ಅನಂತರದಲ್ಲಿ ಅವಳು ಮಹೇಶ್ವರನ ಮುಂದೆ ಕೈಜೋಡಿಸಿ ನಿಂತು, ದಾಸಿಯಾದ ಸುರೂಪೆಯನ್ನು ಕುರಿತು:—"ಸುರೂಪೆ, ಮಹಾದೇವನನಲ್ಲಿ ಯಾವ ವರವನ್ನು ಬೇಡಲಿ?"

"ದೇವಿ!" ಸುರೂಪೆಯು ನಸುನಗುತ್ತ:-"ಈ ವಿಷಯದಲ್ಲಿ ನಾನೇನು ಹೇಳಲಿ? ಇಚ್ಛಿತ ವರವನ್ನು ಬೇಡಬಹುದು."

"ಸುರೂಪೆ, ಶಂಕರನಲ್ಲಿ ಅದ್ವಿತೀಯವಾದ ಸಹನಶಕ್ತಿಯಿರುವದು. ಅಂತಹ ಶಕ್ತಿಯನ್ನೇ ದಯಪಾಲಿಸೆಂದು ವರಯಾಚನೆ ಮಾಡುವದು ಶ್ರೇಯಸ್ಕರವು" ಎಂದು ರಾಜಕುಮಾರಿಯು ನುಡಿದು—"ದೇವಾ! ಸಮುದ್ರಮಥನ ಕಾಲದಲ್ಲಿ ಹೊರಟ ಹಾಲಾಹಲವನ್ನು ಸಹರ್ಷವಾಗಿ ಹೇಗೆ ಕಂಠದಲ್ಲಿರಿಸಿ ಕೊಂಡಿರುವೆಯೋ, ಹಾಗೆಯೇ ಸಂಸಾರದೊಳಗಿನ ವಿಷಮಯವಾದ ದುಃಖವನ್ನು ಹೃದಯದಲ್ಲಿ ಧಾರಣಮಾಡುವಂತಹ ಶಕ್ತಿಯನ್ನು ಕೊಡು. ಗಿರಿಜಾಪತೆ! ಬ್ರಹ್ಮದೇವನು ಸೃಷ್ಟಿಕರ್ತನೂ, ವಿಷ್ಣುವು ಸೃಷ್ಟಿಸಂರಕ್ಷಕನೂ, ನೀನು ಸೃಷ್ಟಿಸಂಹಾರಕನೂ ಎಂದು ಶ್ರುತಿಗಳು ಸಾರುವವು. ಸೃಷ್ಟಿಸಂಹಾರಕನಾದ ನಿನಗೆ ಪ್ರಾರ್ಥಿಸುವದೇನಂದರೆ, ನನ್ನಲ್ಲಿಯ ವಿಷಯವಾಸನೆಯನ್ನೂ ಮಲಿನ ವಿಚಾರಗಳನ್ನೂ ಸಂಹರಿಸು. ಪಾರ್ವತಿಪತೆ, ಇದಕ್ಕಿಂತ ಹೆಚ್ಚಿಗೆ ನಾನು ನಿನ್ನಲ್ಲಿ ಏನನ್ನೂ ಬೇಡುವದಿಲ್ಲ. ಇವೆರಡು ವರಗಳನ್ನು ಕೊಡಬೇಕೆಂದು ಅನನ್ಯಭಾವದಿಂದ ಪ್ರಾರ್ಥಿಸುವೆನು. ಪಾರ್ವತಿಪತೆ, ನನ್ನ ಪ್ರಣಾಮುಗಳನ್ನು ಸ್ವೀಕರಿಸು."

ರಾಜಕುಮಾರಿಯು ಶಿವಸ್ತುತಿ ಮಾಡುವಾಗ ಪೂಜಾರಿಯೂ, ದಾಸಿಯೂ, ಸಂರಕ್ಷಕ ಸೈನಿಕರೂ ಅಲ್ಲಿಯೇ ನಿಂತಿದ್ದರು. ಅವಳ ಸ್ತುತಿಯನ್ನು ಕೇಳಿ ಎಲ್ಲರಲ್ಲೂ ಭಕ್ತಿಭಾವವು ಉತ್ಪನ್ನವಾಯಿತು. ಯಾವಾಗಲೂ ಶಿವಾಲಯದಲ್ಲಿ ವಾಸಿಸುವದು, ಶಿವಮೂರ್ತಿಯನ್ನು ನೋಡುವದು ಮೊದಲಾದ ನಿಕಟಸಹವಾಸದಿಂದ ಭಕ್ತಿಯ ಚಮತ್ಕೃತಿ ಪ್ರಭಾವವನ್ನು ಮರೆತಿದ್ದ ಪೂಜಾರಿಯು, ರಾಜಕುಮಾರಿಯ ಶಂಕರಸ್ತುತಿಯನ್ನು ಕೇಳಿದ ಮೇಲೆ, ಅತಿ ಪರಿಚಯದಿಂದ ಅವಜ್ಞೆಹೊಂದಿದ್ದ ಅವನ ಶಂಕರಭಕ್ತಿಯು ಉಜ್ವಲಗೊಂಡಿತು. ರಾಜಕುಮಾರಿಯ ಸಂಸ್ಕಾರಶೀಲವೂ ಭಕ್ತಿಪೂರ್ಣವೂ ಆದ ಸ್ತೋತ್ರದಿಂದ ಎಲ್ಲರೂ ಚಕಿತರಾದರು.

ರಾಜಕುಮಾರಿಯು ಮತ್ತೊಮ್ಮೆ ಶಂಕರನಿಗೆ ನಮಸ್ಕರಿಸಿ, ಅಲ್ಲಿಂದ

ಹೊರಟಳು. ಸುರೂಪೆಯು ಅವಳ ಹಿಂದೆ ನಡೆದಳು. ಅವರು ಮಹಾದ್ವಾರದ ಬಳಿಗೆ ಬಂದರು. ಬೋವಿಗಳು ಶಿಬಿಕೆಯನ್ನು ಹೊರಲಿಕ್ಕೆ ಸಿದ್ಧರಾಗಿ ನಿಂತಿದ್ದರು. ಅಷ್ಟರಲ್ಲಿ ಕುದುರೆಗಳ ಖುರಪುಟಧ್ವನಿಯು ಕೇಳಲಾರಂಭಿಸಿತು. ಎಲ್ಲರೂ ಚಕಿತದೃಷ್ಟಿಯಿಂದ ಧ್ವನಿಯು ಕೇಳುತ್ತಿದ್ದ ನಿಟ್ಟಿಗೆ ನೋಡಲಾರಂಭಿಸಿದರು. ಅತ್ತಣ ವಾತಾವರಣವು ಧೂಳದಿಂದ ವ್ಯಾಪಿಸಿ ಹೋದದ್ದರಿಂದ, ಅವರ ವಿಸ್ಮಯವು ಭಯಪೂರ್ಣವಾಯಿತು. ಮುಂದೆ ಕೆಲವು ನಿಮಿಷಗಳಲ್ಲಿ ಸುಮಾರು ಇಪ್ಪತ್ತು ಜನ ಅಶ್ವಾರೂಢ ಸೈನಿಕರು ಶಿವಾಲಯದ ಸಮೀಪಕ್ಕೆ ಬಂದರು. ಆ ತಂಡದ ನಾಯಕನು ಮುಂದೆ ಬಂದು, ಉಚ್ಚಕಂಠದಿಂದ—"ರಾಜಕನ್ಯೆ! ನಾನು ಒಳ್ಳೆಯ ಅಮೃತ ವೇಳೆಯನ್ನು ಸಾಧಿಸಿ ಬಂದಿರುವದರಿಂದ ಇಂದು ನೀನು ನನ್ನವಳಾದೆ. ಬಾ, ಈ ನನ್ನ ಕುದುರೆಯ ಮೇಲೆ ಏರು!"

ತಂಡದ ನಾಯಕನ ಮುಖದಿಂದ ಹೊರಟ ಈ ಕುತ್ಸಿತ ವಾಣಿಯನ್ನು ಕೇಳಿದೊಡನೆಯೆ ಶೀಲವತಿಯ ರಕ್ಷಕ ಸೈನಿಕರು ಸರ್ರನೆ ತಮ್ಮ ಕತ್ತಿಗಳನ್ನು ಓರೆಯಿಂದ ಹಿರಿದು, ವಾತಾವರಣದಲ್ಲಿ ಝಳಪಿಸತೊಡಗಿದರು. ಆಗ ಆ ತಂಡದ ನಾಯಕನು—"ನೀವು ಸುಮ್ಮನೆ ಜೀವ ಕಳೆದುಕೊಳ್ಳಬೇಡಿರಿ. ನನ್ನ ಶತ್ರುವಿನ ಕುಮಾರಿಯಾದ ಈ ಶೀಲವತಿಯು ನನ್ನ ಕೈಯೊಳಗಿಂದ ಪಾರಾಗುವದು ಅಸಂಭವವಿರುವದು. ಕತ್ತಿಯನ್ನು ಒರೆಗಾಣಿಸಿ, ನಿಮ್ಮ ಒಡತಿಯನ್ನು ನನ್ನ ವಶಕ್ಕೆ ಒಪ್ಪಿಸಿಬಿಡಿರಿ."

ಆಗ ಸಂರಕ್ಷಕ ಸೈನಿಕರಲ್ಲೊಬ್ಬನು ಕತ್ತಿಯನ್ನು ಗರಗರನೆ ತಿರುಗಿಸಿ, ಗಂಭೀರವಾಣಿಯಿಂದ:—"ಕಳ್ಳತನದಿಂದ ಬಂದ ಜೀವಗಳ್ಳರಿಗೆ ಬೆದರಿ ಒಬ್ಬ ಅಬಲೆಯನ್ನು ಪರಸ್ವಾಧೀನ ಮಾಡುವಂತಹ ಹೇಡಿಗಳು ನಮ್ಮೊಳಗೆ ಯಾರೂ ಇರುವದಿಲ್ಲ. ರಾಣಾಜಿ! ನಿಮ್ಮಲ್ಲಿ ನಿಜವಾದ ಪರಾಕ್ರಮವಿದ್ದರೆ, ನಗದೇಶದ ಮೇಲೆ ದಾಳಿ ಮಾಡಿ ರಾಜಕುಮಾರಿಯವರನ್ನು ಕೈವಶಮಾಡಿಕೊಳ್ಳುತ್ತಿದ್ದಿರಿ. ದೇವದರ್ಶನಕ್ಕೆಂದು ಬಂದ ಸಂಧಿಯನ್ನು ಸಾಧಿಸಿ, ಈ ಬಗೆಯ ಕೃತಿಯನ್ನು ಮಾಡುವದು ರಜಪುತರೆಂದು ಹೇಳಿಸಿಕೊಳ್ಳುವ ನಿಮ್ಮ ಶೀಲವಲ್ಲ."

"ನನಗೆ ಧರ್ಮೋಪದೇಶ ಮಾಡುವ ಅಧಿಕಾರವು ನಿನ್ನದಲ್ಲ. ಶತ್ರುಗಳ ಸಲುವಾಗಿ ಬೇಕಾದಂಥ ಕಾರಸ್ಥಾನ ರಚಿಸಿ, ಕಾರ್ಯಸಾಧನೆ ಮಾಡಿಕೊಳ್ಳಲಿಕ್ಕೆ ನಾನು ಹಿಂದುಮುಂದೆ ನೋಡುವವನಲ್ಲ."

ಶೀಲವತಿಯ ಅಪಹಾರಕ್ಕೆ ಬಂದವನು ಅರುಣಗಡದ ದೊರೆಯಾದ ರಾಣಾ ವಿಲಾಸವಿಜಯನಾಗಿದ್ದನು. ವಿಲಾಸವಿಜಯನು ಹೆಸರಿಗೆ ತಕ್ಕಂತೆ ವಿಲಾಸಿಯೇ ಆಗಿದ್ದನು. ಅವನು ಪ್ರಪಂಚದೊಳಗಿನ ಎಲ್ಲ ವಿಧದ ವಿಲಾಸಗಳನ್ನು

ಜಯಿಸಿ ತನ್ನ ಬಳಿಯಲ್ಲಿರಿಸಿಕೊಂಡಿದ್ದನು. ಇವನಿಗೂ ನಗದೇಶದ ರಾಜಾ ರಾಯಸಿಂಹನಿಗೂ ಬಹು ದಿನಗಳಿಂದ ವೈರವಿದ್ದಿತು. ವಿಲಾಸವಿಜಯನು ತನ್ನ ವಿಲಾಸೀ ಸ್ವಭಾವಕ್ಕನುರೋಧವಾಗಿ ತನ್ನ ಅಸ್ಥಿವೈರಿಯ ಪುತ್ರಿಯಾದ ಶೀಲವತಿಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ನಿರ್ಧರಿಸಿದ್ದನು. ಅವನು ಮಹಾ ಶಿವರಾತ್ರಿಯ ಸಂಧಿಯನ್ನು ಸಾಧಿಸಿ, ಶಿವಾಲಯದಲ್ಲಿದ್ದ ಶೀಲವತಿಯ ಮೇಲೆ ದಾಳಿಮಾಡಿದನು.

ಶೀಲವತಿಯ ಸಂರಕ್ಷಕ ಸೈನಿಕರು ಅಲ್ಪಸಂಖ್ಯಾಕರಿದ್ದರೂ ಸ್ವಾಮಿನಿಷ್ಠರಿದ್ದರು. ಅವರು ಜೀವದಾಶೆಯನ್ನು ಬಿಟ್ಟು ರಾಜಕುಮಾರಿಯನ್ನು ರಕ್ಷಿಸಲಿಕ್ಕೆ ಸಿದ್ಧರಾದರು ಎರಡೂ ಪಂಗಡಗಳ ನಡುವೆ ಕಾಳಗವು ಪ್ರಾರಂಭವಾಯಿತು. ಖಡ್ಗಗಳು ಖಣ-ಖಣ ಸಪ್ಪಳ ಮಾಡುತ್ತಿದ್ದವು. ಶಸ್ತ್ರಾಘಾತದಿಂದ ಹೊರಟ ನೆತ್ತರವು ಶಿವಾಲಯದ ಮುಂದಿನ ಅಂಗಳವನ್ನೆಲ್ಲ ಆರಕ್ತಮಯ ಮಾಡಿತು ಈ ಭೀಷಣ ದೃಶ್ಯವನ್ನು ನೋಡಿ ಸುರೂಪೆಯು ಗಾಬರಿಯಾದಳು. ದಕ್ಷಿಣೆಯ ಹೊರತು ಸಂಭಾವನೆಬೇರೆ ದೊರೆಯುವದೆಂಬ ಆಶೆಯಿಂದ ನಿಂತಿದ್ದ ಪೂಜಾರಿಯು ಓಡಿ ಹೋಗಿ, ಗರ್ಭಾಗಾರವನ್ನು ಹೊಕ್ಕು, ಬಾಗಿಲು ಮುಚ್ಚಿಕೊಂಡು ಬಹಳ ವೇಳೆಯಾಗಿತ್ತು. ಶೀಲವತಿಯಾದರೂ ಭಯವಿಹ್ವಲಳಾಗಿ ನಿಂತಿದ್ದಳು; ಆದರೆ ಅವಳು ಜೀವದಾಶೆಯಿಂದ ಅಂಜಿಕೊಂಡಿದ್ದಿಲ್ಲ. ಸಂರಕ್ಷಕ ಸೈನಿಕರು ಪರಾಭೂತರಾದರೆ, ವಿಲಾಸಿಯೂ ನೀಚನೂ ಆದ ವಿಲಾಸವಿಜಯನು ತನ್ನ ಶೀಲವನ್ನು ಎಲ್ಲಿ ಸೂರೆ ಮಾಡುವನೋ ಎಂದು ಅಂಜಿಕೊಂಡಿದ್ದಳು. ಸ್ವಲ್ಪ ವೇಳೆ ಯುದ್ಧವು ನಡೆಯುವಷ್ಟರಲ್ಲಿ ಅವಳ ಭಯವು ದೂರಾಯಿತು ವೀರತ್ವದ ಮೂರ್ತಿಮಂತ ದೇವತೆಯಂತಿದ್ದ ಆ ಕ್ಷಾತ್ರಕುಮಾರಿಯ ನೇತ್ರಗಳು ಅಗ್ನಿಕಣಗಳನ್ನು ಸುರಿಸಹತ್ತಿದವು.

ಅರುಣಗಡದ ಸೈನಿಕರು ಬಹು ಸಂಖ್ಯಾಕರಿದ್ದರು. ನಗದೇಶದ ಸೈನಿಕರು ವೀರಾವೇಶದಿಂದ ಕಾದಿದರೂ ಅವರಿಗೆ ಈಡಾಗಲಿಲ್ಲ. ಒಬ್ಬೊಬ್ಬ ಸೈನಿಕನು ಶತ್ರುಗಳ ಕಡೆಯ ಮೂವರು ಸೈನಿಕರನ್ನಾದರೂ ರಣದೇವತೆಗೆ ಬಲಿಯೊಪ್ಪಿಸದೆ ಭೂಮಿಗೆ ಬೀಳಲಿಲ್ಲ. ಬೋವಿಗಳು ಸಹ ಅತುಲ ಸಾಹಸದಿಂದ ಕಾದಿ ಭೂಮಿಗೆ ಬಿದ್ದರು! ಇಂತಹ ಪರಿಸ್ಥಿತಿಯಲ್ಲಿಯೂ, ಆದರ್ಶವೀರಾಂಗನೆಯಾದ ಶೀಲವತಿಯು ದಿವ್ಯ ಪ್ರತಾಪದ ಅಧಿಷ್ಠಾತ್ರಿಯಾಗಿ ನಿಂತ ಸ್ಥಳದಲ್ಲಿಯೇ ನಿಂತುಬಿಟ್ಟಿದ್ದಳು. 'ರಾಜಕನ್ಯೆ!' ವಿಲಾಸವಿಜಯನು ವಿಲಾಸಮುದದಿಂದ:- "ಇನ್ನು ಮೇಲೆ ಅನುಮಾನವೇಕೆ? ಈಗ ನೀನು ನನ್ನವಳಾದೆ. ಯಾವ ವಿಧದ ವಿಚಾರ ಮಾಡದೆ, ದ್ರುತಪದದಿಂದ ಬಂದು ನನ್ನ ಅಶ್ವಾರೋಹಣ ಮಾಡು

ನೋಡುವಾ!"

'ರಾಣಾಜಿ!' ವಿಲಾಸವಿಜಯನ ಗರ್ವೋದ್ಧತವೂ ಹರ್ಷಯುಕ್ತವೂ ಆದ ಭಾಷಣವನ್ನು ಕೇಳಿ, ಶೀಲವತಿಯು ಕ್ರುದ್ಧಳಾಗಿ:-"ನೀವು ಯಾರನ್ನು ಉದ್ದೇಶಿಸಿ ಹೀಗೆ ಮಾತಾಡತೊಡಗಿರುವಿ? ನಿಮ್ಮ ಬುದ್ಧಿಯು ಭ್ರಮೆಗೊಂಡಂತೆ ತೋರುವದು. ಆದರಲ್ಲಿಯೇ ಸ್ವಲ್ಪ ವಿವೇಕ-ಜಾಗ್ರತೆಗಳನ್ನು ಹೊಂದಿ ಮಾತಾಡಿರಿ ನೋಡೋಣ!"

ರಾಜಕನ್ಯೆಯ ಮಾತುಗಳನ್ನು ಕೇಳಿ, ವಿಲಾಸವಿಜಯನು ಗಹಗಹಿಸಿ ನಗತೊಡಗಿದನು. ಅನಂತರದಲ್ಲಿ ಅವನು, "ಪ್ರಿಯಕರಣೀ, ಶೀಲವತಿ, ನಾನು ನಿನ್ನೆದುರಿಗೆ ನಿಂತು ಎರಡನೆಯವರನ್ನುದ್ದೇಶಿಸಿ ಇಂತಹ ಮಾತುಗಳನ್ನಾಡಿದರೆ, ನನ್ನ ಹೃದಯೇಶ್ವರಿಯಾದ ನಿನಗೆ ಸಂತಾಪವಾಗಲಿಕ್ಕಿಲ್ಲವೆ? ನಾನು ನಿನ್ನನ್ನೇ-ನನ್ನ ಶತ್ರುಪುತ್ರಿಯಾದ ಶೀಲವತಿಯನ್ನೇ-ಉದ್ದೇಶಿಸಿ ಮಾತಾಡಿದೆನು. ಸುಮ್ಮನೆ ಬಾಹ್ಯಾಡಂಬರದ ನಾಚಿಕೆಯನ್ನಭಿನಯಿಸುವದರಿಂದ ಲಾಭವಿಲ್ಲ. ನೀನು ನನ್ನ ಅಂತಃಪುರದಲ್ಲಿ ದಿವ್ಯಜ್ಯೋತಿಯಂತೆ ಬೆಳಗಬೇಕಾಗಿದೆ. ತಡಮಾಡದೆ ಹೊರಟು ಬಾ. ಪ್ರಿಯೆ...."

"ಜಾಗ್ರತೆ! ಜಾಗ್ರತೆ! ಬಾಯಿಗೆ ಬಂದ ಹಾಗೆ ಸಂಬೋಧಿಸಿದರೆ ಪ್ರಸಂಗವು ಕಠಿಣವಾದೀತು."ರಾಜಕುವರಿಯು ಸಂತಾಪದಿಂದ ಗರ್ಜಿಸಿದಳು. ಆಗ ಅವಳ ಮುಖವು ಆರಕ್ತವಾಗಿತ್ತು. ಕ್ರೋಧಾತಿರೇಕದಿಂದ ತುಟಿಗಳು ನಡುಗಹತ್ತಿದವು.

"ಸುಮ್ಮನೆ ಉದ್ದಾಮತನ ಮಾಡುವದರಿಂದ ಫಲವು ದೊರೆಯಲಾರದು. ನಿನ್ನ ಪ್ರಾಪ್ತಿಗಾಗಿಯೇ ಯುದ್ಧ ಮಾಡಿದೆನು. ಹೀಗಿರಲು, ಕೈವಶಳಾದವಳನ್ನು ಬಿಟ್ಟು ಹೋಗುವ ಸಂಭವವುಂಟೆ? ನೀನು ಸೂಜ್ಞಳಿದ್ದರೆ, ವಿಚಾರಿಸಿ ನೋಡಿ ಉತ್ತರ ಕೊಡು. ನಾನು ನಿನ್ನನ್ನು ನನ್ನ ಅಂತಃಪುರವನ್ನು ಸೇರಿಸಿ, ಪಟ್ಟಮಹಿಷಿ...."

"ಸಾವಧಾನ! ನಿಮ್ಮ ಅಂತಃಪುರದಲ್ಲಿ ವೇಶ್ಯೆಯರ ತಂಡವಿರಬಹುದು. ಅವರಲ್ಲಿ ಯಾರನ್ನಾದರೂ ಪಟ್ಟಮಹಿಷಿಯನ್ನು ಮಾಡಿರಿ. ಹೀಗೆ ಕಳ್ಳರು-ಕಾಕರಂತೆ ಹೆಂಗಳೆಯರನ್ನು ಕದ್ದೊಯ್ದು, ಅಂತಃಪುರವನ್ನು ತುಂಬುವದು ರಜಪುತರ ಶೀಲವೆ? ಹೀಗೆ ಕದ್ದು ತಂದ ನಾರಿಯರು ನಿನ್ನಲ್ಲಿ ಎಷ್ಟು ಭಕ್ತಿ-ಭಾವಗಳುಳ್ಳವರಿರಬಹುದು? ಬಹಳ ಮಾಡಿ ಅವರೆಲ್ಲರೂ ವೇಶ್ಯಾವೃತ್ತಿಯವರಿರುವದರಿಂದಲೇ ಜೀವಂತವಾಗಿ ಉಳಿದಿರುವರೆಂದು ಊಹಿಸುತ್ತೇನೆ. ಆದಿರಲಿ. ರಾಣಾಜಿ, ನೀವು ಸುಮ್ಮನೆ ಹೊರಟು ಹೋಗುವದು ಉಚಿತವೆಂದು ನಾನು

ಸಾರಿ ಹೇಳುತ್ತೇನೆ."

"ಇವಳು ಒಳ್ಳೆಯ ಮಾತಿನಿಂದ ದಾರಿಗೆ ಬರುವದಿಲ್ಲ." ಎಂದು ವಿಲಾಸ ವಿಜಯನು ನುಡಿದು, ತನ್ನ ಸರದಾರನನ್ನು ಕುರಿತು—"ನಿಶಾನಾಥ, ಇನ್ನು ಅನುಮಾನ ಮಾಡುವ ಕಾರಣವಿಲ್ಲ. ಈ ಶೀಲವತಿಯನ್ನು ಹಿಡಿದು ಬಂಧಿಸಿ, ಕುದುರೆಯ ಮೇಲೆ ಹಾಕಿರಿ!"

ನಿಶಾನಾಥನೂ ಸೈನಿಕರೂ ಮುಂದೆ ಬಂದರು. ಅವರನ್ನು ನೋಡಿ ಶೀಲವತಿಯು ಹೆಚ್ಚಾಗಿ ರೋಷಗೊಂಡು, "ಯಾರೂ ಮುಂದೆ ಹೆಜ್ಜೆಯಿಡ ಕೂಡದು. ನನ್ನನ್ನು ಜೀವಂತವಾಗಿ ಹಿಡಿಯುವ ಎದೆಯು ಯಾವನಿಗೂ ಇಲ್ಲ. ನನ್ನ ಶವವು ಮಾತ್ರ ನಿಮ್ಮ ಕೈಗೆ ದೊರೆಯಬಹುದು. ಪ್ರಾಣರಹಿತ ಜಡದೇಹವನ್ನಿಚ್ಛಿಸುತ್ತಿದ್ದರೆ, ಮುಂದೆ ಬನ್ನಿರಿ."

ಸೈನಿಕರು ಅಲ್ಲಿಯೇ ನಿಂತರು. ಆಗ ವಿಲಾಸವಿಜಯನು:-"ರಾಜ ನಂದಿನಿ! ನೀನು ಪೊಳ್ಳುಬೆದರಿಕೆಯನ್ನು ತೋರಿಸಬೇಡ. ನಾನು ನಿನ್ನ ಸಲು ವಾಗಿಯೇ ಇಲ್ಲಿಗೆ ಬಂದಿರುವದರಿಂದ, ಕಾರ್ಯಸಿದ್ಧಿಮಾಡಿಕೊಳ್ಳದೆ ತಿರುಗಿ ಹೋಗಲಾರೆನೆಂದು ಖಂಡಿತವಾಗಿ ತಿಳಿ. ನಿನ್ನನ್ನು ಬಲಾತ್ಕಾರದಿಂದಲಾದರೂ ಒಯ್ಯಲಿಕ್ಕೆ ನನ್ನಲ್ಲಿ ಸಾಮರ್ಥ್ಯವಿದೆ."

"ಮೀಸೆಹೊತ್ತ ಗಂಡಸರೆಂದೆನಿಸಿಕೊಳ್ಳುವ ನಿಮಗೆ ಏಕಾಂಗಿಯಾಗಿ ನಿಂತವಳೆದುರಿಗೆ ಹೀಗೆ ಪೌರುಷದ ಮಾತಾಡಲಿಕ್ಕೆ ನಾಚಿಕೆಯೆನಿಸಬೇಕಾ ಗಿತ್ತು. ನೀವು ನಿಜವಾಗಿ ಕ್ಷತ್ರಿಯರಾಗಿದ್ದರೆ, ನಿಜವಾದ ಶೂರರಾಗಿದ್ದರೆ, ನನ್ನ ಕೈಯಲ್ಲಿ ಖಡ್ಗಕೊಟ್ಟು ನಿಮ್ಮ ಸಾಮರ್ಥ್ಯವನ್ನು ಪ್ರಕಟಿಸಿರಿ. ಶಸ್ತ್ರಧಾರಿಗಳು ಶಸ್ತ್ರಹೀನರೆದುರಿಗೆ ತಮ್ಮ ಪೌರುಷವನ್ನು ಸಾರುವದು ಭೂಷಣವಲ್ಲ. ನೀವು ನಿಜವಾಗಿ ಶೂರರಾಗಿದ್ದರೆ, ನನ್ನ ಕೈಯಲ್ಲಿ ಶಸ್ತ್ರಕೊಡಿರಿ; ಇಲ್ಲವೆ ನನ್ನಂತೆ ಕೈಯಲ್ಲಿ ಬಳೆಗಳನ್ನಿಟ್ಟುಕೊಳ್ಳಿರಿ!"

ರಾಜಕುಮಾರಿಯ ಮಾತುಗಳು ವಿಲಾಸವಿಜಯನ ಎದೆಗೆ ನಟ್ಟವು. ಆಗ ಅವನು, "ನೀನು ನಮ್ಮೊಡನೆ ಯುದ್ಧಮಾಡುವೆಯಾ? ನಾವು ಹದಿನೆಂಟು ಇಪ್ಪತ್ತು ಜನರಿರುವೆವು. ವಿಚಾರಮಾಡಿ ಶಸ್ತ್ರವನ್ನು ಬೇಡು."

"ನಾನು ವಿಚಾರಮಾಡಿಯೇ ಬೇಡಿರುವೆನು. ಭರತಖಂಡದ ಇತಿ ಹಾಸವು ವೀರರಮಣಿಯರಿಂದ ಉಜ್ವಲಗೊಂಡಿರುವದನ್ನು ಕಾಮಾಂಧ ರಾದ ನೀವು ಅರಿತಿಲ್ಲ. ಅಂತೆಯೇ ಹೀಗೆ ಮಾತನಾಡುವಿರಿ."

ಶೀಲವತಿಯ ಯುದ್ಧಕೌಶಲ್ಯವನ್ನು ನೋಡಬೇಕೆಂಬ ಕುತೂಹಲ ದಿಂದ ವಿಲಾಸವಿಜಯನು ಅವಳಿಗೆ ಶಸ್ತ್ರಕೊಡಬೇಕೆಂದು ಯೋಚಿಸಿ, "ನಿಶಾ

ನಾಥ, ನೀವು ನಿಮ್ಮ ಖಡ್ಗವನ್ನು ರಾಜಕುಮಾರಿಗೆ ಕೊಡಿರಿ.'' ಎಂದನು.

ರಾಜಾಜ್ಞೆಯಂತೆ ನಿಶಾನಾಥನು ತನ್ನ ಖಡ್ಗವನ್ನು ಶೀಲವತಿಯ ಕೈಯಲ್ಲಿ ಕೊಟ್ಟನು. ಕೂಡಲೆ ಅವಳು ಖಡ್ಗವನ್ನು ತೆಗೆದುಕೊಂಡು ಗರಗರನೆ ತಿರುಗಿಸಿ ಪವಿತ್ರದ ಮೇಲೆ ನಿಂತಳು.

ಕೈಯಲ್ಲಿ ನಗ್ನ ಖಡ್ಗವನ್ನು ಹಿಡಿದು ಕ್ರೋಧದಿಂದ ಉರಿಯುತ್ತ ನಿಂತ ಶೀಲವತಿಯು, ಮಹಿಷಾಸುರಮರ್ದಿನಿಯಂತೆ ತೋರಹತ್ತಿದಳು! ಅವಳ ಉಗ್ರಮೂರ್ತಿಯನ್ನು ಕಂಡು ವಿಲಾಸವಿಜಯನು ಸ್ತಂಭಿತನಾದನು. ಸತೀತ್ವದ ರಕ್ಷಣೆಗಾಗಿ, ಪ್ರಾಣದ ವ್ಯಾಮೋಹವನ್ನು ತೊರೆದು ನಿಂತ ತೇಜಸ್ವಿಯಾದ ಆ ಕ್ಷತ್ರಿಯ ಬಾಲೆಯು ವೀರತ್ವದ ಮೂರ್ತಿಮಂತ ದೇವತೆಯಂತೆ ಪರಿಶೋಭಿಸತೊಡಗಿದ್ದಳು. ಅವಳ ಮುಖಮಂಡಲವೂ ನೇತ್ರಗಳೂ ಖದಿರಾಂಗಾರದಂತೆ ಉಜ್ವಲವಾಗಿದ್ದವು. ಅವಳ ಶ್ವಾಸೋಚ್ಛ್ವಾಸವು ವೇಗದಿಂದ ಸಾಗಿತ್ತು. ಅವಳು ವಾತಾವರಣದಲ್ಲಿ ತನ್ನ ಖಡ್ಗವನ್ನು ಝುಳಪಿಸುತ್ತ:—''ಬನ್ನಿರಿ, ವೀರಾಧಿವೀರರೆನಿಸಿಕೊಳ್ಳುವವರು ಈ ಕ್ಷತ್ರಿಯ ವೀರಾಂಗನೆಯ ಮೇಲೆ ಸಾಗಿಬನ್ನಿರಿ!''

ರಾಜಕುಮಾರಿಯು ಹೀಗೆ ಗರ್ಜಿಸಿದ ಕೂಡಲೆ ಬಳಿಯಲ್ಲಿದ್ದ ಗಿಡದ ಗುಂಪಿನಲ್ಲಿ ಕುದುರೆಗಳ ಖುರಪುಟಧ್ವನಿಯು ಕೇಳಲಾರಂಭಿಸಿತು. ಎಲ್ಲರೂ ಚಕಿತರಾಗಿ ಅತ್ತಕಡೆಗೆ ನೋಡಹತ್ತಿದರು. ಮುಂದೆ ಕೆಲವು ಕ್ಷಣಗಳಲ್ಲಿ ಹತ್ತೆಂಟು ಜನ ರಜಪೂತರು ರಭಸದಿಂದ ಅಲ್ಲಿಗೆ ಬಂದರು. ಆಗ ಅವರೊಳಗಿನ ಒಬ್ಬ ತೇಜಸ್ವಿಯಾದ ರಜಪುತನು:-''ನಮ್ಮೊಳಗಿನ ಒಬ್ಬ ರಜಪುತನು ಜೀವದಿಂದಿರುವವರೆಗೆ ರಾಜಕುಮಾರಿಯ ಮೇಲೆ ಕೈಮಾಡುವ ಯೋಗ್ಯತೆಯು ಅದಾವನದಿರುವದು? ರಾಜಕನ್ಯೆಯು ಖಡ್ಗಧಾರಣಮಾಡುವ ಅವಶ್ಯಕತೆಯಿಲ್ಲ.''

ವಿಲಾಸವಿಜಯನೂ ಅವನ ಸೈನಿಕರೂ ಆಗಂತುಕ ವ್ಯಕ್ತಿಯನ್ನು ವಿಸ್ಮಯದಿಂದ ನೋಡತೊಡಗಿದರು. ವಿಲಾಸವಿಜಯನು ಆ ಮನುಷ್ಯನನ್ನು ದಿಟ್ಟಿಸಿ ನೋಡಿ, ಚಕಿತವಾಣಿಯಿಂದ:—''ಯಾರು, ರಣಮಲ್ಲನೇನು? ನೀನು ಇಲ್ಲಿಯೇಕೆ''

'ಯಾರು; ವಿಲಾಸವಿಜಯ ರಾಣಾ ಸರಕಾರವೇನು? ತಾವು ಇಲ್ಲಿಯೇಕೆ?''

''ನಾನು ಇಲ್ಲಿ ಒಂದು ಮಹತ್ವದ ಕೆಲಸಕ್ಕಾಗಿ ಬಂದಿರುವೆನು. ಡಾಕು ರಣಮಲ್ಲ, ಇಲ್ಲಿ ನಿನ್ನ ಕೆಲಸವೇನೂ ಇಲ್ಲ.''

''ವಿಲಾಸವಿಜಯ, ನಿನ್ನ ಪಾಪವೃತ್ತಿಯನ್ನೂ ಕಾಮವಾಸನೆಯನ್ನೂ



‘ಯಾರು, ರಣಮಲ್ಲನೇನು? ನೀನು ಇಲ್ಲಿ ಏಕೆ?’
‘ಯಾರು, ವಿಲಾಸವಿಜಯರಾಣಾ ಸರಕಾರವೇನು?’

ಗೆಲುವಿನ ಕತ್ತಿ ಪುಟ ೪೦

ಸುಲಿಯಲಿಕ್ಕೆ ನಾನು ಇಲ್ಲಿಗೆ ಧಾವಿಸಿ ಬಂದೆನು. ರಾಜಕುಮಾರಿಯಾದ ಶೀಲವತಿಯ ಶೀಲವನ್ನು ನಾಶಗೊಳಿಸುವದೇ ನಿನ್ನ ಮಹತ್ವದ ಕಾರ್ಯವಲ್ಲವೆ?''

''ನಾನು ಶೀಲವತಿಯ ಶೀಲವನ್ನು ಸೂರೆಮಾಡುವದಿಲ್ಲ. ಅವಳನ್ನು ಸಂಸ್ಕಾರಯುಕ್ತವಾದ ವಿಧಿಯಿಂದ ಲಗ್ನವಾಗುವೆನು.''

''ರಾಜಕುಮಾರಿಯ ಸಮ್ಮತಿಯಿಲ್ಲದೆ ವಿವಾಹ ವಿಧಿಯನ್ನು ನೀನು ಹೇಗೆ ನೆರವೇರಿಸುವೆ?''                    'ಬಲಾತ್ಕಾರದಿಂದ!'

'ಅಂತೆಯೆ ನಾನು ನಿನ್ನ ಕಾರ್ಯಕ್ಕೆ ಅಡ್ಡಿ ಮಾಡುವದಕ್ಕಾಗಿ ಬಂದಿರುವೆ.'

'ರಣಮಲ್ಲ!' ವಿಲಾಸವಿಜಯನು ವಿಕಟಹಾಸ್ಯದಿಂದ:—''ನೀನು ಕಡು ಮೂರ್ಖನಿರುವೆ. ಶೀಲವತಿಯು ನಿನ್ನ ತಂದೆಯ ಕಡುಹಗೆಯಾದ ರಾಣಾ ರಾಯಸಿಂಹನ ಪುತ್ರಿಯು. ಶತ್ರುಪುತ್ರಿಯನ್ನು ರಕ್ಷಿಸುವದಕ್ಕಾಗಿ ನೀನು ನಿನ್ನ ಪ್ರಾಣವನ್ನು ಗಂಡಾಂತರಕ್ಕೆ ಹಾಕುವದರಲ್ಲೇನೂ ಪುರುಷಾರ್ಥವಿಲ್ಲ.''

'ಮೂರ್ಖ ರಾಣಾ!' ರಣಮಲ್ಲನು ಕಠೋರವಾಣಿಯಿಂದ:—''ಸ್ತ್ರೀ ಜಾತಿಯ ಗೌರವ-ಸನ್ಮಾನಗಳು ಜಗತ್ತಿನ ವೈಭವವಾಗಿರುವವು. ನಿಜವಾದ ರಜಪೂತನು ಸ್ತ್ರೀ ಜಾತಿಯ ವೈರಮಾಡುತ್ತಿರುವದಿಲ್ಲ. ರಾಣಾ, ನೀನು ರಜಪೂತನಿದ್ದರೂ ನಿನ್ನಲ್ಲಿ ಇಂತಹ ವಿವೇಕವಿಲ್ಲದ್ದನ್ನು ನೋಡಿ ಖೇದವೆನಿಸುತ್ತದೆ. ಇನ್ನು ಮೇಲೆ ರಾಜಕುಮಾರಿಯ ಆಶೆಯನ್ನು ತೊರೆದು, ಹೊರಟು ಹೋಗು.''

'ರಣಮಲ್ಲ!' ವಿಲಾಸವಿಜಯನು ಕಠೋರ ವಾಣಿಯಿಂದ:—''ಯಃಕಶ್ಚಿತ್ ಡಾಕುವಾದ ನೀನು, ನನ್ನೆದುರಿಗೆ ಗರ್ವೋದ್ಧತತನದಿಂದ ಮಾತಾಡುವೆಯಾ? ಜೀವವು ಬೇಕಾಗಿದ್ದರೆ ನೀನೇ ಹೊರಟು ಹೋಗು.''

''ಜೀವ ಬೇಕಾದವರು ತಾವೇ ಹೋಗುವರು.'' ಎಂದು ರಣಮಲ್ಲನು ಗರ್ಜಿಸಿ, ಖಡ್ಗವನ್ನು ಒರೆಯಿಂದ ಹಿರಿದನು.

''ಸೈನಿಕರೆ, ಈ ಸುಲಿಗೆಗಾರನನ್ನು ಬಂಧಿಸಿರಿ!'' ವಿಲಾಸವಿಜಯನು ತನ್ನ ಸೈನಿಕರಿಗೆ ಆಜ್ಞೆ ಮಾಡಿದನು.

ವಿಲಾಸವಿಜಯನ ಸೈನಿಕರು ರಣಮಲ್ಲನನ್ನು ಹಿಡಿಯಲಿಕ್ಕೆ ಮುಂದೆ ಸಾಗಿದರು. ಕೂಡಲೆ ತುಮುಲವಾದ ಯುದ್ಧವು ಪ್ರಾರಂಭವಾಯಿತು. ಬ್ರಹ್ಮಚರ್ಯದಲ್ಲಿ ಇಪ್ಪತ್ತೈದು ವರ್ಷಗಳ ವರೆಗೆ ಬೆಳೆದು, ಅತ್ಯುತ್ತಮ ಯುದ್ಧ ಶಿಕ್ಷಣವನ್ನು ಹೊಂದಿದ ನವಯುವಕನಾದ ರಣಮಲ್ಲನಿಗೆ ಹೇಡಿತನ, ಭಯ ಇವುಗಳ ಗಾಳಿಯು ಸೋಂಕುವಂತಿದ್ದಿಲ್ಲ. ಅವನು ವೀರತ್ವ, ನಿರ್ಭಯತೆಗಳ ವಾತಾವರಣದಲ್ಲಿ ಪೋಷಿತನಾಗಿದ್ದನು. ಇಂತಹನು ಒಬ್ಬ ಸ್ತ್ರೀಯ ರಕ್ಷಣೆ

ಮಾಡುವ ಕಾರ್ಯದಲ್ಲಿ ಹೇಗೆ ಹಿಂಜರಿಯುವನು?

ರಣಮಲ್ಲನು ಅಪೂರ್ವ ಶಕ್ತಿಯಿಂದ ತನ್ನ ಖಡ್ಗವನ್ನು ತಿರುಗಿಸತೊಡಗಿದನು. ಖಡ್ಗಾಘಾತದಿಂದ ವಿಲಾಸವಿಜಯನ ಸೈನಿಕರು ಪಟಪಟನೆ ಬೀಳತೊಡಗಿದರು. ರಾಜಕನ್ಯೆಯು ದೇವಾಲಯದ ಸೋಪಾನದ ಮೇಲೆಯೇ ನಿಂತು ಯುದ್ಧಚಮತ್ಕಾರವನ್ನು ನೋಡತೊಡಗಿದ್ದಳು. ರಣಮಲ್ಲನ ಅಪ್ರತಿಮ ಯುದ್ಧಕೌಶಲ್ಯ, ಅನುಪಮೇಯ ಸಾಹಸ, ಅದ್ವಿತೀಯ ವೀರತೆ ಮೊದಲಾದ ಗುಣಗಳನ್ನು ನೋಡಿ ಅವಳು ವಿಸ್ಮಯಾನಂದಭರಿತಳಾಗಿದ್ದಳು. ಇಂತಹ ಪ್ರತಿಭಾಶಾಲಿಯಾದ ತರುಣನನ್ನು ಅವಳು ಇದುವರೆಗೆ ಎಂದೂ ನೋಡಿದ್ದಿಲ್ಲ. ತನ್ನ ಸಲುವಾಗಿ ಜೀವವನ್ನು ಗಂಡಾಂತರದಲ್ಲಿ ಕೆಡಹಿದ ಯುವಕನಿಗೆ ವಿಜಯಲಾಭವಾಗಬೇಕೆಂದು ಅವಳು ಅನನ್ಯಭಾವದಿಂದ ಪರಮಾತ್ಮನಲ್ಲಿ ಪ್ರಾರ್ಥಿಸತೊಡಗಿದ್ದಳು.

ರಣಮಲ್ಲನ ಖಡ್ಗಾಘಾತದಿಂದ ವಿಲಾಸವಿಜಯನ ಕಡೆಯ ಸೈನಿಕರು ಒಬ್ಬೊಬ್ಬರೆ ಮೃತಿಹೊಂದುತ್ತ, ಇಬ್ಬರು ಸೈನಿಕರು ಮಾತ್ರ ಉಳಿದರು. ಇನ್ನು ಮೇಲೆ ಯುದ್ಧ ಮಾಡಿ ಪ್ರಯೋಜನವಿಲ್ಲೆಂದು ತಿಳಿದು, ರಾಜಕನ್ಯೆಯ ಆಶೆಯನ್ನು ಬಿಟ್ಟು ಅವನು ಪಲಾಯನ ಮಾಡಿದನು. ಸತಿಯ ಪ್ರಾರ್ಥನೆಗೆ ಜಗನ್ನಿಯಂತನಾದ ಶಂಕರನು ಅನುಗ್ರಹ ಮಾಡಿದನು! ವಿಲಾಸವಿಜಯನು ಹೇಡಿಯಂತೆ ಓಡಿ ಹೋದ ಕೂಡಲೆ, ರಣಮಲ್ಲನು ಖಡ್ಗವನ್ನು ಒರೆಗಾಣಿಸಿ, ತನ್ನ ಕುದುರೆಯನ್ನು ರಾಜಕುಮಾರಿಯ ಬಳಿಗೆ ಸಾಗಿಸಿದನು.

ರಣಮಲ್ಲನು ಬಂದದ್ದು ನೋಡಿ, ರಾಜಕುಮಾರಿಯು ಲಜ್ಜಾವನತಮುಖಿಯಾದಳು. ಆಗ ಅವಳು ಕೃತಜ್ಞತೆಯಿಂದ, ನೀವು ನನ್ನ ಮೇಲೆ ಮಹದುಪಕಾರ ಮಾಡಿದಿರಿ. ನೀವು ಈ ಪ್ರಸಂಗದಲ್ಲಿ ದೇವರಂತೆ ಬಂದು ನನ್ನ ಶೀಲ-ಮಾನಗಳನ್ನು ಕಾಯ್ದಿರಿ. ನೀವು ಬಾರದಿದ್ದರೆ, ನನ್ನ ಅವಸ್ಥೆಯು ಏನಾಗುತ್ತಿತ್ತೋ ದೈವರೇ ಬಲ್ಲನು!"

"ರಾಜಕುಮಾರಿ, ಆ ಕಾಮಾಂಧನು ನಿನಗೆ ಬಹಳೇ ತೊಂದರೆ ಕೊಟ್ಟಿರಲಿಕ್ಕೆ ಬೇಕು. ಇನ್ನು ನೀನು ನಿರಾತಂಕವಾಗಿ ರಾಜಧಾನಿಗೆ ಹೋಗಬಹುದು. ನಿನ್ನನ್ನು ಕೋಟೆಯ ಬಾಗಿಲವರೆಗೆ ತಲುಪಿಸಲಿಕ್ಕೆ ನನ್ನ ಸೈನಿಕರನ್ನು ಕಳುಹಿಸುವೆನು. ಇದೇನು? ಇಲ್ಲಿ ಮೂರ್ಛಿತಳಾಗಿ ಬಿದ್ದವಳು ಯಾವಳು?" ಸುರೂಪೆಯನ್ನು ಕಂಡು ರಣಮಲ್ಲನು ಕೇಳಿದನು.

"ಇವಳು ನನ್ನ ದಾಸಿಯು" ರಾಜಕನ್ಯೆಯು ಹೇಳಿದಳು.

"ಮನ್ಮಥಸಿಂಹ, ಈ ಕಾನನದ ಆಚೆಗಿದ್ದ ಝುರಿಯೊಳಗಿಂದ ನೀರು

ತೆಗೆದುಕೊಂಡು ಬಾ. ಶೈತ್ಯೋಪಚಾರದಿಂದ ಇವಳಿಗೆ ಬೇಗನೆ ಎಚ್ಚರ ಹುಟ್ಟು ವಂತೆ ವ್ಯವಸ್ಥೆ ಮಾಡು."

ಮನ್ಮಥಸಿಂಹನು ಕುದುರೆಯನ್ನೋಡಿಸುತ್ತ ಕ್ಷಣಾರ್ಧದಲ್ಲಿ ಕಣ್ಣುಮರೆಯಾದನು.

ಇದೇ ವೇಳೆಯಲ್ಲಿ ದೇವಮಂದಿರದ ಮಹಾದ್ವಾರವು ಸ್ವಲ್ಪ ತೆರೆಯಲ್ಪಟ್ಟಿತು. ಕಿಂಡಿಯೊಳಗಿಂದ ಪೂಜಾರಿಯು ಹೊರಗೆ ಹಣಿಕಿ ಹಾಕಿದನು. ಹೊರಗೆ ಭೀಷಣವಾದ ಸಂಗ್ರಾಮವು ಆಗಿ ಹೋಗಿತ್ತು. ನೆತ್ತರವು ಸರವುಗಟ್ಟಿ, ಹರಿಯಹತ್ತಿತ್ತು. ಈ ಅಕಲ್ಪಿತ ಘಟನೆಯಿಂದ ಉತ್ಪನ್ನವಾದ ಭಯವು ಅವನನ್ನು ಹೊರಗೆ ಬರಗೊಡಲಿಲ್ಲ. ಅವನು ಸಂಭಾವನೆಯ ಆಶೆಯನ್ನು ಬಿಟ್ಟು ಮತ್ತೆ ದ್ವಾರವನ್ನು ಮುಚ್ಚಿಕೊಂಡನು.

ರಾಜಕುಮಾರಿಯು ಕೃತಜ್ಞತೆ-ವಿನಯ-ಭಯಗಳಿಂದ ರಣಮಲ್ಲನನ್ನು ಕುರಿತು ತನ್ನ ಕೋಕಿಲ ಕಂಠದಿಂದ-"ತಮ್ಮ ಉಪಕಾರವನ್ನು ನಾನು ಯಾವ ವಿಧದಿಂದ ತೀರಿಸಲಿ? ಇಂದು ತಮ್ಮಿಂದ ನನ್ನ ಸತೀತ್ವ-ಪ್ರಾಣಗಳು ರಕ್ಷಿತವಾದವು. ಡಾಕು ಜಗಮಲ್ಲರ ಪುತ್ರರಾದರೂ ನೀವು ಧರ್ಮವಂತ...."

ಶೀಲವತಿಯು ಒಳ್ಳೆಯ ಪ್ರಯತ್ನದಿಂದ ಇಷ್ಟು ಮಾತಾಡಿದಳು. ಮುಂದೆ ಮಾತಾಡಬೇಕೆಂಬ ಇಚ್ಛೆಯಿದ್ದರೂ ಯಾವದೋ ಒಂದು ವಿಧದ ಭಾವನೆಯು ಅವಳ ವಾಣಿಯನ್ನು ತಟಸ್ಥಗೊಳಿಸುತ್ತಲಿತ್ತು. ಕೂಡಲೆ ಅವಳ ಹೃದಯದಲ್ಲಿ ಅಕಥನೀಯ ಲಜ್ಜಾ-ಸಂಕೋಚಗಳು ಉತ್ಪನ್ನವಾದವು.

ಶೀಲವತಿಯ ಮಾತುಗಳನ್ನು ಕೇಳಿ ರಣಮಲ್ಲನು—"ನಾನು ನನ್ನ ಕರ್ತವ್ಯವನ್ನು ನೆರವೇರಿಸಿರುವೆನು ಇದರಲ್ಲಿ ಉಪಕಾರವೇತರದು? ಕುಲ ಯುವತಿಯರ ಶೀಲ-ಮಾನಗಳನ್ನು ರಕ್ಷಿಸುವದು ಪುರುಷಧರ್ಮವಿರುವದು. ನಾನು ಸುಲಿಗೆಗಾರನ ಮಗನಾಗಿದ್ದರೂ ಮನುಷ್ಯನಿರುವೆನು. ಒಂದು ವಿಶಿಷ್ಟವಾದ ಘಟನೆಯಿಂದ ಸುಲಿಗೆಯ ಕೆಲಸವನ್ನು ಕೈಕೊಂಡದ್ದಕ್ಕಾಗಿ ಜಗಮಲ್ಲನೂ ಅವನ ಅನುಯಾಯಿಗಳೂ ಅಧರ್ಮಿಗಳೆಂದು ಭಾವಿಸಕೂಡದು."

ರಾಜಕುಮಾರಿಯ ಎದೆಯು ಒತ್ತರದಿಂದ ಹಾರಹತ್ತಿತು. ಇಂದಿನವರೆಗೆ ಅವಳ ಸ್ಥಿತಿಯು ಹೀಗೆ ಎಂದೂ ಆಗಿದ್ದಿಲ್ಲ. ಜಗಮಲ್ಲನೂ ಅವನ ಪಾಲಿತ ಪುತ್ರನಾದ ರಣಮಲ್ಲನೂ ಅವಳ ತಂದೆಯ ಕಡುಹಗೆಗಳಾಗಿದ್ದರು. ಹೀಗಿದ್ದರೂ ಶತ್ರುವೆಂದು ಉಪೇಕ್ಷೆ ಮಾಡದೆ, ಕುಲಸ್ತ್ರೀಯೋಚಿತವಾದ ಅವಳ ಸತೀತ್ವ-ಗೌರವಗಳನ್ನು ಕಾಯುವದಕ್ಕಾಗಿ ರಣಮಲ್ಲನು ತನ್ನ ಪ್ರಾಣವನ್ನು ಸಂಕಟದಲ್ಲಿ ನೂಕಲು ಸಿದ್ಧನಾದನು. ಕಡೆಗೆ ಸಂಗ್ರಾಮದಲ್ಲಿ ವಿಜಯ

ಲಕ್ಷ್ಮಿಯನ್ನು ಸ್ವಾಧೀನಪಡಿಸಿಕೊಂಡು, ವಿಜಯಮಾಲೆಯನ್ನು ಧರಿಸಿಯೇ ಶೀಲವತಿಯ ಸಮ್ಮುಖದಲ್ಲಿ ನಿಂತನು. ಇಂತಹ ಘನವಂತನೊಡನೆ ಮಾತಾಡುವಾಗ, ಅವನ ಉಪಕಾರಸ್ಮರಣೆ ಮಾಡುವಾಗ ಅವಳ ಹೃದಯದಲ್ಲಿ ಕಂಪನವೇಕೆ ಹುಟ್ಟಿರಬಹುದು?

ರಣಮಲ್ಲನು ಮಾತಾಡಿದ ಎಷ್ಟೋ ವೇಳೆಯವರೆಗೆ ಶೀಲವತಿಯು ಸುಮ್ಮನೆ ನಿಂತಿದ್ದಳು. ಉಪಕಾರಕರ್ತನೊಡನೆ ಎರಡು ಮಾತಾಡದೆ ಸುಮ್ಮನಿರುವದು ಅಸಭ್ಯತನದ ಹಾಗು ಕೃತಘ್ನತೆಯ ಲಕ್ಷಣವಾದೀತೆಂಬ ತಿಳುವಳಿಕೆಯಿಂದ ಅವಳು ಗಟ್ಟಿಮನಸ್ಸು ಮಾಡಿ ಮಾತಾಡಲುಪಕ್ರಮಿಸಿದಳು: "ನೀವು ಸುಲಿಗೆಗಾರರು; ನಾನು ನಿಮ್ಮ ಶತ್ರುವಿನ ಪುತ್ರಿಯು. ನೀವು ನನ್ನ ತಂದೆಯ ಕೈಯಲ್ಲಿ ಸಿಲುಕಿದರೆ ಬದುಕಿ ಪಾರಾಗುವದು ಕಠಿಣವಿರುವದು. ಈ ಎಲ್ಲ ವಿಷಯವು ನಿಮಗೆ ಗೊತ್ತಿದ್ದರೂ, ಪ್ರಾಣಾಂತಿಕ ಸಂಕಟದಲ್ಲಿ ಬಿದ್ದು, ಇಷ್ಟು ಶೌರ್ಯ-ಸಾಹಸಗಳನ್ನು ವ್ಯಕ್ತಪಡಿಸುವದರಲ್ಲಿ ನಿಮ್ಮ ಉದ್ದೇಶವೇನಿತ್ತು?"

"ರಾಜಕುಮಾರಿ!" ರಣಮಲ್ಲನು ಗಾಂಭೀರ್ಯದಿಂದ:-"ನಾವು ಕೇವಲ ನಿನ್ನ ತಂದೆಯ ರಾಜಶಾಸನದ ಶತ್ರುಗಳಿರುವೆವು. ನಿನ್ನ ತಂದೆಯಿಂದ ಘಟಿಸುವ ಅನ್ಯಾಯಕ್ಕೆ ಮಾತ್ರ ನಾವು ಶತ್ರುಗಳು. ನಾವು ಸುಲಿಗೆಗಾರರು ನಿಜವು; ಆದರೆ ಬಡವರನ್ನು ಸುಲಿಯುವವರು ನಾವಲ್ಲ. ಬಡವರನ್ನು ಸುಲಿದು ಕೊಬ್ಬೇರಿದ ಧನವಂತರ ಸುಲಿಗೆಗಾರರು ನಾವಿರುವೆವು. ನಾವು ನೀತಿಯ ರಕ್ಷಣೆ ಮಾಡುವವರಿರುವೆವು ನಿನ್ನ ರಕ್ಷಣೆಯು ನೀತಿಯ ರಕ್ಷಣೆಯ ದ್ಯೋತಕವಾಗಲಿಲ್ಲವೆ? ದೇವಿ, ನೀತಿಯ ರಕ್ಷಣೆ ಮಾಡುವದೇ ಜಗಮಲ್ಲನ ಹಾಗು ಅವನ ಅನುಯಾಯಿಗಳ ಧ್ಯೇಯವಿರುವದು."

"ನೀವು ನೀತಿವಂತ ಸುಲಿಗೆಗಾರರು!" ಶೀಲವತಿಯು ಉದ್ಗಾರ ತೆಗೆದು, ರಣಮಲ್ಲನನ್ನು ಕೃತಜ್ಞತೆಯಿಂದ ನೋಡಹತ್ತಿದಳು. ಅಷ್ಟರಲ್ಲಿ ಮನ್ಮಥಸಿಂಹನು ನೀರು ತಂದನು. ದಾಸಿಗೆ ಶೈತ್ಯೋಪಚಾರವು ನಡೆಯಿತು. ಸ್ವಲ್ಪ ವೇಳೆಯಲ್ಲಿ ಅವಳು ಚೇತರಿಸಿಕೊಂಡು ಕುಳಿತಳು. ಅವಳು ಎಲ್ಲ ದೃಶ್ಯವನ್ನು ನೋಡಿ ಬೆರಗಾಗಿ ಕುಳಿತಳು. ಆಗ ಶೀಲವತಿಯು "ಸುರೂಪೆ, ಇತ್ತ ನೋಡು. ಇವರೇ ಶತ್ರುಗಳನ್ನು ಜಯಿಸಿ ನನ್ನ ಶೀಲ-ಮಾನ-ಪ್ರಾಣಗಳನ್ನು ಕಾಯ್ದವರು."

"ದೇವರು ಈ ಘನವಂತರಿಗೆ ಕಲ್ಯಾಣಮಾಡಲಿ!" ಸುರೂಪೆಯು ಎದ್ದು ನಿಂತು, ರಣಮಲ್ಲನನ್ನು ನೋಡುತ್ತ ನುಡಿದಳು.

ಆಗ ರಣಮಲ್ಲನು ತನ್ನ ಸೈನಿಕರಲ್ಲೊಬ್ಬನಾದ ಮನ್ಮಥಸಿಂಹನನ್ನು ಕುರಿತು-“ಮನ್ಮಥ, ಈ ರಾಜಕನ್ಯೆಯನ್ನು ನಗದೇಶ ರಾಜಧಾನಿಯ ಬಾಗಿಲ ವರೆಗೆ ಕಳುಹಿಸಿ ಬಾ. ರಾಜಕುಮಾರಿ, ಹೋಗಿ ಬಾ. ದೇವರು ನಿನಗೆ ಮಂಗಲವೀಯಲಿ.”

ರಣಮಲ್ಲನು ಇಷ್ಟು ಮಾತಾಡುವಷ್ಟರಲ್ಲಿ ಒಬ್ಬ ಅಶ್ವಾರೋಹಿಯಾದ ಸ್ತ್ರೀಯು ರಭಸದಿಂದ ಅಲ್ಲಿಗೆ ಬಂದಳು. ಅವಳನ್ನು ನೋಡಿ ರಣಮಲ್ಲನು: “ಯಾರು, ಸೌಮ್ಯವತಿ?”

“ಹೌದು. ಪ್ರಿಯ ರಣಮಲ್ಲರೆ! ನೀವು ಇಷ್ಟು ವೇಳೆಯವರೆಗೆ ಎಲ್ಲಿದ್ದಿರಿ? ನಿಮ್ಮನ್ನು ಹುಡುಕುತ್ತ ಹುಡುಕುತ್ತ ನಾನು ಪೂರಾ ದಣಿದೆನು.”

“ಪ್ರಿಯ ರಣಮಲ್ಲ!” ಎಂಬ ಶಬ್ದವನ್ನು ಕೇಳಿ ರಾಜಕುಮಾರಿಯ ಮಸ್ತಕದ ಮೇಲೆ ವಜ್ರಾಘಾತವಾದಂತಾಯಿತು. ಅವಳ ಹೃದಯದಲ್ಲಿ ಒಂದು ವಿಧದ ತಳಮಳವು ಆರಂಭವಾಯಿತು. ಶಂಕೆ-ನಿರಾಶೆ-ಗ್ಲಾನಿಗಳಿಂದ ಅವಳು ದಿಙ್ಮೂಢಳಾದಳು. ‘ಪ್ರಿಯ ರಣಮಲ್ಲ!’ ಈ ಶಬ್ದವು ಅವಳ ಹೃದಯದಲ್ಲಿ ನಟ್ಟಿತು. ಆ ಆಗಂತುಕ ದಿವ್ಯ ಲಾವಣ್ಯಮಯಿಯು ನರರತ್ನ ರಣಮಲ್ಲನ ಪ್ರಣಯಿನಿಯಿರಬಹುದೆ? ಎಂಬ ವಿಚಾರದಿಂದ ಅವಳು ಕೆಲವು ವೇಳೆಯವರೆಗೆ ಶಿಲಾಪ್ರತಿಮೆಯಂತೆ ನಿಂತುಬಿಟ್ಟಿದ್ದಳು!

---

## ಕಟುಕರ್ತವ್ಯ.

ಸೂರ್ಯನಾರಾಯಣನು ಕ್ಷಿತಿಜರೇಖೆಯ ಮೇಲೆ ಮಸ್ತಕವಿರಿಸಿ ವಿಶ್ರಾಂತಿ ಹೊಂದತೊಡಗಿದ್ದನು. ಪ್ರಖರವಾದ ರವಿಕಿರಣಗಳಿಂದ ತಪ್ತವಾದ ಅರವಲೀ ಪರ್ವತದ ವನಪ್ರದೇಶವು ಶಾಂತಿಯ ಆಹ್ವಾನ ಮಾಡತೊಡಗಿದ ವಾಯುಲಹರಿಗಳಿಂದ ಶೀತಲವಾಗತೊಡಗಿತ್ತು. ಆ ವನಪ್ರದೇಶದಲ್ಲಿದ್ದ ಸುಹಾಗ ಕೆರೆಯ ದಂಡೆಯಲ್ಲಿ ಡಾಕು ಜಗಮಲ್ಲನು ಅಸ್ತಮಾನ ಭಾಸ್ಕರನನ್ನು ನಿರೀಕ್ಷಿಸುತ್ತ ಅತ್ತ-ಇತ್ತ ಅಡ್ಡಾಡತೊಡಗಿದ್ದನು. ಅವನು ಆಗ ಒಳ್ಳೆಯ ವಿಚಾರಮಗ್ನನಾಗಿದ್ದನು. ಕೆಲವು ವೇಳೆಯ ಮೇಲೆ ಅವನು ನಗದೇಶ ರಾಜಧಾನಿಯ ನಿಟ್ಟಿಗೆ ತೀಕ್ಷ್ಣದೃಷ್ಟಿಯಿಂದ ನೋಡುತ್ತ ನಿಂತನು. ಆ ಮೇಲೆ ನಾಲ್ಕೂ ಕಡೆಗೆ ನಿರೀಕ್ಷಿಸಿದನು. ಎಲ್ಲಿಯೂ ಯಾವ ವಿಧದ ಸದ್ದೂ ಕೇಳಲಿಲ್ಲ. ಆಗ ವಾತಾವರಣದಲ್ಲಿ ಗಂಭೀರತೆಯು ಪ್ರಾಪ್ತವಾದದ್ದರಿಂದ, ವೃಕ್ಷಗಳ ಸಪ್ಪಳವು ಸಹ ಕಟ್ಟಾಗಿತ್ತು. ಕೆಲವು ಹೊತ್ತಿನ ಮೇಲೆ ಕುದುರೆಯ ಖುರ

ಪುಟ ಧ್ವನಿಯು ಅವನ ಕಿವಿಗೆ ಬೀಳತೊಡಗಿತು. ಕೂಡಲೆ ಅವನು ತನ್ನ ಬಂಧುವಾದ ಮಯೂರಧ್ವಜನೇ ಬರತೊಡಗಿದನೆಂದು ಗ್ರಹಿಸಿ, ಆ ನಿಟ್ಟಿಗೆ ನೋಡಹತ್ತಿದನು. ಮುಂದೆ ಸ್ವಲ್ಪ ವೇಳೆಯಲ್ಲಿಯೆ ಮಯೂರಧ್ವಜನು ಅಲ್ಲಿಗೆ ಬಂದು, ಕುದುರೆಯನ್ನು ಒಂದು ಗಿಡಕ್ಕೆ ಕಟ್ಟಿ, ಜಗಮಲ್ಲನ ಸಮೀಪಕ್ಕೆ ಬಂದನು. ಜಗಮಲ್ಲನು ಅಣ್ಣನ ಪಾದಕ್ಕೆರಗಿ-''ಅಣ್ಣಾ, ಬಹಳ ದಿವಸಗಳ ಮೇಲೆ ಭೆಟ್ಟಿಯಾದದ್ದರಿಂದ ಆನಂದವಾಗಿದೆ.''

ಮಯೂರಧ್ವಜನ ತಲೆಯಲ್ಲಿ ಅನೇಕ ವಿಚಾರಗಳು ಹುಟ್ಟಿದವು. ಹೃದಯವು ಕೆಲವು ಕಾರಣಗಳಿಂದ ಪ್ರಕ್ಷುಬ್ಧವಾಗಿತ್ತು. ಆದ್ದರಿಂದ ಜಗಮಲ್ಲನ ಮಾತಿನ ಕಡೆಗೆ ಆತನ ಲಕ್ಷ್ಯವಿದ್ದಿಲ್ಲ. ಅವನು ತನ್ನ ಬಂಧುವನ್ನು ಕುರಿತು ಗಾಂಭೀರ್ಯದಿಂದ:—''ಜಗಮಲ್ಲ, ನಿನ್ನೊಡನೆ ಒಂದು ಮಹತ್ವದ ವಿಷಯದ ಬಗ್ಗೆ ಮಾತಾಡಬೇಕಾಗಿದೆ.''

'ಅಣ್ಣಾ!' ಜಗಮಲ್ಲನು ಅಣ್ಣನ ಅಭಿಪ್ರಾಯವನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ:-''ಮಹತ್ವವಾದ ವಿಷಯದಬಗ್ಗೆ ಮಾತಾಡಲಿಕ್ಕೆ ಸದ್ಯದ ಗಂಭೀರವಾದ ವಾತಾವರಣವು ಒಳ್ಳೆಯ ಅನುಕೂಲವಾಗಿದೆ ಯಾವ ವಿಷಯದ ಬಗ್ಗೆ ಮಾತಾಡುವದಿರುವದು?''

''ನೀನು ಮನಸ್ಸನ್ನು ಸ್ಥಿರಪಡಿಸಿ, ವಿವೇಕಬುದ್ಧಿಯಿಂದ ನನ್ನ ಅಭಿಪ್ರಾಯವನ್ನು ಕೇಳು.''

''ಕೇಳುವೆನು, ಅವಶ್ಯವಾಗಿ ಹೇಳಿರಿ.''

''ನೀನು ಇನ್ನು ಮೇಲೆ ನಿನ್ನ ಸುಲಿಗೆಯ ಉದ್ಯೋಗವನ್ನು ಬಿಡಲಿಕ್ಕೆ ಬೇಕು.

''ಅದೇಕೆ?''

''ನಗದೇಶದ ರಾಣಾ ರಾಯಸಿಂಹರು ನನ್ನ ಪ್ರಭುಗಳಿರುವರು. ನೀನು ಡಾಕುತನದ ಕಾರ್ಯಬಿಡಬೇಕೆಂದು ಅವರ ಇಚ್ಛೆಯುಂಟು.''

''ಅವರ ಇಚ್ಛೆಯು ಹಾಗೆ ಇರಲಾರದೆಂದು ನನ್ನ ತಿಳುವಳಿಕೆಯಿದ್ದಿಲ್ಲ. ನಾನು ನಿಮ್ಮ ಪ್ರಭುಗಳಿಗೆ ಮುಂಚಿತವಾಗಿ ಪತ್ರ ಬರೆದು, ಅರುಣಗಡದ ಸರದಾರನ ಕನ್ಯೆಯಾದ ಕಲ್ಯಾಣಿಯ ಅಪೇಕ್ಷೆ ಮಾಡಬಾರದೆಂದು ತಿಳಿಸಿದ್ದೆನು. ಕಲ್ಯಾಣಿಯ ಮೇಲೆ ನನ್ನ ಅಧಿಕಾರವುಂಟು; ಯಾಕಂದರೆ, ನಾವು ಪರಸ್ಪರರು ಆತ್ಮಸಮರ್ಪಣ ಮಾಡಿರುವೆವು. ಹೀಗಿದ್ದರೂ ಆ ಅತ್ಯಾಚಾರಿಯಾದ ರಾಣಾನು ನನ್ನ ಪತ್ರವನ್ನು ತುಚ್ಛೀಕರಿಸಿ, ನನ್ನ ಪ್ರಣಯದೇವತೆಯೊಡನೆ ಬಲಾತ್ಕಾರದಿಂದ ವಿವಾಹವಾಗಿ ಪ್ರಣಯಭಂಗ ಮಾಡಿದನು.

ಶಾಂತಮನಸ್ಕರಾಗಿ ನೀವೇ ವಿಚಾರಿಸಿ ನೋಡಿರಿ; ರಾಯಸಿಂಹನ ಕೃತಿಯ ಪ್ರತೀಕಾರವೆಂದು ನಾನು ಕೈಗೊಂಡ ಸುಲಿಗೆಯ ಕಾರ್ಯವು ಅನುಚಿತವೇ ಹೇಗೆಂಬದನ್ನು?"

"ಜಗಮಲ್ಲ, ಜಗತ್ತಿನೊಳಗಿನ ವ್ಯಾಜ್ಯಗಳಲ್ಲಿ ಅರ್ಧಕ್ಕಿಂತ ಹೆಚ್ಚಾದ ವ್ಯಾಜ್ಯಗಳಿಗೆ ಸ್ತ್ರೀಯರೇ ಕಾರಣರಾಗಿರುವರು; ಆದ್ದರಿಂದ ನೀನು ಈ ವಿಷಯ ದಲ್ಲಿ ದ್ವೇಷಗೊಳ್ಳದೆ, ಸರ್ವಸ್ವ ಭಾರವನ್ನು ಪರಮಾತ್ಮನ ಮೇಲೆ ಹಾಕಿ ನನ್ನ ಮಾತನ್ನು ಮನ್ನಿಸು. ನಿನ್ನನ್ನು ರಾಜನಿಷ್ಠನನ್ನಾಗಿ ಮಾಡುವೆನೆಂದು ನಾನು ರಾಣಾಜಿಯವರೆದುರಿಗೆ ಪ್ರತಿಜ್ಞೆ ಮಾಡಿರುವೆನು."

"ಅಣ್ಣಾ, ವಿಚಾರಹೀನನೂ ಅನ್ಯಾಯಿಯೂ ಆದ ರಾಣಾನ ಸೇಡು ತೀರಿಸಿಕೊಳ್ಳುವ ಬಗ್ಗೆ ನಾನಾದರೂ ಪ್ರತಿಜ್ಞಾಬದ್ಧನಾಗಿರುವೆನು. ಅಂತೆಯೇ ನಿಮ್ಮ ಮಾತಿಗೆ ಮನ್ನಣೆಯನ್ನೀಯಲಿಕ್ಕೆ ಬರುವಂತಿಲ್ಲವೆಂದು ಖೇದವಾಗ ತೊಡಗಿದೆ; ಉಪಾಯವಿಲ್ಲ! ನಾನು ರಾಣಾನ ಸೇಡು ತೀರಿಸಿಕೊಳ್ಳದಿದ್ದರೆ, ಆತ್ಮವಂಚಕನಾಗುವೆನು."

'ಜಗಮಲ್ಲ!' ಮಯೂರಧ್ವಜನು ಉಕ್ಕುತ್ತಿರುವ ಸಂತಾಪವನ್ನು ನುಂಗಿ ಕೊಂಡು ಗಂಭೀರತೆಯಿಂದ:--"ನನ್ನಂತಹ ಸ್ವಾಮಿಭಕ್ತನ ಬಂಧುವು ರಾಜ ದ್ರೋಹಿಯಿರುವದನ್ನು ನಾನು ಹೇಗೆ ಕ್ಷಮಿಸಲಿ?"

"ಅಣ್ಣಾ, ನೀವು ಹೇಗೆ ಪ್ರಭುವಿನ ವಿಷಯವಾಗಿ ನಿಷ್ಠೆಯುಳ್ಳವರಿರು ವಿರೋ, ಹಾಗೆಯೆ ನಾನು ಆತ್ಮನ ಶಬ್ದವನ್ನು ಶಿರಸಾವಮಾನ್ಯ ಮಾಡುತ್ತಿರು ವೆನು. ಇದರಲ್ಲಿ ನನ್ನ ತಪ್ಪೇನು?"

"ಜಗಮಲ್ಲ! ರಾಜನು ದೇವತುಲ್ಯನೆಂದು ಶಾಸ್ತ್ರಗಳು ಸಾರುತ್ತವೆ."

"ನಿಜವು; ರಾಜನು ದೇವತುಲ್ಯನು ನಿಜವು. ಎಂತಹ ರಾಜನನ್ನು ದೇವನಂತೆ ತಿಳಿಯಬೇಕೆಂಬದರ ಬಗ್ಗೆ ಆ ಶಾಸ್ತ್ರಗಳಲ್ಲಿ ಏನೂ ಹೇಳಿಲ್ಲವೇನು? ರಾಜನು ಅನ್ಯಾಯಿಯೂ ಅತ್ಯಾಚಾರಿಯೂ ಪ್ರಜಾಪೀಡಕನೂ ಆದರೆ, ಅವ ನನ್ನು ದೇವನೆಂದು ತಿಳಿಯುವದು ನಿಮ್ಮಂತಹ ಅಂಧಶ್ರದ್ಧೆಯ ರಾಜನಿಷ್ಠ ರಿಗೆ ಸಾಧ್ಯವಿರುವದಲ್ಲದೆ, ನಿಜವಾದ ಅಭಿಮಾನಿಗಳೂ ನ್ಯಾಯಬುದ್ಧಿಯವರೂ ಹಾಗೆ ತಿಳಿಯಲಾರರು."

"ನಿನ್ನ ಕೃತ್ಯಗಳಿಂದ ರಾಜನು ನ್ಯಾಯನಿಷ್ಠನಾಗುವನೆಂದು ತಿಳಿ ದಿರುವೆಯೇನು?"

"ಕಬ್ಬಿಣವನ್ನು ಬೆಂಕಿಯಲ್ಲಿ ಕಾಸದೆ ಅದರಿಂದ ಒಡವೆಗಳನ್ನು ಯಾ- ರಾದರೂ ನಿರ್ಮಿಸಿಕೊಂಡಿರುವರೇನು?"

"ಜಗಮಲ್ಲ, ಜಗತ್ತಿನೊಳಗಿನ ಯಾವನೊಬ್ಬ ರಾಜನ ಇಲ್ಲವೆ ನ್ಯಾಯಾಧೀಶನ ಎಲ್ಲ ಕರ್ಮಗಳೂ ನಿರ್ಣಯಗಳೂ ನ್ಯಾಯಪೂರ್ಣವಿರುವವೆಂದು ತಿಳಿಯಲಿಕ್ಕೆ ಬರುವದಿಲ್ಲ. ಆದರಂತೆ ರಾಣಾ ರಾಯಸಿಂಹರಿಂದ ಯಾವುದೊಂದು ಅಪರಾಧವು ಘಟಿಸಿದ್ದಕ್ಕೆ ಭೀಷಣವಾದ ಪ್ರತಿಹಿಂಸೆಯ ಉಪಾಯ ಕೈಕೊಳ್ಳುವದು ಉಚಿತವೇ ಹೇಗೆ?"

"ಇಂತಹ ಉಪಾಯಗಳನ್ನು ಕೈಕೊಳ್ಳುವದೇ ಉಚಿತವು. ಹಾಗೆ ಮಾಡದಿದ್ದರೆ ಅತ್ಯಾಚಾರಿಗಳು ಮತ್ತಿಷ್ಟು ನೀಚಕರ್ಮ ಮಾಡಹತ್ತುವರು. ರಾಯಸಿಂಹನು ಅನ್ಯಾಯ ಮಾಡಿರುವದರಿಂದ, ಅವನು ದಂಡನೆಯನ್ನು ಹೊಂದಲಿಕ್ಕೇಬೇಕು."

"ತಪ್ಪುಗಾರನಿಗೆ ಕ್ಷಮೆಯಿರುವದು. ನೀನು ಉದಾರ ಮನಸ್ಸಿನಿಂದ ರಾಣಾಜಿಯವರ ಅಪರಾಧವನ್ನು ಕ್ಷಮಿಸು."

"ಕೃತಾಪರಾಧದ ಬಗ್ಗೆ ಯಾವನು ಪಶ್ಚಾತ್ತಾಪವುಳ್ಳವನಾಗಿರುವನೋ ಅವನಿಗೆ ಮಾತ್ರ ಕ್ಷಮೆ ದೊರೆಯುವದುಂಟು. ರಾಣಾಜಿಯು ತಾನು ಮಾಡಿದ ಕೀಳುತನದ ಹಾಗು ಅನ್ಯಾಯದ ಕೃತ್ಯಕ್ಕಾಗಿ ಅನುತಾಪಗೊಂಡಿರುವನೋ ಹೇಗೆ? ಹಾಗಿದ್ದರೆ ಹೇಳಿರಿ. ನಾನು ರಾಣಾನನ್ನು ಕ್ಷಮಿಸುವೆನು."

"ಅಂತೂ ನೀನು ಕೊನೆಯವರೆಗೆ ಇದೇ ವಿಧದ ಸುಲಿಗೆಗಾರಿಕೆಯ ಕಾರ್ಯವನ್ನೇ ಮಾಡತಕ್ಕವನಲ್ಲವೆ? ಜಗಮಲ್ಲ, ಚನ್ನಾಗಿ ವಿಚಾರ ಮಾಡು. ನಿನ್ನ ಕೃತಿಯು ನಮ್ಮ ಕುಲಕ್ಕೆ ಕಲಂಕರೂಪಿಯಾಗಿರುವದೆಂಬದನ್ನು ಲಕ್ಷ್ಯದಲ್ಲಿಡು!"

"ನಾನಂತೂ ಕೊನೆಯ ವರೆಗೆ ಸುಲಿಗೆಯ ಕೆಲಸ ಮಾಡತಕ್ಕವನೇ!"

"ಇಲ್ಲ; ನೀನು ಸುಲಿಗೆಯ ಕೆಲಸ ಬಿಡಲಿಕ್ಕೆಬೇಕು; ಯಾಕಂದರೆ, ಅದು ನನ್ನ ಸ್ವಾಮಿಭಕ್ತಿಯ ವಿಷಯವಿರುವದು."

"ಅಣ್ಣಾ, ಸ್ವಾಮಿಭಕ್ತಿಯ ವಿಷಯಕ್ಕಿಂತ ನ್ಯಾಯಾನ್ಯಾಯಗಳ ವಿಷಯಕ್ಕೆ ಹೆಚ್ಚಿನ ಮಹತ್ವವಿರುವದು."

"ಜಗಮಲ್ಲ, ಲಕ್ಷ್ಯದಲ್ಲಿಡು. ನಾನು ಸ್ವಾಮಿಭಕ್ತಿಯ ಸಲುವಾಗಿಯೇ ಜೀವಂತವಾಗಿರುವೆನೆಂಬದನ್ನು. ಚನ್ನಾಗಿ ಮನವರಿಕೆ ಮಾಡಿಕೊಂಡು ಕೆಲಸ ಮಾಡು."

"ನಿಮ್ಮ ಬಂಧುವಾದ ಜಗಮಲ್ಲನು ಪ್ರತಿಹಿಂಸೆಗಾಗಿಯೇ ಜೀವಿಸಿರುವೆನೆಂಬದನ್ನು ನೀವಾದರೂ ಮರೆಯತಕ್ಕದ್ದಲ್ಲ."

"ಇದೇ ನಿನ್ನ ಕೊನೆಯ ವಿಚಾರವೆ?"



ಮಯೂರ:—ಜಗಮಲ್ಲ, ನನ್ನಿಂದ ನಿನ್ನ ಕತ್ತು ಕೊಯ್ಯುವದು ಹೇಗೆ ಸಾಧ್ಯವಾದೀತು?"

ಗೆಲುವಿನ ಶಕ್ತಿ ಪುಟ ೫೩

"ಅಹುದು; ಇದೇ ನನ್ನ ಅಖಂಡವಾದ ಅಂತಿಮ ವಿಚಾರವು."

"ಎಲ್ಲಿಯ ವರೆಗೆ?"

"ದೇಹದಲ್ಲಿ ಪ್ರಾಣಜ್ಯೋತಿಯು ವಾಸಿಸಿರುವ ವರೆಗೆ!"

"ಮುಂದೆ ಏನು ಮಾಡಬೇಕೆನ್ನುವೆ?"

"ನಿಮ್ಮ ಆಜ್ಞೆಯಂತೆ ಮುಂದಿನ ಕಾರ್ಯ ಮಾಡುವೆನು."

'ನಿಜವೆ?'  'ನಿಜವು.'

ಮಯೂರಧ್ವಜನ ಧಮನೀಯುಗಳಲ್ಲಿ ರಕ್ತವು ವೇಗದಿಂದ ಹರಿಯ ಹತ್ತಿತು. ಆ ರಕ್ತಾವೇಗದ ಪರಿಣಾಮವು ಮಸ್ತಕಕ್ಕಾಗಿ, ಅದು ಗರಗರನೆ ತಿರುಗುತ್ತಿರುವಂತೆ ಅವನಿಗೆ ಭಾಸವಾಯಿತು. ನಾಲ್ಕೂ ಕಡೆಗೆ ಪ್ರಖರವಾದ ಬೇಗೆಯೆದ್ದಂತೆ ಅವನಿಗೆ ಉಷ್ಣತೆಯು ತಗಲಹತ್ತಿತು. ವಾತಾವರಣವು ತೀರ ಸ್ತಬ್ಧವಿದ್ದಂತೆ ಅವನಿಗೆ ಕ್ಷಣಹೊತ್ತು ತಿಳಿಯಿತು. ಮುಖದಿಂದ ಮಾತುಗಳು ಹೊರಡದೆ ಅವನು ಎಷ್ಟೋ ವೇಳೆಯ ವರೆಗೆ ಸ್ತಬ್ಧವಾಗಿ ಕುಳಿತುಬಿಟ್ಟಿದ್ದನು. ಅನಂತರದಲ್ಲಿ ಒಳ್ಳೆಯ ಪ್ರಯತ್ನಪೂರ್ವಕವಾಗಿ ಆತನು:-"ಹಾಗಾದರೆ ನಿನ್ನ ಗೆಲವಿನ ಕತ್ತಿಯನ್ನು ಹಿರಿದು ಈ ಮಾತಿನ ನಿರ್ಣಯ ಮಾಡಿಕೋ."

ಜಗಮಲ್ಲನು ಅಣ್ಣನ ಮಾತು ಕೇಳಿ ಸ್ತಂಭಿತನಾದನು. ಅವನು ನಾಲ್ಕೂ ಕಡೆಗೆ ದಿಟ್ಟಿಸಿ ನೋಡಿದನು. ಆಗ 'ಬೇಡ, ಬೇಡ' ಎಂಬ ಧ್ವನಿಯು ಅವನ ಕರ್ಣರಂಧ್ರವನ್ನು ಪ್ರವೇಶಿಸಿತು. 'ಏನು, ಅಣ್ಣನು ಏನು ಆಡಿದನು? ಕತ್ತಿಯನ್ನು ಹಿರಿಯಬೇಕೆಂದು ಹೇಳಿದನಲ್ಲವೆ! ಒಡಹುಟ್ಟಿದ ಅಣ್ಣನ ಮೇಲೆ ನನ್ನ ಗೆಲವಿನ ಕತ್ತಿಯನ್ನೆತ್ತಬೇಕೆ! ತಂದೆಯ ತರುವಾಯ, ತಂದೆಯಂತೆ ಭಾವಿಸಿದ ಅಣ್ಣನಲ್ಲಿ ನಿಷ್ಠುರಹೃದಯವುಳ್ಳವನಾಗಿ ಶಸ್ತ್ರವೆತ್ತಲಾ? ಅಸಂಭವ! ಅಸಂಭವ!'

ಜಗಮಲ್ಲನ ಕಿವಿಯಲ್ಲಿ 'ಅಸಂಭವ-ಅಸಂಭವ' ಎಂಬ ಧ್ವನಿಯು ಕೇಳ ತೊಡಗಿತು. ಅದೇ ಅವನ ಮುಖದಿಂದಲೂ ಹೊರಟಿತು'ಅಸಂಭವ, ಅಸಂಭವ!'

'ಅಸಂಭವವೆ?' ಮಯೂರಧ್ವಜನು ವಿಸ್ಮಿತನಾಗಿ-'ಅದೇಕೆ ಅಸಂಭವ?'

"ದೇವಸಮಾನರಾಗಿದ್ದ ಅಣ್ಣಂದಿರ ರಕ್ತದಿಂದ ನಾನು ನನ್ನ ಗೆಲವಿನ ಕತ್ತಿಯನ್ನು ಎಂದೂ ದೂಷಿತಗೊಳಿಸಲಾರೆನು. ನನ್ನ ಮನಸ್ಸು ಭ್ರಾತೃವಧೆಗೆ ಸಿದ್ಧವಾಗಲಾರದು. ನಾನು ಅಧರ್ಮಕ್ಕೆ ಬಿದ್ದು ಖಡ್ಗವನ್ನು ಹಿರಿದರೆ, ಅರವಲಿ ಪರ್ವತದ ಜಡಪಾಷಾಣಗಳಾದರೂ ನನ್ನ ತಿರಸ್ಕಾರ ಮಾಡದಿರವು. 'ನರಾಧಮಾ, ಯಾರ ಮೇಲೆ ಕತ್ತಿಯನ್ನು ಹಿರಿಯುವೆ?' ಎಂದು ಅವು ನನ್ನನ್ನು ಕೇಳದಿರಲಾರವು. ನಾನು ಅಧರ್ಮಕಾರ್ಯ ಪ್ರವೃತ್ತನಾದರೆ, ಈ ಸುಹಾಗ ಕೆರೆಯೊಳಗಿನ ಶೀತಲ ಜಲವು ಸಹ ತಪ್ತವಾಗಿ, ನನ್ನ ಮೇಲೆ ಅಗ್ನಿ ಜಲವೃಷ್ಟಿಗರೆ

ದೀತು. 'ಪರಮಪೂಜ್ಯ ಬಂಧುವಿನ ಮೇಲೆ ಶಸ್ತ್ರವೆತ್ತುವ ನೀನು ಪರಮ ಕೃತಘ್ನನು!' ಎಂದು ಪುಷ್ಕರಣಿಯು ನನ್ನನ್ನು ಧಿಃಕರಿಸಬಹುದು. ಈ ಧರಣೀಮಾತೆಯೂ ಆಕಾಶವೂ ನನ್ನ ಮೇಲೆ ಧಿಃಕಾರ ವೃಷ್ಟಿಗರೆಯಬಹುದು. ಪ್ರಿಯ ಬಂಧೋ! ಈ ವಿಜಯಿ ಖಡ್ಗವು ಪರಮ ಪೂಜ್ಯ ಬಂಧುವಿನ ಹೃದಯ ಶೋಣಿತ ಪ್ರಾಶನಕ್ಕಾಗಿ ನಿರ್ಮಾಣವಾಗಿಲ್ಲ!"

ಮಯೂರಧ್ವಜನು ಜಗಮಲ್ಲನ ಮಾತುಗಳನ್ನು ಕೇಳಿ ಕೆಲವು ಹೊತ್ತಿನವರೆಗೆ ವಿಚಾರದಲ್ಲಿ ಬಿದ್ದನು. ಅನೇಕ ವಿಧದ ವಿಚಾರಗಳಿಂದ ಅವನ ಹೃದಯದಲ್ಲಿ ವಿಚಿತ್ರವಾದ ಅಲ್ಲೋಲ-ಕಲ್ಲೋಲವೆದ್ದಿತ್ತು. ಅವನು ಬಲುವೆಯಿಂದ ಮನಸ್ಸು ಸ್ಥಿರಪಡಿಸಿ:—"ಜಗಮಲ್ಲ, ನೀನು ಬಂಧುಭಾವವನ್ನು ತ್ಯಜಿಸು. ಹಾಗೆ ಮಾಡದೆ ಗತ್ಯಂತರವಿಲ್ಲ ನಾವೀರ್ವರೂ ಏಕಮತದಿಂದ ಒಂದು ನಿಶ್ಚಿತವಾದ ಮಾರ್ಗವನ್ನು ಹುಡುಕಬೇಕಾಗಿದೆ. ಯಾವ ಮಾರ್ಗದಿಂದ ನಾವು ಉಭಯತರೂ ಜೀವಿಸಿರಬಹುದೆಂಬದರ ಬಗ್ಗೆ ನೀನು ನಿನ್ನ ವಿಚಾರ ತಿಳಿಸು ನೋಡುವಾ."

"ಅಣ್ಣಾ, ಈ ವಿಷಯದಲ್ಲಿ ನನಗೆ ಏನೂ ತೋಚದಾಗಿದೆ. ನೀವೇ ಹೇಳಿರಿ."

ಮಯೂರಧ್ವಜನು ಮತ್ತೆ ಕೆಲವು ವೇಳೆ ವಿಚಾರಿಸಿ:—"ನನ್ನ ದೃಷ್ಟಿಗಂತು ಒಂದೇ ಒಂದು ಮಾರ್ಗವು ತೋರುತ್ತಲಿದೆ. ಅದನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲ" "ಆ ಮಾರ್ಗವಾವುದು?"

"ನೀನು ಇನ್ನು ಮೇಲೆ ಸುಲಿಗೆಗಾರನಾಗಿ ಬಾಳುವಂತಿಲ್ಲ; ಇಲ್ಲವೆ ನಾನು ನಗದೇಶದ ಸೇನಾಪತಿಯಾಗಿ ಬಾಳುವಂತಿಲ್ಲ. ನಮ್ಮಿಬ್ಬರಲ್ಲ ಯಾರೊಬ್ಬರು ಮೃತ್ಯುಮುಖದಲ್ಲಿ ಬಿದ್ದ ಹೊರತು ಅನ್ಯ ಉಪಾಯವೇ ಇಲ್ಲ."

"ಅಣ್ಣಾ, ಖಡ್ಗವನ್ನು ಹಿರಿಯುವ ಕಲ್ಪನೆಯು ಮನಸ್ಸಿನಲ್ಲಿ ಬಂದ ಕೂಡಲೆ ಹೃದಯವು ಕಂಪಾಯಮಾನವಾಗುವದು. ಇಂತಹ ಪರಿಸ್ಥಿತಿಯಲ್ಲಿ ನಾನು ಹೇಗೆ ಖಡ್ಗಧಾರಣೆ ಮಾಡಲಿ? ನನ್ನಿಂದ ಈ ಕೃತ್ಯವು ಕಾಲತ್ರಯದಲ್ಲಿಯೂ ನೆರವೇರಲಾರದು. ನೀವು ನನ್ನ ಅಣ್ಣಂದಿರಿರುವಿರಿ; ಪೂಜ್ಯರಿರುವಿರಿ; ದೇವತುಲ್ಯರಿರುವಿರಿ."

"ಜಗಮಲ್ಲ!" ಮಯೂರಧ್ವಜನು ಗಂಭೀರತೆಯಿಂದ:—"ನೀನು ಹೀಗೆ ಮೋಹಪರವಶನಾಗಬೇಡ. ಹೀಗೆ ವರ್ತಿಸುವದು ಕ್ಷತ್ರಿಯರ ಲಕ್ಷಣವಲ್ಲ ಭಾರತೀಯ ಯುದ್ಧದಲ್ಲಿ ಅರ್ಜುನನ ಮನಸ್ಥಿತಿಯಾದರೂ ಇದರಂತೆಯೇ ಆಗಿತ್ತು. ಆ ವೇಳೆಯಲ್ಲಿ ಅವನ ಜೀವನದ ಹಾಗು ರಥದ ಸಾರಥಿ

ಯಾದ ಭಗವಾನ್ ಶ್ರೀಕೃಷ್ಣನು ಧರ್ಮೋಪದೇಶಮಾಡಿ ಅವನನ್ನು ಕರ್ತವ್ಯ ಪ್ರವೃತ್ತನನ್ನು ಮಾಡಿದನು. ಅಂತೆಯೆ ಅವನು ಪರಮಪೂಜ್ಯರಾದ ಪಿತಾ ಮಹ-ಗುರುಜನ-ಬಂಧು ಜನರ ಮೇಲೆ ಶಸ್ತ್ರವೆತ್ತಿದನು. ಪಾರ್ಥನಂತಹ ಧರ್ಮಜ್ಞನು ಸಹ ಮೋಹದಲ್ಲಿ ತೊಡಗಿದ್ದನ್ನು ನೋಡಿದರೆ, ನಿನ್ನಂಥವನು ಹಾಗೆ ವರ್ತಿಸುವದೇನೂ ಅನುಚಿತವಲ್ಲ. ಈ ಸಂದರ್ಭದಲ್ಲಿ ನೀನು ಮೋಹ ವನ್ನು ತ್ಯಜಿಸಲಿಕ್ಕೆಬೇಕು. ಕರ್ತವ್ಯಕ್ಕಿಂತ ಯಾವ ಧರ್ಮವೂ ದೊಡ್ಡದಲ್ಲ. ನೀನು ಅರ್ಜುನನನ್ನು ಅನುಕರಿಸಿದರೆ, ಶಸ್ತ್ರವೆತ್ತುವದು ನಿನಗೆ ಅಸಾಧ್ಯವೆನಿಸ ಲಾರದು.''

''ಅಣ್ಣಾ, ದುಃಶ್ಯಾಸನನು ರಾಜಸಭೆಯಲ್ಲಿ ಪಾಂಚಾಲಿಯ ಕುಲ ಮರ್ಯಾದೆಯನ್ನು ಭ್ರಷ್ಟಗೊಳಿಸಲಿಕ್ಕೆ ಸಿದ್ಧನಾದ ವೇಳೆಯಲ್ಲಿ, ಜ್ಯೇಷ್ಠ ಬಂ- ಧುವಾದ ಯುಧಿಷ್ಠಿರನ ವಚನಪಾಲನಾರ್ಥವಾಗಿ ಅದೇ ಪಾರ್ಥನು ಕ್ರೋ- ಧಾಗ್ನಿಯನ್ನು ನುಂಗಿಕೊಂಡು, ಸ್ತಬ್ಧನಾಗಿ ಕುಳಿತದ್ದನ್ನು ನೀವು ಮರೆತಂತೆ ತೋರುವದು. ಅದು ನಿಮ್ಮ ಲಕ್ಷ್ಯದಲ್ಲಿದ್ದರೆ, ನೀವು ನನಗೆ ಅರ್ಜುನನ ಅನುಕರಣ ಮಾಡಲಿಕ್ಕೆ ಹೇಳುತ್ತಿದ್ದಿಲ್ಲ.''

ಮಯೂರಧ್ವಜನು ಪರಾಜಿತನಾದನು ಮುಂದೆ ಏನು ಮಾಡಬೇಕೆಂ ಬದು ಅವನಿಗೆ ಸೋಚದಾಯಿತು. ವಿಶ್ವವು ಅವನ ಕಣ್ಣೆದುರಿಗೆ ಚಕ್ರಾ ಕಾರವಾಗಿ ತಿರುಗುತ್ತಿರುವಂತೆ ತೋರಹತ್ತಿತು. ಆಕಾಶವು ಮೇಲ್ಭಾಗದಿಂದ ಕೆಳಗೆ ಇಳಿಯುತ್ತಿರುವಂತೆ ಭಾಸವಾಗಲಾರಂಭಿಸಿತು. ಕಣ್ಣೆದುರಿಗೆ ಅಂಧ ಕಾರವು ಪಸರಿಸಿತು. ನಗದೇಶದ ಪ್ರತಾಪಿಯೂ ಬುದ್ಧಿಶಾಲಿಯೂ ಆದ ಸೇನಾಪತಿಯು ಹೀಗೆ ಎಂದೂ ಉದ್ಭ್ರಾಂತನಾಗಿದ್ದಿಲ್ಲ. ಅವನು ದಿಙ್ಮೂಢ ನಾಗಿ ಒಂದು ಗಳಿಗೆಯ ವರೆಗೆ ಸುಮ್ಮನೆ ಕುಳಿತನು. ಆಗ ಅವನು ಭಯಂ ಕರವಾದ ವಿಚಾರಸಾಗರದಲ್ಲಿ ಮುಳುಗಿದನು. ನಗದೇಶದ ರಾಣಾ ರಾಯ ಸಿಂಹನೆದುರಿಗೆ ಆಡಿದ ಮಾತುಗಳು ಅವನ ಲಕ್ಷ್ಯದಲ್ಲಿ ಬಂದ ಕೂಡಲೆ ಅವನ ಮಸ್ತಕದಲ್ಲಿ ಶಕ್ತಿಸಂಚಾರವಾಯಿತು. ತಾನು ಮಾಡಿದ ಪ್ರತಿಜ್ಞೆಯನ್ನು ಈಡೇರಿಸಲಿಕ್ಕೇಬೇಕೆಂದು ಅವನು ನಿಶ್ಚಯಿಸಿಕೊಂಡನು. ಅವನು ತನ್ನ ಬಂ- ಧುವಿನ ಕಡೆಗೆ ದಿಟ್ಟಿಸಿ ನೋಡಿದನು. ಕೂಡಲೆ ಅವನ ರಕ್ತನಾಳಗಳಲ್ಲಿ ರಕ್ತವು ಒತ್ತರದಿಂದ ಹರಿಯತೊಡಗಿತು. ಅವನು ತನ್ನ ಖಡ್ಗಕ್ಕೆ ಕೈಹಾಕಿ: ''ಜಗಮಲ್ಲ, ನೀನು ನಿನ್ನ ಖಡ್ಗವನ್ನು ಹೊರಗೆ ತೆಗೆಯಲಿಕ್ಕೆಬೇಕು. ಇನ್ನು ಮುಂದೆ ನಾವಿಬ್ಬರೂ ಕೂಡಿಯೇ ಭೂತಳದಲ್ಲಿರಲಿಕ್ಕೆ ಬರುವಂತಿಲ್ಲ; ಯಾಕಂ ದರೆ, ನೀನು ನಿನ್ನ ನಿಶ್ಚಯವನ್ನು ಬಿಡಲಿಕ್ಕೆ ಮನಸ್ಸು ಮಾಡದಾಗಿರುವೆ.

ಹೀಗಿದ್ದ ಮೇಲೆ ಈ ಮಾತಿನ ನಿರ್ಣಯ ಮಾಡಲಿಕ್ಕೆ ಬೇಕು. ನೀನು ಅನು ಮಾನಿಸದೆ ವಿಜಯಿೂಖಡ್ಗವನ್ನು ಹೊರಗೆ ತೆಗೆ."

"ಇಲ್ಲ; ನಾನು ನನ್ನ ಗೆಲವಿನ ಕತ್ತಿಯನ್ನು ಪರಮಪೂಜ್ಯ ಬಂಧು ವಿನ ಮೇಲೆ ಎತ್ತುವದಿಲ್ಲ."

"ಮುಂದೆ ಉಪಾಯವೇನು?" ಮಯೂರಧ್ವಜನು ಪ್ರವಾಹ ಪತಿತ ನಂತೆ ಅವಸ್ಥೆ ಹೊಂದಿ, ಜಗಮಲ್ಲನನ್ನು ಕೇಳಿದನು.

"ಒಂದೇ ಉಪಾಯವುಂಟು."

"ಅದು ಯಾವದು?" ಉತ್ಕಂಠೆಯಿಂದ ಮಯೂರಧ್ವಜನು ಕೇಳಿದನು.

ಕ್ಷಣದಲ್ಲಿ ವಿದ್ಯುದ್ಗತಿಯಿಂದ ಜಗಮಲ್ಲನ ಖಡ್ಗವು ಒರೆಯಿಂದ ಹೊರ ಬಿತ್ತು. ಅವನು ಅದನ್ನು ಮೇಲೆ ಎತ್ತಿ ಕೆರೆಯ ದಂಡೆಯಲ್ಲಿ ಬಿಸುಟ:— 'ಅಣ್ಣಾ, ಇದೇ ಉಪಾಯವು! ಇಗೋ ನೋಡಿರಿ, ನಾನು ನನ್ನ ಖಡ್ಗವನ್ನು ಬಿಸುಟಿರುವೆನು. ಈಗ ನಾನು ನಿಮ್ಮ ಪಾದಗಳ ಮೇಲೆ ಮಸ್ತಕವಿರಿಸುವೆನು ತತ್‌ಕ್ಷಣದಲ್ಲಿಯೇ ನೀವು ನನ್ನ ಮಸ್ತಕವನ್ನು ಹಾರಿಸಿರಿ; ನಿಮ್ಮ ಉಪಾಧಿ ಯನ್ನು ಪರಿಹರಿಸಿಕೊಳ್ಳಿರಿ!"

ಜಗಮಲ್ಲನು ಮಯೂರಧ್ವಜನ ಚರಣಗಳ ಮೇಲೆ ಮಸ್ತಕವಿರಿಸಿದನು ಈ ದೃಶ್ಯವನ್ನು ನೋಡಿ ಸೇನಾಪತಿಯು ವಿಸ್ಮಯಚಕಿತನಾದನು! ಒಬ್ಬ ತಾಯಿಯ ಉದರದಿಂದ ಜನಿಸಿ, ಒಂದೇ ಸ್ಥಳದಲ್ಲಿ ಬೆಳೆದು, ಬಾಲ್ಯದಿಂದ ಒಂದೇ ಆಡುತ್ತ ಕಡೆಗೆ ಪ್ರೇಮದಿಂದ ಕಾಲ ಕಳೆದ ಆ ಬಂಧುಗಳಿಬ್ಬರೂ ಆದರ್ಶಭೂತರಾಗಿದ್ದರು. ಪರಸ್ಪರರು ಪರಸ್ಪರರನ್ನು ಪ್ರೇಮದಿಂದ ಕಾಣುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಮಯೂರಧ್ವಜನು ಭ್ರಾತೃಭಕ್ತಿಯ ಬಂಧು ವಿನ ಶಿರಚ್ಛೇದನೆ ಮಾಡಬಹುದೆ? ಸ್ವಾಮಿನಿಷ್ಠೆಯು ಬಂಧುಪ್ರೇಮವನ್ನು ಜಯಿಸಬಹುದೆ?

ಮಯೂರಧ್ವಜನ ಹೃದಯದಲ್ಲಿ ಪ್ರೇಮರಸವು ಉಕ್ಕೇರಿತು. ಅವನು ಎದುರಿಗಿದ್ದ ಅರವಲಿ ಪರ್ವತದಂತೆ ನಿಶ್ಚಲನಾಗಿದ್ದ ತನ್ನ ಬಂಧುವನ್ನು ಅರ್ಧ ಮಿಾಲಿತ ನೇತ್ರದಿಂದ ನೋಡಿದನು. ಪರಮಪೂಜ್ಯ ಬಂಧುವಿನ ಪ್ರತಿಜ್ಞೆ ಯನ್ನು ಪೂರೈಸುವದಕ್ಕಾಗಿ ಆತ್ಮಬಲಿದಾನ ಮಾಡಲುದ್ಯುಕ್ತನಾದ ಜಗ ಮಲ್ಲನನ್ನು ನೋಡಿ ಅವನ ಕಂಠವು ಸದ್ಗದಿತವಾಯಿತು. ಮಾತುಗಳು ಹೊರಡದಾದವು. ಅವನು ಬಹಳೇ ಪ್ರಯತ್ನದಿಂದ:—"ಜಗಮಲ್ಲ, ನೀನು ನನ್ನ ಸಹೋದರನು. ನಿನ್ನ ಕುತ್ತಿಗೆಯನ್ನು ನಾನು ಹೇಗೆ ಕೊಯ್ಯಲಿ?" ಎಂದು ನುಡಿದು, ದೀರ್ಘವಾದ ನಿಟ್ಟುಸಿರು ಬಿಟ್ಟನು.

ಇಬ್ಬರೂ ಕೆಲವು ವೇಳೆಯವರೆಗೆ ಸ್ತಬ್ಧರಾಗಿದ್ದರು. ಪರಸ್ಪರರು ಪರಸ್ಪರರನ್ನು ಭೇದಕದೃಷ್ಟಿಯಿಂದ ನಿರೀಕ್ಷಿಸಹತ್ತಿದರು. ಮಯೂರಧ್ವಜನು ತಮ್ಮನನ್ನು ಸುಲಿಗೆಗಾರಿಕೆಯ ಕಾರ್ಯದಿಂದ ನಿವೃತ್ತನನ್ನಾಗಿ ಮಾಡುವ ಬಗ್ಗೆ ಪ್ರತಿಜ್ಞಾಬದ್ಧನಾಗಿದ್ದನು; ಜಗಮಲ್ಲನು ನಗದೇಶರಾಜ್ಯದಲ್ಲಿ ಆಮರಣವಾಗಿ ಸುಲಿಗೆಯ ಕೆಲಸ ಸಾಗಿಸುವ ದೃಢಸಂಕಲ್ಪ ಮಾಡಿಕೊಂಡಿದ್ದನು. ತಮ್ಮಿಬ್ಬರಲ್ಲಿ ಯಾರ ಇಚ್ಛೆಯು ಪೂರ್ಣವಾಗುವದೋ, ಎಂದು ಇಬ್ಬರೂ ಸಂಶಯಿತ ಮನಸ್ಕರಾಗಿ ಕುಳಿತಿದ್ದರು.

ಕೆಲವು ವೇಳೆಯ ಮೇಲೆ ಮಯೂರಧ್ವಜನು ಕೋಮಲವಾಣಿಯಿಂದ: "ಜಗಮಲ್ಲ, ನನ್ನಿಂದ ನಿನ್ನ ಕತ್ತುಕೊಯ್ಯುವದು ಹೇಗೆ ಸಾಧ್ಯವಾದೀತು?"

"ಅಣ್ಣಾ, ಪ್ರತಿಜ್ಞಾಪಾಲನೆಗಾಗಿ ಅಣ್ಣನು ತಮ್ಮನ ಶಿರವನ್ನು ಕೊಯ್ಯಲಿಕ್ಕೇಬೇಕು. ಹಾಗೆ ಮಾಡಿದರೆ ಮಾತ್ರ ನೀವು ಜಗತ್ತಿಗೆ ಆದರ್ಶಭೂತರಾಗುವಿರಿ. ಜಗತ್ತಿನಲ್ಲಿ ಕರ್ತವ್ಯಕ್ಕಿಂತ ವರಿಷ್ಠವಾದದ್ದು ಯಾವದೂ ಇಲ್ಲ. ಕರ್ತವ್ಯಪಾಲನೆಗಾಗಿ ಕಠೋರ ಹೃದಯಿಗಳಾಗಬೇಕು."

"ಜಗಮಲ್ಲ, ನೀನು ನನ್ನ ಜೀವಕ್ಕಿಂತ ಹೆಚ್ಚಾಗಿರುವೆ. ನಮ್ಮಿಬ್ಬರ ರಕ್ತವು ಒಂದೇ ಇರುವದು. ನಮ್ಮ ಬಾಲ್ಯದೆಶೆ, ಸಹಚರ್ಯ, ಪ್ರೇಮ ಈ ಎಲ್ಲ ವಿಷಯಗಳು ಕಣ್ಣೆದುರಿಗೆ ಕಟ್ಟಿದಂತಾಗಿವೆ. ಪ್ರಿಯಬಂಧು ಜಗಮಲ್ಲ, ನಾನು ನಿನ್ನ ಮೇಲೆ ಶಸ್ತ್ರವನ್ನು ಎತ್ತಲಾರೆ."

ಜಗಮಲ್ಲನು ಎದ್ದು ನಿಂತನು. ಆ ಮೇಲೆ ಅವನು ಗಂಭೀರತೆಯಿಂದ: "ಅಣ್ಣಾ, ನೀವು ಹೀಗೇಕೆ ಮೋಹಪರವಶರಾಗುವಿರಿ? ನೀವು ಪವಿತ್ರವಾದ ಕ್ಷಾತ್ರವೃತ್ತಿಗೆ ಕಲಂಕ ಹಚ್ಚಬೇಡಿರಿ. ನಿಜವಾದ ಕ್ಷತ್ರಿಯನು ಎಂದು ಪ್ರತಿಜ್ಞೆಯನ್ನು ಪಾಲಿಸುವದಿಲ್ಲವೋ ಅಂದು ಅವನ ಪಿತೃಗಳು ಅಧಃಪಾತ ಹೊಂದುವರು. ನಾನು ಮರಣಹೊಂದಿದರೆ ಏನಾಗುವದು? ಯಾವನು ಜೀವನದ ನಿಜವಾದ ಬೆಲೆಯನ್ನೂ ನಿಜವಾದ ಆದರ್ಶವನ್ನೂ ಗುರುತಿಸುವದಿಲ್ಲವೋ, ಅವನಿಗೆ ಮೃತ್ಯುವು ಭಯಾನಕವಾಗಿ ಕಾಣುತ್ತದೆ. ಅಣ್ಣನ ಪ್ರತಿಜ್ಞೆಯನ್ನು ನೆರವೇರಿಸುವದರ ಸಲುವಾಗಿ ಆತ್ಮಬಲಿದಾನ ಮಾಡುವದಕ್ಕಿಂತ ಹೆಚ್ಚಿನ ಭಾಗ್ಯವು ಮತ್ತಾವದಿರುವುದು? ನೀವು ಮೋಹವನ್ನು ಬದಿಗಿರಿಸಿ, ದೃಢನಿಶ್ಚಯದಿಂದ ಖಡ್ಗವನ್ನು ಹಿರಿಯಿರಿ."

ಮಯೂರಧ್ವಜನು ತನ್ನ ತಮ್ಮನ ಕಡೆಗೆ ನೋಡುತ್ತಲಿದ್ದನು. ತಂದೆಯು ಮಗನನ್ನು ನೋಡುವಾಗ ಇರತಕ್ಕ ಪ್ರೇಮವು ಅವನ ದೃಷ್ಟಿಯಲ್ಲಿ ನೆಲೆಗೊಂಡಿತ್ತು; ಭಗವಂತನು ಭಕ್ತನ ಕಡೆಗೆ ನೋಡುವಾಗ ಇರತಕ್ಕ ವಾತ್ಸ

ಲ್ಯವು ಅವನ ದೃಷ್ಟಿಯಲ್ಲಿ ವಾಸಿಸಿತ್ತು. ಮಾತೆಗೆ ಪುತ್ರಮರಣ ವಿಚಾರದಂತೆ ಅಸಹನೀಯವಾಗಿತ್ತು.

ಹಾಯ! ಹಾಯ! ಇದೆಂತಹ ಪರೀಕ್ಷೆಯ ವೇಳೆಯು? ಆದರ್ಶದ ತಕ್ಕಡಿಯ ಒಂದು ಪರಡಿಯಲ್ಲಿ ಅವನ ಪ್ರತಿಜ್ಞೆಯಿತ್ತು; ಮತ್ತೊಂದು ಪರಡಿಯಲ್ಲಿ ಸಹೋದರನ ಪ್ರಾಣವಿತ್ತು! ಒಂದು ಕಡೆಯಲ್ಲಿ ಸ್ವಾಮಿಭಕ್ತಿಯಿತ್ತು; ಮತ್ತೊಂದು ಕಡೆಗೆ ಬಂಧುವಿನ ಮಸ್ತಕವಿತ್ತು. ಎರಡರಲ್ಲಿ ಯಾವ ಮಾರ್ಗವನ್ನಾಕ್ರಮಿಸುವವನು? ನಗದೇಶದ ಆದರ್ಶಸೇನಾಪತಿಯು ಯಾವ ದಾರಿಯನ್ನು ಹಿಡಿಯುವವನು? ಕರ್ತವ್ಯದ ಮಾರ್ಗದಿಂದಲೋ, ಮಮತೆಯ ಮಾರ್ಗದಿಂದಲೋ?

ಮಯೂರಧ್ವಜನು ಸಜಲ ನೇತ್ರಗಳಿಂದ ಬಂಧುವನ್ನು ನಿರೀಕ್ಷಿಸಿದನು. ಜಗಮಲ್ಲನು ಗಂಭೀರ ಮುಖಮುದ್ರೆಯಿಂದ ನಿಂತಿದ್ದನು. ಮಯೂರಧ್ವಜನು ತನ್ನ ಕೈಯನ್ನು ಖಡ್ಗದ ಕಡೆಗೆ ಒಯ್ದನು; ಆದರೆ ಅವನ ಸ್ವರ್ಗಸ್ಥಳಾದ ತಾಯಿಯು ಧಾವಿಸಿ ಬಂದು ಎದುರಿಗೆ ನಿಂತು, 'ಬೇಡ, ಕಟುಕರ್ತವ್ಯ ಮಾಡಬೇಡ,' ಎಂದು ಹೇಳುತ್ತಿರುವಂತೆ ಅವನಿಗೆ ಭಾಸವಾಗತೊಡಗಿತು. ಕೂಡಲೆ ಅವನು ತನ್ನ ಎರಡೂ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಅತ್ತನು!

'ಅಣ್ಣಾ!' ಜಗಮಲ್ಲನು ಬಂಧುವಿನ ಅವಸ್ಥೆಯನ್ನು ನೋಡಿ ವ್ಯಾಕುಲಗೊಂಡು:—"ನನ್ನ ಬಂಧುವಿನ ಹೃದಯವು ಈ ಪರಿಯಾಗಿ ದುರ್ಬಲವಿರುವದನ್ನು ಕಂಡು ನನಗೆ ಬಹಳೇ ಖೇದವಾಗುವದು; ಮತ್ತು ನಾಚಿಕೆಯೆನಿಸುವದು. ಸ್ವಾಮಿಯ ಸಲುವಾಗಿ ತನ್ನ ಪುತ್ರನನ್ನು ಬಲಿಯೊಪ್ಪಿಸಿದ ಪನ್ನಾದಾಸಿಯು ನಿಜವಾದ ಕ್ಷಾತ್ರಾಣಿಯಿದ್ದಳು. ಅವಳಿಗಿಂತಲೂ ನೀವು ಕಡಿಮೆ ಯೋಗ್ಯತೆಯವರಾದಿರಿ."

"ಇಲ್ಲ, ಇಲ್ಲ" ನಾನು ಕಡಿಮೆ ಯೋಗ್ಯತೆಯವನಿಲ್ಲ. ಸ್ವಾಮಿಗಾಗಿ ಬೇಕಾದಂತಹ ಕಠೋರಕರ್ಮವನ್ನಾಚರಿಸಲಿಕ್ಕೆ ನಾನು ಸಮರ್ಥನಿರುವೆನು." ಎಂದು ಮಯೂರಧ್ವಜನು ಉಚ್ಚಕಂಠದಿಂದ ನುಡಿದು:—"ಹೂಂ ಮರಣಕ್ಕೆ ಸಿದ್ಧನಾಗು!"

"ಸಿದ್ಧನಿರುವೆನು!" ಎಂದು ಜಗಮಲ್ಲನು ನುಡಿದು, ಅವನೆದುರಿಗೆ ಶಿರಬಾಗಿ ನಿಂತು:—"ನನ್ನ ವಿಜಯಿ ಖಡ್ಗವನ್ನು ನೀವು ನನ್ನ ಪ್ರಿಯಪುತ್ರನಾದ ರಣಮಲ್ಲನ ಕಡೆಗೆ ಕಳುಹಿಸಿರಿ! ಇದೇ ನನ್ನ ಕೊನೆಯ ಬಯಕೆಯು ಹಾಗು ಬೇಡಿಕೆಯು."

ನಗದೇಶದ ಸೇನಾಪತಿಯು ಬಂಧುವಧೆಗೆ ಧೈರ್ಯವನ್ನುಂಟು ಮಾ

ಡುವ ಬಗ್ಗೆ ಪರಮೇಶ್ವರನನ್ನು ಪ್ರಾರ್ಥಿಸಿ, ಕಣ್ಣು ಮುಚ್ಚಿ ತನ್ನ ಖಡ್ಗವನ್ನು ಎತ್ತಿದನು. ಕಣ್ಣು ಮುಚ್ಚಿದ್ದರಿಂದ ಬಹಿರಂಗದೃಷ್ಟಿಯು ಕಟ್ಟಾಗಿತ್ತು; ಅಂತ ರಂಗದೃಷ್ಟಿಯು ನಿಚ್ಚಳವಾಗಿತ್ತು. ಅನೇಕ ದೇವತೆಗಳು ಅವನ ಅಂತಃ ಚಕ್ಷುವಿನ ಮುಂದೆ ಬಂದು ಧಿಃಕಾರ ಮಾಡುತ್ತಿರುವಂತೆ ಅವನಿಗೆ ಭಾಸವಾಗ ತೊಡಗಿತ್ತು. ಅವನ ಮೃತಮಾತೆಯು ಕಣ್ಣೀರುದುರಿಸುತ್ತ ಎದುರಿಗೆ ನಿಂತು, ಕಟುಕರ್ತವ್ಯವನ್ನಾಚರಿಸಬೇಡೆಂದು ಹೇಳುತ್ತಿರುವಂತೆ ಕಂಡಿತು. ಕೂಡಲೆ ಅವನ ಖಡ್ಗವು ಸಡಿಲಾಗಿ ಕೆಳಗೆ ಇಳಿಯುವ ಯತ್ನದಲ್ಲಿತ್ತು; ಅಷ್ಟರಲ್ಲಿ ಸ್ವಾಮಿಭಕ್ತಳಾದ ಪನ್ನಾದಾಸಿಯು ಪ್ರಭುವಿಗಾಗಿ ತನ್ನಮಗನ ಬಲಿಯೊಪ್ಪಿ ಸಿದ ನೋಟವು ಕಂಡಿತು. ಪರಕ್ಷಣದಲ್ಲಿ ಪ್ರತಿಜ್ಞಾಪಾಲನೆಗಾಗಿ ರಾಜಾ ಹರಿಶ್ಚಂದ್ರನು ತನ್ನ ಪತ್ನಿ-ಪುತ್ರರನ್ನು ವಿಕ್ರಯಿಸಿದ ದೃಶ್ಯವು ಕಂಡಿತು. ಕೂಡಲೆ ಅವನು ಸಡಿಲಾದ ಹಸ್ತವನ್ನು ಗಟ್ಟಿಮಾಡಿದನು. ಮನಸ್ಸು ದೃಢವಾಯಿತು.

ಪರಮಪೂಜ್ಯ ಬಂಧುವಿನ ಸಮ್ಮುಖದಲ್ಲಿ ಕೈಜೋಡಿಸಿ ಅವನತ ಮುಖ ನಾಗಿ ಕುಳಿತ ಜಗಮಲ್ಲನು ಭಗವನ್ನಾಮಸ್ಮರಣೆ ಮಾಡತೊಡಗಿದ್ದನು. ಅವನ ಅಂತಃಚಕ್ಷುವಿಗೆ ಒಂದು ತೇಜೋಮಯಿಯಾದ ಮೂರ್ತಿಯು ಕಂ- ಗೊಳಿಸಿ, ಎರಡನೆಯ ಕ್ಷಣದಲ್ಲಿ ಮಾಯವಾಯಿತು. ಅನಂತರದಲ್ಲಿ ಅವನ ಹೃದಯದೇವತೆಯಾದ ಕಲ್ಯಾಣಿಯು ಎದುರಿಗೆ ಬಂದು ನಿಂತಂತಾಯಿತು. ಆಗ ಅವನು ಮನದಲ್ಲಿಯೆ:—"ಕಲ್ಯಾಣಿ! ಪ್ರಿಯತಮೆ! ಅಲ್ಲಲ್ಲ, ಪ್ರಿಯಕನ್ಯೆ ಯಾದ ಕಲ್ಯಾಣಿ! ಇದೇ ಕೊನೆಯ ದರ್ಶನವು. ನಾನು ನಿನ್ನ ಅಖಂಡವೂ ಅನಂತವೂ ಆದ ಸಹಚರ್ಯಕ್ಕಾಗಿ ಸ್ವರ್ಗದಲ್ಲಿ ಪ್ರತೀಕ್ಷೆಮಾಡುತ್ತಲಿರು ವೆನು. ಕಲ್ಯಾಣಿ, ದುಃಖಿಸಬೇಡ. ಮಾನವ ಜೀವಿತವು ಕ್ಷಣಭಂಗುರವಾದದ್ದು. ಅದು ತಾರುಣ್ಯದ ಅತ್ಯಲ್ಪವಾದ ಇತಿಹಾಸವು. ನೀನು ನನ್ನ ಪಾಲಿತ ಪುತ್ರ ನಾದ ರಣಮಲ್ಲನನ್ನು ರಕ್ಷಿಸು. ಕಲ್ಯಾಣಿ............!"

ದುಃಖವೇಗದಿಂದ ಜಗಮಲ್ಲನ ವಿಚಾರವು ಸ್ತಂಭಿತವಾಯಿತು. ಅಷ್ಟ ರಲ್ಲಿ ಮಯೂರಧ್ವಜನ ಕರಾಲಖಡ್ಗವು ವಿದ್ಯುಲ್ಲತೆಯಂತೆ ಬಂದು ಅವನ ಮಸ್ತಕವನ್ನು ಕತ್ತರಿಸಿತು!

"ಕಲ್ಯಾಣಿ! ರಣಮಲ್ಲ!" ಎಂಬ ಧ್ವನಿಯು ಹೊರಟು ಅದು ವಾತಾ ವರಣದಲ್ಲಿ ಬೆರೆತು ಹೋಗುವಷ್ಟರಲ್ಲಿ, ಜಗಮಲ್ಲನ ಪಂಚಪ್ರಾಣಗಳೂ ಅದ ರಲ್ಲಿಯೇ ಏಕಜೀವವಾಗಿಯೇ ಹೋದವು!

ಮಯೂರಧ್ವಜನು ಕಣ್ಣು ತೆಗೆದನು. ಕೂಡಲೆ ಅವನ ಮೇಲೆ ವಿದ್ಯು

ತ್ಪಾತವಾದಂತಾಯಿತು! ಒಡಹುಟ್ಟಿದ ಬಂಧುವಿನ ವಧೆಯನ್ನು ಕೈಮುಟ್ಟಿ ಮಾಡಿದ್ದರಿಂದ ಅವನಿಗೆ ಹೇಳಕೂಡದಷ್ಟು ವ್ಯಥೆಯಾಗಿ 'ಹಾಯ! ಹಾಯ!' ಎಂಬ ಉದ್ಗಾರವು ಅವನ ಮುಖದಿಂದ ಹೊರಟಿತು. ತನ್ನಿಂದ ಪೈಶಾಚಿಕ ಕೃತ್ಯವು ಘಟಿಸಿತೆಂದು ಅವನು ದೊಡ್ಡ ಧ್ವನಿ ತೆಗೆದು ಅಳತೊಡಗಿದನು. ಅವನು ರಕ್ತಮಯವಾದ ಬಂಧುವಿನ ಮಸ್ತಕವಿಹೀನ ದೇಹದ ಮೇಲೆ ಬಿದ್ದು ಮೂರ್ಛಿತನಾದನು!

---

## ವಾತ್ಸಲ್ಯಾನುಭವ.

ರಾಕು ರಣಮಲ್ಲನು ತನ್ನ ಗುಪ್ತಕಾರಸ್ಥಾನದ ಗುಹೆಯಲ್ಲಿ ಒಬ್ಬನೆ ಚಿಂತಾಮಗ್ನನಾಗಿ ಕುಳಿತಿದ್ದನು. ಅವನ ಪಾಲಕ ಪಿತನಾದ ಜಗಮಲ್ಲನು ಇಹಲೋಕವನ್ನು ತ್ಯಜಿಸಿ ಎರಡೇ ದಿನಗಳಾದ್ದರಿಂದ, ಅವನ ಮನೋಭೂಮಿಕೆಯು ವಿಚಿತ್ರವಾಗಿತ್ತು. ಈಗ ಅವನ ಮೇಲೆ ಜಗತ್ತಿನ ದುಃಖ-ಕ್ಲೇಶಗಳಿಂದ ರಕ್ಷಣಮಾಡುವ ಛತ್ರವಿದ್ದಿಲ್ಲ; ವಾತ್ಸಲ್ಯದ ಅಮೃತಪ್ರಾಶನ ಮಾ-ಡುವ ಕಾರುಣ್ಯದ ಮೂರ್ತಿಮಂತ ವ್ಯಕ್ತಿಯು ಇದ್ದಿಲ್ಲ. ತಾನು ಇನ್ನುಮೇಲೆ ಬಹಳ ದಿವಸಗಳ ವರೆಗೆ ಬದುಕಿರಲಾರೆನೆಂದು ಅವನು ತಿಳಿದಿದ್ದನು. ಅವನು ಜೀವದಿಂದುಳಿದ ಉದ್ದೇಶವು ಒಂದೇ ಒಂದಾಗಿತ್ತು. ಪರಮಪೂಜ್ಯ ಪಿತೃವಿನ ಆಜ್ಞೆಯನ್ನು ಈಡೇರಿಸುವದೇ ಅವನ ಜೀವನದ ಮುಖ್ಯ ಧ್ಯೇಯವಾಗಿತ್ತು. ತಂದೆಯಿಂದ ನೆರವೇರದಿದ್ದ ಕಾರ್ಯದಲ್ಲಿ ಹೇಗೆ ಯಶಸ್ವೀಯಾಗಬೇಕೆಂಬ ವಿಚಾರದಲ್ಲಿ ಅವನು ಮುಳುಗಿದ್ದನು. ಆಗ ಒಬ್ಬ ದೂತನು ಅವನಿಗೆ ಒಂದು ಪತ್ರವನ್ನು ಕೊಟ್ಟನು. ರಣಮಲ್ಲನು ಉತ್ಸುಕತೆಯಿಂದ ಅದನ್ನು ಓದಿದನು!

"ಕುಮಾರ ರಣಮಲ್ಲ!

ಇಂದು ಮಧ್ಯರಾತ್ರಿಯು ಮೀರಿದ ಮೇಲೆ ರಾಜಶಿಲಾನದಿಯ ದಂಡೆಯಲ್ಲಿ ಬರಬೇಕು. ಮನಸ್ಸಿನಲ್ಲಿ ಯಾವ ವಿಧದ ಸಂದೇಹವನ್ನೂ ಹಿಡಿಯಲಾಗದು. ಜೀವಕ್ಕೆ ಭಯವೆನಿಸಿದರೆ ನಿನ್ನ ಪಿತೃದತ್ತವಾದ ಗೆಲವಿನ ಕತ್ತಿಯನ್ನು ತರಬೇಕು. ಜೊತೆಗೆ ಮತ್ತೆ ಯಾರನ್ನೂ ಕರೆದುಕೊಂಡು ಬರಕೂಡದು. ನಿನ್ನನ್ನು ಪುತ್ರನಂತೆ ಕಾಣುತ್ತಿರುವ ಒಂದು ವ್ಯಕ್ತಿಯು ನಿನ್ನ ಭೆಟ್ಟಿಗಾಗಿ ಆತುರಗೊಂಡಿದೆ."

ಪತ್ರದ ರಹಸ್ಯವು ಅವನಿಗೆ ತೋಚದಾಯಿತು. ಆಗ ಅವನು ಸೇವಕನನ್ನು ಕುರಿತು:—"ಈ ಪತ್ರವನ್ನು ನಿನಗೆ ಯಾರು ಕೊಟ್ಟರು?"

"ಒಬ್ಬ ಭಿಲ್ಲನು ಕೊಟ್ಟು, ಇದನ್ನು ನಿನ್ನ ಒಡೆಯನಿಗೆ ಮುಟ್ಟಿಸೆಂದು ಹೇಳಿ ಹೋದನು. ಇದು ಯಾರ ಪತ್ರವೆಂದು ನಾನು ಅವನನ್ನು ಕೇಳಿದೆನು. ಪತ್ರವನ್ನು ಓದಿದರೆ ಎಲ್ಲವೂ ತಿಳಿಯುವದೆಂದು ಅವನು ಹೇಳಿದನು"

"ಒಳ್ಳೆಯದು; ನೀನು ನಿನ್ನ ಕೆಲಸಕ್ಕೆ ತೆರಳು." ಎಂದು ರಣಮಲ್ಲನು ಹೇಳಿದೊಡನೆಯೆ ಸೇವಕನು ಹೊರಟು ಹೋದನು

ರಣಮಲ್ಲನು ಬಹಳ ವೇಳೆ ವಿಚಾರಿಸುತ್ತ ಕುಳಿತನು; ಆದರೆ ಪತ್ರವು ಯಾರಿಂದ ಬಂದಿರುವದೆಂಬದು ಅವನಿಗೆ ತಿಳಿಯಲಿಲ್ಲ. ತನ್ನನ್ನು ಪುತ್ರನಂತೆ ಭಾವಿಸಿದ್ದ ವ್ಯಕ್ತಿಯು—ಪಾಲಕ ಪಿತೃನಾದ ಜಗಮಲ್ಲನು— ಇಹಲೋಕದಲ್ಲಿ ದ್ದಿಲ್ಲ. ಹೀಗಿದ್ದು, ಮತ್ತೆ ಯಾರು ತನ್ನ ಮೇಲೆ ಪುತ್ರಪ್ರೇಮವನ್ನಿರಿಸಿರಬಹು ದೆಂದು ಅವನು ಯೋಚಿಸಿದನು. ಕಡೆಗೂ ಅವನಿಗೆ ಪತ್ರದ ಗೂಢವು ತಿಳಿಯ ದಾಯಿತು.

'ಪತ್ರದ ಮೇರೆಗೆ ರಾಜಶಿಲಾನದಿಯ ತಟಾಕಕ್ಕೆ ಹೋಗುವದು ಉಚಿತ ವಾಗಬಹುದೆ? ಯಾವನೊಬ್ಬನು ಘಾತುಕತನದಿಂದ ಕೊಲೆ ಮಾಡುವದಕ್ಕಾಗಿ ರಚಿಸಿದ ಕಾರಸ್ಥಾನವು ಇದಾಗಿರಲಿಕ್ಕಿಲ್ಲವಷ್ಟೆ? ಬಳಿಯಲ್ಲಿ ಶಸ್ತ್ರವಂತೂ ಇದ್ದೇ ಇರುವದು ಅಂತಹ ಪ್ರಸಂಗವೊದಗಿದರೆ ನೋಡಲಿಕ್ಕೆ ಬಂದೀತು. ಪತ್ರದ ಮೇರೆಗೆ ರಾಜಶಿಲಾತಟಾಕಕ್ಕೆ ಹೋಗಿ ಬರುವೆನು' ಈ ಮೇರೆಗೆ ಅವನು ವಿಚಾರಮಾಡಿ, ತನ್ನ ಗುಹೆಯನ್ನು ಬಿಟ್ಟು ತೆರಳಿದನು. ಅವನು ತನ್ನ ಜೊತೆಗೆ ಯಾರನ್ನೂ ಕರೆದುಕೊಳ್ಳಲಿಲ್ಲ. ಪರಮಪೂಜ್ಯನಾದ ಪಿತನ ಗೆಲವಿನ ಕತ್ತಿಯು ಮಾತ್ರ ಅವನ ಟೊಂಕದಲ್ಲಿ ಅಲೆದಾಡುತ್ತಲಿತ್ತು.

ಮಧ್ಯರಾತ್ರಿಯಾಗಿತ್ತು. ಶುಕ್ಲಪಕ್ಷವಿದ್ದುದರಿಂದ ಚಂದ್ರಮನು ನಭ ಪ್ರಾಂಗಣದಲ್ಲಿ ಮಾರ್ಗಕ್ರಮಣ ಮಾಡುತ್ತ ಸೃಷ್ಟಿಗೆ ಕಿರಣಗಳನ್ನು ಕೆಡಹ ತೊಡಗಿದ್ದನು. ಅರವಲೀ ಪರ್ವತದ ಆಸಮಂತಾತ್ ವನಪ್ರದೇಶವು ಚಂದ್ರಿ ಕೆಯ ಶುಭ್ರ ಪ್ರಕಾಶದಿಂದ ಶೋಭೆಗೊಂಡಿತ್ತು. ನಗದೇಶದ ಸಮೀಪಕ್ಕೆ ಅರ ವಲೀ ಪರ್ವತದ ನವಪ್ರದೇಶವಲ್ಲಿ ಹರಿಯುತ್ತಿದ್ದ ರಾಜಶಿಲಾನದಿಯ ಪ್ರವಾ ಹವು ಚಂದ್ರಿಕೆಯ ಕಿರಣಗಳಿಂದ ರೌಪ್ಯಪ್ರವಾಹದಂತೆ ಕಮನೀಯವಾಗಿತ್ತು. ರಣಮಲ್ಲನು ಈ ಶೋಭನೀಯವಾದ ಸೃಷ್ಟಿಶೋಭೆಯನ್ನು ನಿರೀಕ್ಷಿಸುತ್ತ ರಾಜ ಶಿಲೆಯ ತಟಾಕದ ವಾಲುಕಾಮಯ ಪ್ರದೇಶದಲ್ಲಿ ಮಾರ್ಗಕ್ರಮಣ ಮಾಡ ತೊಡಗಿದ್ದನು. ನಿಶ್ಚಿತವಾದ ವೇಳೆಯು ಮೀರಿ ಹೋಗಿದ್ದರೂ, ಅಲ್ಲಿಗೆ ಯಾರೂ ಬಾರದ್ದರಿಂದ ಅವನ ಮನಸ್ಸು ಗೊಂದಲಕ್ಕೀಡಾಯಿತು. ಅವನು ಒಂದು ವಿಶಾಲವಾದ ಪ್ರದೇಶದಲ್ಲಿ ಕುಳಿತು ಸುತ್ತುಮುತ್ತಲು ನಿರೀಕ್ಷಿಸತೊಡಗಿದನು.

ಆ ವೇಳೆಯ ವಾತಾವರಣವು ಅತ್ಯಂತ ಪ್ರಶಾಂತವಿದ್ದು, ಸೃಷ್ಟಿಶೋಭೆಯಿಂದ ಮನಸ್ಸು ಆಹ್ಲಾದಗೊಳ್ಳುತ್ತಲಿತ್ತು; ಅಂದರೆ ರಣಮಲ್ಲನಿಗೆ ಪ್ರಕೃತಿದತ್ತ ಸೌಖ್ಯವನ್ನು ಉಪಭೋಗಿಸುವ ಸಮಯವಿದ್ದಿಲ್ಲ. ಬಾಹ್ಯಸೃಷ್ಟಿಯು ಶಾಂತ ವಿದ್ದರೂ ಅವನ ಅಂತರಂಗವು ಮಹಾಸಾಗರದಂತೆ ಕೋಲಾಹಲ ಧ್ವನಿಯ ನ್ನೊಡಗೊಂಡಿತ್ತು. ತಂದೆಯ ಮೃತ್ಯುವಿನ ಸೇಡನ್ನೂ ಅವನ ಅಂತಿಮ ಇಚ್ಛೆ ಯನ್ನೂ ಈಡೇರಿಸಿದ ಹೊರತು, ತಳಮಳಿಸುವ ಅವನ ಆತ್ಮಕ್ಕೆ ಸುಖಶಾಂತಿ ಗಳು ಲಭಿಸುವಂತಿದ್ದಿಲ್ಲ.

ಪತ್ರ ಬರೆದ ವ್ಯಕ್ತಿಯು ಇನ್ನೂ ಏಕೆ ಬರಲಿಲ್ಲವೆಂದು ಅವನು ವಿಚಾರ ಮಾಡತೊಡಗಿದನು. ಹೀಗೆ ಗೂಢವಾಗಿ ಬರೆದು ನಿರ್ಜನ ಪ್ರದೇಶದಲ್ಲಿ ಮಧ್ಯ ರಾತ್ರಿಯ ಸಮಯಕ್ಕೆ ಕರೆಯಿಸಿಕೊಳ್ಳಬೇಕಾದರೆ, ಪತ್ರ ಬರೆದ ಮನುಷ್ಯನು ತನ್ನನ್ನು ಶಾಂತಗೊಳಿಸುವ ಪ್ರಯತ್ನ ಮಾಡಿರಬಹುದೆಂಬ ಸಂದೇಹವೂ ಅವ ನಲ್ಲಿ ತಲೆದೋರಿತು; ಆದರೆ ಇಂತಹ ಘಟನೆಗೆ ಅಳ್ಕೊಡೆದು ಸಂದಿಗೊಂದಿ ಗಳಲ್ಲಿ ಅಡಗಿಕೊಳ್ಳುವಂತಹ ಹೇಡಿಯು ಅವನಾಗಿದ್ದಿಲ್ಲ. ಅವನು ಅಚ್ಚ ರಜ ಪುತನಿದ್ದನು. ಶೌರ್ಯ-ಪ್ರತಾಪಗಳನ್ನು ತೋರಿಸುವ ಪ್ರಸಂಗದಲ್ಲಿ ಜೀವನ ವನ್ನು ಕಪದಿಯಂತಲೂ ಕಡೆಯಾಗಿ ಭಾವಿಸುತ್ತಿದ್ದನು. ಅವನು ಪಿತೃದತ್ತ ವಾದ ಗೆಲವಿನ ಕತ್ತಿಯ ಕಡೆಗೆ ಕೈನೀಡಿದನು ಅದನ್ನು ಒರೆಯಿಂದ ಹೊರಗೆ ಹಿರಿದು, ವಾತಾವರಣದಲ್ಲಿ ಝಳಪಿಸಿ ಮತ್ತೆ ಒರೆಗಾಣಿಸಿದನು

"ಪತ್ರ ಬರೆದವರು ಯಾರಾಗಿರಬಹುದು? ನನ್ನ ಮೇಲೆ ಪುತ್ರವಾತ್ಸಲ್ಯ ತಳೆದ ವ್ಯಕ್ತಿಯು ಜಗಮಲ್ಲನು. ಅವನಂತು ಇಹಲೋಕವನ್ನು ತ್ಯಜಿಸಿದನು. ನನ್ನನ್ನು ಪ್ರೇಮದೃಷ್ಟಿಯಿಂದ ನೋಡುವವರು ಮತ್ತೆ ಯಾರಾದರೂ ಇರ ಬಹುದೆ?" ರಣಮಲ್ಲನು ಸಹಜವಾಗಿ ಎದುರಿಗೆ ನೋಡಿದನು. ಅಲ್ಲಿ ಅವನು ಕಂಡದ್ದೇನು?

ನೇತ್ರಗಳಲ್ಲಿ ವಾತ್ಸಲ್ಯದ ಪ್ರವಾಹವು ಹೊರಸೂಸುತ್ತಿರುವ, ದೇಹದಲ್ಲಿ ವಾತ್ಸಲ್ಯತೆಯು ತುಂಬಿ ಹೊರಬೀಳುತ್ತಿರುವ, ಮೋಹ-ಮಮತೆಗಳ ಶ್ವಾಸೋ ಚ್ಛ್ವಾಸ ಬಿಡುತ್ತಿರುವ, ಆಲಿಂಗನಕ್ಕಾಗಿ ಬಾಹುಗಳನ್ನು ಮುಂದೆ ಮಾಡಿರುವ, ಸಂಬೋಧನೆಗಾಗಿ ಆತುರಗೊಂಡಿರುವ, ಪ್ರೇಮದಿಂದ ಮಾತಾಡಲು ಉತ್ಸುಕ ವಾಗಿರುವ, ಮಾತೃಮೂರ್ತಿಯ ಸ್ವರೂಪ ಧಾರಣ ಮಾಡಿರುವ ಒಬ್ಬ ರಜ ಪುತ ಮಹಿಳೆಯು ರಣಮಲ್ಲನ ಕಡೆಗೆ ಏಕಾಗ್ರದೃಷ್ಟಿಯಿಂದ ನೋಡುತ್ತ ಶಿಲಾಪ್ರತಿಮೆಯಂತೆ ನಿಂತಿದ್ದಳು!

ಶೀತಲತೆಯ ಪರಾಕಾಷ್ಠೆಯಿಂದ ಹೇಗೆ ಹಿಮವು ಕೂಡುವದೋ, ಹಾ-

ಗೆಯೇ ಆ ರಜಪುತ ರಮಣಿಯ ಆಂತರಿಕ ವಾತ್ಸಲ್ಯಾತಿರೇಕದಿಂದ ರಣಮಲ್ಲನ ಚಂಚಲವೂ ಕ್ಷುಬ್ಧವೂ ಆದ ಮನಸ್ಸು ಸ್ಥಿರವೂ ಶಾಂತವೂ ಆಯಿತು.

ಆ ರಜಪುತ ರಮಣಿಯು ಯಾರಿರಬಹುದೆಂಬ ವಿಚಾರ ಮಾಡುವಷ್ಟು ಸ್ಮೃತಿಯು ರಣಮಲ್ಲನಲ್ಲಿ ಉಳಿದಿದ್ದಿಲ್ಲ ಅವನ ದೇಹ, ಆತ್ಮ, ಹೃದಯ, ಬುದ್ಧಿ, ಚೈತನ್ಯ ಮೊದಲಾದವುಗಳನ್ನು ಆ ಕ್ಷಾತ್ರ ರಮಣಿಯು ಆಕರ್ಷಿಸಿದ್ದಳು. "ರಣಮಲ್ಲ!"

ಮಮತೆಯ ಘೂತ್ಕಾರದ ಮೊದಲನೆಯ ಧಾರೆಯು ಹೊರಟಿತು.

ರಣಮಲ್ಲನು ನಿಸ್ತಬ್ಧತೆಯಿಂದ ಎದ್ದು ನಿಂತನು. ಮಾತಾಡುವ ಮನಸ್ಸು ಮಾಡಿದನು; ಆದರೆ ಅವನ ಮುಖದಿಂದ ಮಾತುಗಳು ಹೊರಡದಾದವು.

"ಕುಮಾರಾ, ನನ್ನನ್ನು ಗುರುತಿಸುವೆಯಾ?"

ಆ ರಜಪುತ ರಮಣಿಯ ವಾಣಿಯಲ್ಲಿ ಪ್ರಾಣಕ್ಕಿಂತ ಅಧಿಕವಾದ ವಾತ್ಸಲ್ಯವು ಸಮಾವೇಶವಾಗಿತ್ತು.

ರಣಮಲ್ಲನು ಆ ಮಾತೃಮೂರ್ತಿಯನ್ನು ಭಕ್ತಿಪೂರ್ವಕವಾಗಿ ನಿರೀಕ್ಷಿಸಿ:—"ಅಮ್ಮಾ, ನಾನು ನಿಮ್ಮನ್ನು ಗುರುತಿಸಲಾರೆನು."

"ಅಮ್ಮಾ, ಎಂದು ಯಾರಿಗೆ ಅನ್ನುವರೆಂಬದನ್ನಾದರೂ ನೀನು ಬಲ್ಲೆಯಾ?" "ಗೊತ್ತಿದೆ."

"ನೀನು ನಿನ್ನ ಅಮ್ಮನನ್ನು ಕಂಡಿರುವೆಯಾ?" "ಇಲ್ಲ."

"ನಿನಗೆ ನಿನ್ನ ಹಡೆದವ್ವನ ನೆನಪಿಲ್ಲ. ನೀನು ಚಿಕ್ಕವನಿರುವಾಗ ಅವಳು ನಿನ್ನನ್ನು ಬಿಟ್ಟು ಹೊರಟು ಹೋದಳು. ನಿನ್ನ ತಂದೆಯನ್ನಾದರೂ ನೀನು ಕಂಡಿರುವೆಯಾ?" "ಕಂಡಿರುವೆನು."

"ನಿನ್ನನ್ನು ಹಡೆದ ತಂದೆಯೂ ನಿನ್ನನ್ನು ತೊರೆದು ಹೋದನು ಆ ಮೇಲೆ ನಿನ್ನನ್ನು ಪುತ್ರನಂತೆ ಕಾಪಾಡಿದ ತಂದೆಯನ್ನು ನೀನು ಚನ್ನಾಗಿ ಬಲ್ಲೆಯಷ್ಟೆ?"

ರಣಮಲ್ಲನ ಕಂಠವು ಸದ್ಗದಿತವಾಯಿತು. ನೇತ್ರಗಳು ಸಜಲವಾದವು. ಆ ರಜಪುತ ತರುಣಿಯ ನೇತ್ರಗಳಿಂದ ಗಂಗಾ-ಯಮುನೆಗಳ ಪ್ರವಾಹಗಳು ಹೊರಟು ಉರಪ್ರದೇಶದಲ್ಲಿ ಸಂಗಮವಾಗಹತ್ತಿದವು.

ಸ್ವಲ್ಪವೇಳೆಯ ಮೇಲೆ ಆ ರಮಣಿಯು ಮನಸ್ಸನ್ನು ಕಲ್ಲು ಮಾಡಿ:-"ಮಗು, ದುಃಖಿಸಬೇಡ. ದುಃಖಿಸಿದರೆ ಹೋದವರು ಬರುವಂತಿಲ್ಲ. ಕುಮಾರ, ನೀನು ನಿನ್ನ ಪಾಲಿತ ತಂದೆಯಾದ ಜಗಮಲ್ಲನನ್ನು ಬಲ್ಲೆ; ಆದರೆ ಮಾತೃಮೂರ್ತಿಯಾದ ಈ ಕಲ್ಯಾಣಿಯನ್ನು ಗುರುತಿಸಲಾರೆಯಾ?"

"ಕಲ್ಯಾಣಿ!"

ರಣಮಲ್ಲನು ಬೆಚ್ಚಿ ಬಿದ್ದನು. 'ನೀವು ಯಾವ ಕಲ್ಯಾಣಿ?'

"ನೀನು ಯಾವ ಕಲ್ಯಾಣಿಯನ್ನು ಬಲ್ಲೆ?"

"ನಗದೇಶದ ರಾಣಾರಾಯಸಿಂಹನ ರಾಣಿಯು ಕಲ್ಯಾಣಿಯೆಂಬ ಹೆಸರಿನವಳಿರುವಳೆಂಬದನ್ನು ಬಲ್ಲೆನು." ರಣಮಲ್ಲನು ದಿಟ್ಟಿಸಿ ನೋಡಿ:-'ಹೌದು; ನೀವೇ ನಗದೇಶದ ರಾಣಿಯವರಾದ ಕಲ್ಯಾಣಿದೇವಿಯವರು!"

ಕಲ್ಯಾಣಿಯ ನೇತ್ರಗಳಿಂದ ಅಶ್ರುಪ್ರವಾಹವು ಒತ್ತರವಾಗಿ ಹರಿಯುತ್ತಿತ್ತು. ಆಗ ಅವಳು ಗದ್ಗದಕಂಠದಿಂದ:--"ಸಂಸಾರಬಂಧನದ ಪುತ್ರ, ಸಾಂಸಾರಿಕ ನಿಷ್ಠುರ ವ್ಯವಹಾರ ಪತಿ! ಲೋಕಲಜ್ಜೆಯ ಹುಚ್ಚುತನದ ಬಂಧನದಿಂದ—" "ನನಗೆ ಅರ್ಥವಾಗಲೊಲ್ಲದು."

"ಕುಮಾರಾ, ನಿನಗೆ ನನ್ನ ಕರ್ಮಕಥೆಯು ಗೊತ್ತಿಲ್ಲ. ನಿನ್ನ ಪಾಲಕ ಪಿತನನ್ನು ನಾನು ನನ್ನ ಹೃದಯೇಶ್ವರನನ್ನು ಮಾಡಿಕೊಂಡಿದ್ದೆನು; ಆದರೆ ಜಗತ್ತು ನನ್ನ ಹೃದಯವನ್ನು ಗುರುತಿಸಲಿಲ್ಲ; ನನ್ನ ಆತ್ಮದ ಕರುಣಧ್ವನಿಯನ್ನು ಕೇಳಲಿಲ್ಲ. ನಾನು ಬಲುಮೆಗೊಳಪಟ್ಟೆನು. ಎಲ್ಲರೂ ನನ್ನನ್ನು ನಗದೇಶದ ರಾಣಿಯೆಂದು ತಿಳಿದರು. ಪುತ್ರಾ, ನಾನು ನಗದೇಶದ ರಾಣಿಯೆಂದು ಸಂಬೋಧಿಸಲ್ಪಡುತ್ತಿದ್ದರೂ ಜಗಮಲ್ಲನ ಪತ್ನಿಯಿರುವೆನು ನನ್ನ ಹೃದಯದ ಸ್ವಾಮಿಯು ಇಹಲೋಕವನ್ನು ತ್ಯಜಿಸಿ ಹೋದುದರಿಂದ, ನಾನು ವಿಧವೆಯಾದೆನು!"

ಅಗ್ನಿಯ ಬಳಿಯಲ್ಲಿಟ್ಟ ಘೃತವು ಕರಗುವಂತೆ, ರಣಮಲ್ಲನ ಹೃದಯವು ಆ ಶೋಕರಸಪೂರ್ಣವಾದ ಮಾತುಗಳಿಂದ ಕರಗುತ್ತಿತ್ತು. ಅವನ ಅಂತರಂಗದಲ್ಲಿ ಕರುಣಾರಸದ ತರಂಗಗಳೇಳತೊಡಗಿದವು!

ಅವನು ತನ್ನ ಮಾತೆಯನ್ನು ಆಜನ್ಮ ಕಂಡಿದ್ದಿಲ್ಲ. ಅವನ ಜನ್ಮದಾತೆಯು ಅವನಿಗೆ ಜನ್ಮ ಕೊಟ್ಟ ಕೂಡಲೆ ಮೃತಿ ಹೊಂದಿದ್ದಳು. ಅವಳು ಮಗನ ಮುಖವನ್ನು ಸಹ ನೋಡಲಿಲ್ಲ. ರಣಮಲ್ಲನಿಗೆ ಮಾತೃಸುಖವೆಂದರೆ ಹೇಗಿರುವದೆಂಬ ಕಲ್ಪನೆಯೇ ಇದ್ದಿಲ್ಲ. ಅವನು ಕಾಲ್ಪನಿಕ ಮಾತೃಮೂರ್ತಿಯನ್ನು ನಿರ್ಮಿಸಿ, ತನ್ನ ಮಾತೃಭಕ್ತಿಯನ್ನು ಅದರ ಚರಣಗಳಿಗೆ ಅರ್ಪಿಸುತ್ತ ಕಾಲಕ್ರಮಣ ಮಾಡತೊಡಗಿದ್ದನು; ಆದರೆ ಇಂದು ಅಂತಹ ಮೂರ್ತಿಯೇ ಎದುರಿಗೆ ಬಂದು ನಿಂತು ಸಂಭಾಷಣ ಮಾಡತೊಡಗಿದ್ದರಿಂದ, ಅವನಿಗೆ ಸಂಭ್ರಮವಾಯಿತು. "ಅಮ್ಮಾ! ಮಾತೆ! ಜನನಿ!"

ರಣಮಲ್ಲನ ಹೃದಯದಲ್ಲಿ ಮಾತೃಭಕ್ತಿಯ ಸೂರ್ಯನು ಉದಯಿಸಿ

ದನು. ಅವನು ಕಲ್ಯಾಣಿಗೆ ಮೇಲಿನಂತೆ ಸಂಬೋಧಿಸಿ:—"ಈ ಜಗತ್ತಿನ ವ್ಯವಹಾರವು ಸರಳ ಶುದ್ಧಭಾವದ ಮನುಷ್ಯನನ್ನು ನಾಮಶೇಷ ಮಾಡಿದ ಹೊರತು ಬೇರೆ ಏನು ಮಾಡುವದು? ಅಣ್ಣನು ತಮ್ಮನನ್ನು ಕೊಲ್ಲುವದೂ, ತಂದೆಯು ಮಕ್ಕಳನ್ನು ಕೊಲ್ಲುವದೂ, ಜಗತ್ತಿನ ಕಠೋರ ಧರ್ಮವಲ್ಲವೆ? ಮಗಳ ಹೃದಯವನ್ನರಿಯದೆ, ಕೇವಲ ರಾಣೀಪದವು ದೊರಕುವದೆಂಬ ಆನಂದ ದಿಂದ ಕನ್ನೆಯ ಆತ್ಮದ ಬಲಿಕೊಡುವ ತಂದೆಗೆ ಏನೆನ್ನಬೇಕೋ ತಿಳಿಯದು! ಅರಸೊತ್ತಿಗೆಯ ಬಲದಿಂದ ಅಧಿಕಾರ-ಶಕ್ತಿವಿಹೀನ ಕನ್ಯೆಯರ ಮೇಲೆ ಬಲಾ ತ್ಕಾರ ಮಾಡುವ ಅರಸರು ಪಶುಸಮಾನರಲ್ಲದೆ ಮತ್ತೇನ ?

"ಅಣ್ಣನು ತಮ್ಮನ ಕುತ್ತಿಗೆಯನ್ನು ಕೊಯ್ಯುವದೂ, ತಂದೆಯು ಮಕ್ಕಳ ಕೊರಳು ಕೊಯ್ಯುವದೂ ಜಗತ್ತಿನೊಳಗಿನ ಕರ್ತವ್ಯಗಳಾಗಿ ಹೋ-ದವು! ಮಗೂ, ಈ ಸಂಸಾರವೆಂದರೆ ಮುಳ್ಳು ಹಾಸಿಗೆ! ಸಂಸಾರವೆಂದರೆ ನಿಷ್ಠು ರತೆಯ ಹಾಗು ವಿಚಾರ ವಿಹೀನತೆಯ ಕ್ಷೇತ್ರ! ಸಂಸಾರವೆಂದರೆ ಬಂಧನ, ಶೃಂ-ಖಲೆ! ಇನ್ನೂ ಮತ್ತೇನು?"

ಕಲ್ಯಾಣಿಯ ಕಂಠವು ಬಿಗಿಯಿತು. ಕಣ್ಣುಗಳು ಅಶ್ರುಗಳಿಂದ ತುಂ ಬಿದವು. ಅವಳು ಉಕ್ಕುತ್ತಿರುವ ದುಃಖ-ಪರಿತಾಪಗಳನ್ನು ನುಂಗಿಕೊಂಡು:-"ತಾಯಿಯ ಅಂತಃಕರಣವನ್ನು ಮಗನು ಗುರುತಿಸಿದನು. ಸಂಸಾರವೆಂದರೆ ಕ್ಲೇಶದ ಮಹಾಸಾಗರ. ಅಲ್ಲಿ ಆಕಾಶದಲ್ಲಿ ನೋಡು, ನಿಶಾನಾಥನು ತನ್ನ ಜೀವನ ಸಹಚರಿಯಾದ ನಿಶೆಯನ್ನು ಕಾಣುತ್ತಿರುವನು. ಎಂತಹ ಅಂಖಡ ವಾದ ಪ್ರೇಮವದು! ಇಂತಹ ಪ್ರೇಮವನ್ನು ಜಗತ್ತು ಗುರುತಿಸುವದಿಲ್ಲ. ಇಂತಹ ಉತ್ಕಟವಾದ ಪ್ರೇಮವು ಜಗತ್ತಿನ ದೃಷ್ಟಿಯಿಂದ ಹುಚ್ಚುತನದ್ದಾಗಿ ಕಾಣುವದು. ವಿಕಾರ, ಮೋಹ, ವಿಲಾಸ ಮೊದಲಾದವುಗಳೇ ಸಾಂಸಾರಿಕ ಪ್ರೇಮಗಳು! ವಾಸನಾಪೂರ್ತಿಯೇ ಸಾಂಸಾರಿಕ ಪ್ರೇಮಸುಖವು! ಕ್ಷಣಭಂಗುರ ವಾದ ಶರೀರವೇ ಜಗತ್ತಿನ ಸ್ಥಿರವಾದ ಸಂಪತ್ತು! ಆತ್ಮ, ಹೃದಯ, ಸೂಕ್ಷ್ಮ ಪ್ರೇಮ ಮೊದಲಾದವುಗಳೆಲ್ಲವೂ ವಾತಾವರಣದೊಳಗಿನ ಸುಗಂಧಗಳಾಗಿವೆ!"

ಕಲ್ಯಾಣಿಯು ಸೀರೆಯ ಸೆರಗಿನಿಂದ ಧಾರೆಗಟ್ಟಿ ಹರಿಯತೊಡಗಿದ ಕಣ್ಣೀರನ್ನು ಒರಸಿಕೊಳ್ಳತೊಡಗಿದಳು. ಈ ಅಂಧ ಸಂಸಾರಕ್ಕೆ ಅವಳ ಕಣ್ಣೀ ರಿನ ಬೆಲೆಯು ಹೇಗೆ ತಿಳಿಯಬೇಕು?

"ಅಮ್ಮಾ!" ರಣಮಲ್ಲನು ವ್ಯಾಕುಲತೆಯಿಂದ: "ಅಳಬೇಡಿರಿ ಇಡೀ ಸಂಸಾರವು ಕೃತ್ರಿಮ ಹಾಸ್ಯದಲ್ಲಿ ಮುಳುಗಿ ಹೋಗಿರುವದು. ಇಂತಹ ಪ್ರಸಂಗ ದಲ್ಲಿ ನೀವು ಒಬ್ಬರೇ ಅತ್ತರೆ ಆಗುವದೇನು?"

“ನಗಲಿ, ಈ ಜಗತ್ತೇ ನಗಲಿ; ಈ ನದಿಯು ನಗಲಿ, ಈ ಚಂದ್ರಮನೂ ಚಂದ್ರಿಕೆಯೂ ನಗಲಿ; ಈ ವೃಕ್ಷಲತೆಗಳೂ ನಗಲಿ; ಈ ಪರ್ವತ-ಪಾಷಾಣಗಳೂ ನಗಲಿ; ಬೇಕಾದವರು ಬೇಕಾದಂತೆ ಹಾಸ್ಯರಸದಲ್ಲಿ ಲೋಲಾಡಲಿ. ನಾನು ಮಾತ್ರ ನನ್ನ ಕಣ್ಣುಗಳೊಳಗಿನ ನೀರು ತೀರುವವರೆಗೆ ಹೀಗೆ ಅಳುವವಳೇ! ಎದುರಿಗಿರುವ ರಾಜಶಿಲೆಯಂತೆ ನಾನು ನನ್ನ ಅಶ್ರುಪ್ರವಾಹವನ್ನು ಹರಿಸುವವರೆಗೆ ಅಳುವವಳೇ! ಮಗೂ, ರಣಮಲ್ಲ, ಬಾ, ಮುಂದೆ ಬಾ; ಪುತ್ರಪ್ರೇಮವು ಹೇಗಿರುವದೆಂಬದರ ಅನುಭವವನ್ನು ಕೊಟ್ಟು, ಮಾತೃಸುಖದ ಅನುಭವವನ್ನು ಹೊಂದಲಿಕ್ಕೆ ಮುಂದೆ ಬಾ. ಜಗತ್ತಿನ ದೃಷ್ಟಿಯಿಂದ ನಾನು ಸಂತಾನಹೀನಳಾಗಿದ್ದರೂ ಅಂತಃಕರಣದ ದೃಷ್ಟಿಯಿಂದ ಪುತ್ರವತಿಯಿರುವೆನು. ನೀನು ನಿನ್ನ ಈ ದೀನಮಾತೆಯ ಇಚ್ಛೆಯನ್ನು ಪೂರೈಸು. ನಿನ್ನ ಲಲಾಟವನ್ನು ಚುಂಬಿಸಿ, ಪುತ್ರಸುಖವು ಹೇಗಿರುವದೆಂಬದರ ಅನುಭವ ಹೊಂದುವೆನು. ಕುಮಾರಾ, ನೀನು ಜಗತ್ತಿನಂತೆ ನಿಷ್ಠುರನೂ ಹೃದಯಹೀನನೂ ಅಂಧನೂ ಬಧಿರನೂ ಆಗಿರಲಾರೆಯೆಂದು ನನ್ನ ಆತ್ಮವಿಶ್ವಾಸವಿದೆ.”

ರಣಮಲ್ಲನು ದಬ್ಬಿಕೊಟ್ಟಂತೆ ಕಲ್ಯಾಣಿಯ ಬಳಿಗೆ ಹೋದನು ಅವಳು ಅವನ ಲಲಾಟವನ್ನು ಚುಂಬಿಸಿ ಬಿಗಿಯಾಗಿ ಅಪ್ಪಿದಳು!

ಕಲ್ಯಾಣಿಯು ಕಣ್ಣುಗಳನ್ನು ಮುಚ್ಚಿದಳು. ಅವಳು ವಾತ್ಸಲ್ಯಾನುಭವ ಹೊಂದಲಿಕ್ಕೆ ರಣಮಲ್ಲನ ಲಲಾಟವನ್ನು ಚುಂಬಿಸತೊಡಗಿದ್ದಳು. ಅವನಿಗೆ ಹಾಕಿದ ಬಾಹುಪಾಶವು ಇನ್ನೂ ಹಾಗೆಯೆ ಬಿಗಿಯಾಗಿತ್ತು. ಮುಂದೆ ಎಷ್ಟೋ ವೇಳೆಯ ಮೇಲೆ ಕಲ್ಯಾಣಿಯ ಮುಖದಲ್ಲಿ ಸಂತೃಪ್ತಿಯ ಛಾಯೆಯು ಪಸರಿಸಿತು. ಅವಳ ಅಂತಃಕರಣವು ಪ್ರಸನ್ನವಾದಂತೆ ತೋರಿತು. ಅವಳ ಶ್ವಾಸವು ವಾತ್ಸಲ್ಯವನ್ನು ಹೊರಗೆ ಹಾಕಹತ್ತಿತು. ಉಚ್ಛ್ವಾಸವು ಸಂತಾನಸ್ನೇಹವನ್ನು ಪಾನಮಾಡಿಸತೊಡಗಿತ್ತು. ಓಷ್ಠಗಳು ಪುತ್ರಪ್ರೇಮಾಮೃತವನ್ನು ಕುಡಿಯಹತ್ತಿದ್ದವು. ಬಾಹುಗಳು ಸಂತಾನಾಲಿಂಗನ ಸೌಖ್ಯವನ್ನು ಹೊಂದತೊಡಗಿದ್ದವು. ಆ ಸುಖವು ಅನುಪಮವಿತ್ತು; ಅತುಲವಿತ್ತು; ಅವರ್ಣನೀಯವಿತ್ತು! ಆ ಸುಖವು ಎಂತಹದಿರುವದೆಂಬದನ್ನು ಪುತ್ರವತಿಯಾದ ಮಾತೆಯೇ ಬಲ್ಲಳು.

‘ಕುಮಾರ, ರಣಮಲ್ಲ!’ ಕಲ್ಯಾಣಿಯು ಪ್ರಸನ್ನತೆಯಿಂದ.--“ಇಷ್ಟಕ್ಕಾಗಿಯೆ ನಾನು ರಾಜಮಂದಿರದಿಂದ ಜಾರಿ ಬಂದೆನು; ಇಷ್ಟಕ್ಕಾಗಿಯೆ ನಿನಗೆ ಪತ್ರ ಬರೆದೆನು. ಸಂತಾನ ಸ್ನೇಹವು ವಿಷಮಯ ಸಂಸಾರದೊಳಗಿನ ಅಮೃತವೆಂಬದನ್ನು ಇಂದು ನಾನು ಮನಗಂಡೆನು. ಇನ್ನು ನನಗೆ ಯಾವ ಅಭಿಲಾಷೆಯೂ ಇಲ್ಲ. ಈ ಜನ್ಮದೊಳಗಿನ ನನ್ನ ಯಾವ ಇಚ್ಛೆಗಳೂ ಅಪೂರ್ಣವಾಗಿ

ಉಳಿಯಲಿಲ್ಲ. ಅಂತೆಯೇ ಈಗ ಮೃತ್ಯುವನ್ನು—ಸ್ವರ್ಗವನ್ನು—ಕುಮಾರ! ಈ ನಿಷ್ಠುರ ಜಗತ್ತಿಗೆ ಕೊನೆಯ ನಮಸ್ಕಾರವು!''

ರಣಮಲ್ಲನು ಗಾಬರಿಯಿಂದ:—'ಅಮ್ಮಾ, ಈ ಮಾತಿನ ಅರ್ಥವೇನು?'

''ಕುಮಾರಾ, ನಾನು ವೀರಾಂಗನೆಯಿರುವೆನು. ವೀರಪತ್ನಿಯಿರುವೆನು. ವೀರ ಲಲನೆಯರಂತೆ ನಾನು ವೀರಸ್ವರ್ಗ ಪಡೆಯುವೆನು.''

'ಛೇ! ಛೇ! ಅಸಂಭವ, ಅಸಂಭವ!'

''ಅಸಂಭವ? ಅದೇಕೆ ಅಸಂಭವವು ಮಗು?'' ಕಲ್ಯಾಣಿಯು ಹೀಗೆ ನುಡಿದು, ಗಹಗಹಿಸಿ ನಗತೊಡಗಿದಳು.

ರಣಮಲ್ಲನು ಭ್ರಮಿಷ್ಠನಂತೆ ಅವಳ ಮುಖವನ್ನು ನೋಡುತ್ತ ನಿಂತು ಬಿಟ್ಟನು.

''ಸಂಭವವಿದೆ. ವೀರಲಲನೆಯರಂತೆ ಮೃತಿಹೊಂದುವದು ನನಗೆ ಅಸಾಧ್ಯವಲ್ಲ. ನಾನು ನನ್ನ ಹೃದಯೇಶ್ವರರನ್ನು ಕಾಣಬೇಕಾಗಿರುವದರಿಂದ ಈ ಜಗತ್ತಿಗೆ ಕೊನೆಯ ನಮಸ್ಕಾರ ಮಾಡುವವಳಿರುವೆನು. ಆತ್ಮವು ಆತ್ಮವನ್ನೂ ಹೃದಯವು ಹೃದಯವನ್ನೂ ಕೂಡುವ ವೇಳೆಯು ತೀರ ಸಮೀಪಿಸಿದೆ. ನಾಶವಾಗುವದು ಈ ಬಂಧನಕಾರಕ ದೇಹವಷ್ಟೇ ಅಲ್ಲವೆ? ನೋಡು, ಅಲ್ಲಿ ನೋಡು; ರಾಜಶಿಲೆಯು ಈ ದೇಹವನ್ನು ಬಯಸಿ ಹೇಗೆ ಕರೆಯುತ್ತಿರುವಳು! ರಣಮಲ್ಲ, ನೋಡಿದೆಯಾ? ಅವಳು ತನ್ನ ಕೈಗಳನ್ನು ಹೀಗೆ ಮುಂದೆ ಮಾಡಿರುವಳು. ಬರುವೆನು, ಮಗೂ, ಹೋಗಿ ಬರುವೆನು. ನಿನಗೆ ಮಂಗಳವಾಗಲಿ!''

ಹೀಗೆ ನುಡಿದು ಕಲ್ಯಾಣಿಯು ನದಿಯ ಕಡೆಗೆ ಓಡಿದಳು. ಶಿಲಾಪ್ರತಿಮೆಯಂತೆ ನಿಂತ ರಣಮಲ್ಲನು ಅವಳಿಗೆ ಆತಂಕವನ್ನುಂಟುಮಾಡಲಿಕ್ಕೆ ಧಾವಿಸಿದನು. ''ಅಮ್ಮಾ, ಜನನಿ, ಮಾತೆ!''

ಆದರೆ ಅಷ್ಟು ಹೊತ್ತಿಗೆ ಕಲ್ಯಾಣಿಯು ನದಿಯ ಉದರವನ್ನು ಪ್ರವೇಶಿಸಿದ್ದಳು; ಹಾಗು ಒಬ್ಬ ವೀರಾಂಗನೆಯನ್ನು ಬಲಿತೆಗೆದುಕೊಂಡ ರಾಜಶಿಲೆಯು ಏನೂ ಅರಿಯದವಳಂತೆ ಸಾಗಿದ್ದಳು.

ರಣಮಲ್ಲನ ಹೃದಯವು ದುಃಖಕಾತರಗೊಂಡಿತು. ಅವನು ಇಂದು ಮಾತೃವಾತ್ಸಲ್ಯಾನುಭವ ಹೊಂದಿದ್ದನು. ಅವನಿಗೆ ಮಾತೃಸುಖವು ದೊರೆಯುವಷ್ಟರಲ್ಲಿ ಮಾತೃದುಃಖವೂ ದೊರೆಯಿತು. ಅವನು ನಿಷ್ಠುರ ಹೃದಯಿಯಾದ ರಾಜಶಿಲೆಯ ಕಡೆಗೆ ನೋಡುತ್ತ:—''ಅಮ್ಮಾ, ಜನನಿ!'' ಎಂದು ರೋದಿಸುತ್ತ ನಿಂತುಬಿಟ್ಟನು!

---

# ಸೇಡು, ಸೇಡು, ಸೇಡು!!

ಮಧ್ಯರಾತ್ರಿಯಲ್ಲಿಯೆ ತಾಂಡವ ನೃತ್ಯಮಾಡಬೇಕೆಂದು ನಿಸರ್ಗದ ಇಚ್ಛೆಯಾಯಿತು. ಜಗತ್ತು ಶಾಂತಮಯವಾಗುವ ಇಚ್ಛೆಹೊಂದುವಷ್ಟರಲ್ಲಿ ಅರವಲಿಯ ರುಕ್ಷಪ್ರದೇಶದಲ್ಲಿ ಮುಸಲಧಾರ ವೃಷ್ಟಿಯಿಂದ ಪ್ರಚಂಡವಾದ ಧ್ವನಿಯಾಗಹತ್ತಿತು. ವ್ಯೋಮಪಟದಲ್ಲಿ ಚಮಕಿಸಹತ್ತಿದ ಮಿಂಚು ಮನುಷ್ಯನ ಆಶೆಯಂತೆ ಕ್ಷಣದಲ್ಲಿ ಹುಟ್ಟಿ ಪರಕ್ಷಣದಲ್ಲಿ ಅದೃಶ್ಯವಾಗಹತ್ತಿತು. ಪ್ರಕೃತಿಯ ಭಯಾನಕವಾದ ಗಾಯನದಲ್ಲಿ ಮೇಘಗಳು ತಾಳಗೆಟ್ಟು ಮೃದಂಗ ಬಾರಿಸತೊಡಗಿದ್ದವು. ಭಯಾನಕ ಭೀಷಣ ಸಾಹಸಕರ್ಮ ಮಾಡುವವರ ಎದೆಯಲ್ಲಿ ಸಹ ಕಂಪನವನ್ನು ಹುಟ್ಟಿಸುವ ಅಂದಿನ ರಾತ್ರಿಯು, ಜಗತ್ತಿನ ಸ್ವರೂಪವನ್ನೇ ಬೇರೆ ಮಾಡಿಬಿಡುವದೋ ಏನೋ ಎಂಬಂತೆ ಭಾಸವಾಗತೊಡಗಿತ್ತು. ಒಟ್ಟಿನ ಮೇಲೆ ಆ ಮಧ್ಯರಾತ್ರಿಯು ಪ್ರಳಯರಾತ್ರಿಯಾಗಿಯೇ ಪರಿಣಮಿಸಿತ್ತು.

ಆದರೆ ಆ ಘನಘೋರವಾದ ವರ್ಷಾವವೂ, ಕಣ್ಣುಗಳನ್ನು ಕುರುಡು ಮಾಡಿಬಿಡುವ ಮಿಂಚುಗಳೂ, ಎದೆಯೊಡಿಸುವಂತಹ ಮೇಘಧ್ವನಿಯೂ, ಸಿಡಿಲಿನ ಅಬ್ಬರವೂ, ಪ್ರಕೃತಿಯ ರೌದ್ರಲೀಲೆಯೂ ಧೈರ್ಯ-ಸಾಹಸಗಳ ಮಹಾಮೇರುವಾದ ರಣಮಲ್ಲನನ್ನು ಕಾರ್ಯಪರಾವರ್ತನನ್ನಾಗಿ ಮಾಡಲಿಕ್ಕೆ ಸಮರ್ಥವಾಗಲಿಲ್ಲ.

ಹೀಗೆ ಅವನು ನಿಸರ್ಗದ ಭೀಷಣಕೃತಿಗೆ ಸಹ ಅಳ್ಳೊಡೆಯದಿದ್ದ ಕಾರಣವೇನಿರಬಹುದು? ಅವನು ನಿಸರ್ಗದ ಸರ್ವಶಕ್ತಿಯ ಹಾಗು ಪರಮಾತ್ಮನ ಸಾಕ್ಷಿಯಾಗಿ ಪ್ರತಿಜ್ಞಾಬದ್ಧನಾಗಿದ್ದುದರಿಂದ, ಹಾಗೆ ಧೃಡನಿಶ್ಚಯಿಯಾಗಿರಬಹುದು.

ಅವಿಚಾರಿಯೂ ಅತ್ಯಾಚಾರಿಯೂ ಆದ ರಾಣಾ ರಾಯಸಿಂಹನು ಅಂಥ ಶ್ರದ್ಧೆಯ ಸ್ವಾಮಿನಿಷ್ಠ ಸೇನಾಪತಿಯಾದ ಮಯೂರಧ್ವಜನಿಂದ ತನ್ನ ಪಿತೃವಾದ ಜಗಮಲ್ಲನ ಕೊಲೆ ಮಾಡಿಸಿದ್ದಕ್ಕಾಗಿ ಅವನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ರಣಮಲ್ಲನು ಪ್ರತಿಜ್ಞೆ ಮಾಡಿದ್ದನು.

ತಂದೆಯು ವಿಲಕ್ಷಣವಾದ ಪ್ರಕಾರದಿಂದ ಮೃತಿಹೊಂದಿದ ವಾರ್ತೆಯು ಕಿವಿಗೆ ಬಿದ್ದಾಗಿನಿಂದ ರಣಮಲ್ಲನ ಹೃದಯದಲ್ಲಿ ಕ್ರೋಧಾಗ್ನಿಯು ಹುಟ್ಟಿ, ಅದು ಬೇಗನೆ ಜಾಜ್ವಲ್ಯಮಾನವಾಗುವ ಪರಿಸ್ಥಿತಿಗೆ ಬಂದಿತ್ತು. ಕಲ್ಯಾಣಿಯ ಆತ್ಮತ್ಯಾಗದಿಂದ ಆ ಅಗ್ನಿಯ ಮೇಲೆ ತೈಲಸಿಂಚನ ಮಾಡಿದಂತಾಯಿತು.

ರಾಯಸಿಂಹ ರಾಣಾನ ಸೇಡು ತೀರಿಸಿಕೊಳ್ಳುವವರೆಗೆ ತಳಮಳಿಸುವ ಅವನ ಹೃದಯಕ್ಕೆ ಶಾಂತಿಯು ಲಭಿಸುವಂತಿದ್ದಿಲ್ಲ.

ರಾಣಾನು ರಾಜಮಂದಿರದೊಳಗಿನ ಯಾವ ಕೋಣೆಯಲ್ಲಿ ಮಲಗುವನೆಂಬದನ್ನು ರಣಮಲ್ಲನು ತಿಳಿದುಕೊಂಡಿದ್ದನು. ಮಧ್ಯರಾತ್ರಿಯ ಸಮಯದಲ್ಲಿ ಕೋಟೆಯನ್ನು ಪ್ರವೇಶಿಸಿ ರಾಜಮಂದಿರವನ್ನು ಹೊಕ್ಕು, ರಾಣಾನೊಡನೆ ದ್ವಂದ್ವ ಯುದ್ಧ ಮಾಡಿ ಹೊಡೆಯಬೇಕು; ಇಲ್ಲವೆ ಮಡಿಯಬೇಕು, ಇಷ್ಟೇ ಅವನ ದೃಢಸಂಕಲ್ಪವಿತ್ತು. ಈ ಕಾರ್ಯಕ್ಕಾಗಿ ಅವನು ಇಂದಿನ ರಾತ್ರಿಯನ್ನು ನಿಶ್ಚಯಿಸಿದ್ದನು. ಕರ್ತವ್ಯದಕ್ಷನಾದ ಆ ಪ್ರತಾಪಿಗೆ ಅಂದಿನ ಪ್ರಳಯಕಾರಿಯಾದ ರಾತ್ರಿಯ ಪರಿವೆಯಿದ್ದಿಲ್ಲ.

ಮಳೆಯು ಕಟ್ಟಾಯಿತು. ಗಾಳಿಯು ಇನ್ನೂ ಒತ್ತರದಿಂದ ಬೀಸುತ್ತಲಿತ್ತು. ಆಕಾಶದಲ್ಲಿ ಮೇಘಗಳು ತುಂಬಿ ತುಳುಕುತ್ತಿದ್ದವು. ನಡುನಡುವೆ ಮಿಂಚು ಹೊರಬೀಳಹತ್ತಿತ್ತು. ಇಂತಹ ವೇಳೆಯಲ್ಲಿ ರಣಮಲ್ಲನು ನಗದೇಶದ ಕೋಟೆಯ ಗೋಡೆಯನ್ನು ರಭಸದಿಂದ ಏರತೊಡಗಿದ್ದನು ಮಿಂಚಿದಾಗ ಅವನು ಹಗ್ಗದ ಸಹಾಯದಿಂದ ಗೋಡೆಯನ್ನೇರುತ್ತಿದ್ದನು. ಮಿಂಚದಾಗ ನೇತಾಡುತ್ತ ಸುಮ್ಮನೆ ನಿಂತುಬಿಡುತ್ತಿದ್ದನು. ಈ ಮೇರೆಗೆ ಹಾಗೂ ಹೀಗೂ ಗೋಡೆ ಹತ್ತಿ ಕೋಟೆಯೊಳಗೆ ಜಿಗಿದನು.

ಬುರುಜಿನ ಮೇಲಿಂದ ಕೆಳಗೆ ಹಾರಿದ ಮೇಲೆ ರಣಮಲ್ಲನು ಸುತ್ತಲೂ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದನು ಮಿಂಚು ಕಟ್ಟಾದ್ದರಿಂದ ಏನೂ ಕಾಣಿಸಲಿಲ್ಲ ಎಲ್ಲ ಕಡೆಯಲ್ಲಿಯೂ ಸ್ತಬ್ಧತೆಯು ನೆಲೆಗೊಂಡಿತ್ತು. ಆ ಸ್ತಬ್ಧತೆಯನ್ನು ನಾಶಗೊಳಿಸುವಂತಹ ಬಿರುಗಾಳಿಯು ಇನ್ನೂ ಬೀಸುತ್ತಲೇ ಇತ್ತು

ಸ್ವಸ್ಥವಾಗಿ ನಿಂತುಕೊಳ್ಳಲು ಸಮಯವು ಇದ್ದಿಲ್ಲ ಕರ್ತವ್ಯವನ್ನು ಬೇಗನೆ ಜರುಗಿಸುವದಿದ್ದುದರಿಂದ ಅವನು ಮುಂದೆ ಸಾಗಿದನು. ಮಳೆಯಿಂದ ಅವನ ವಸ್ತ್ರಗಳೆಲ್ಲವೂ ತೊಯ್ದು ಹೋಗಿದ್ದವು ಕಟಗುಟ್ಟಿ ನಡುಗಿಸುವ ಬಿರುಗಾಳಿಯು ಬೀಸುತ್ತಿತ್ತು. ಅಂತಹ ಶೀತಲತೆಯಲ್ಲಿ ಸಹ ರಣಮಲ್ಲನ ಹೃದಯವು ಖದಿರಾಂಗಾರದಂತೆ ತಪ್ತವಾಗಿತ್ತು. ಪ್ರತಿಹಿಂಸೆಯ ಲಾಲಸೆಯಿಂದ ಅದು ಪ್ರದೀಪ್ತವಾಗಿತ್ತು. ಸೇಡಿಗೆ ಸೇಡು ತೀರಿಸಿಕೊಳ್ಳದೆ ಅವನ ತಪ್ತವಾದ ಹೃದಯಕ್ಕೆ ಶಾಂತಿಯು ದೊರಕುವಂತಿದ್ದಿಲ್ಲ. ಅವನು ಮೆಲ್ಲನೆ ಮುಂದೆ ಸಾಗಿ ಅರಮನೆಯನ್ನು ಸಮೀಪಿಸಿದನು. ಮತ್ತೆ ಮೇಘಗಳ ಗಡಗಡಾಟವೂ ಸಿಡಿಲುಗಳ ಖಡಖಡಾಟವೂ ಮಿಂಚಿನ ಚಕಚಕಾಟವೂ ವೃಷ್ಟಿಯ ದಬದಬಾಟವೂ ಪ್ರಾರಂಭವಾಯಿತು.

ರಣಮಲ್ಲನು ಸ್ತಬ್ಧನಾಗಿ ನಿಂತನು. ಅನಂತರದಲ್ಲಿ ಅವನು ಮುಂದೆ ಸಾಗಿದನು. ಭೀಷಣವಾದ ಮೇಘಗರ್ಜನೆಯೂ, ಭಯಾನಕವಾದ ಪರ್ಜನ್ಯವೂ, ಅಬ್ಬರದ ಸಿಡಿಲುಗಳ ಧ್ವನಿಯೂ ಅವನ ಕಾರ್ಯಕ್ಕೆ ಅಡ್ಡಿಯನ್ನುಂಟು ಮಾಡಲಿಕ್ಕೆ ಸಮರ್ಥವಾಗಲಿಲ್ಲ. ಅವನು ದೃಢನಿಶ್ಚಯಿಯಾಗಿದ್ದನು. ನ್ಯಾಯಕ್ಕಾಗಿ, ಪಿತ್ರಾಜ್ಞಾಪಾಲನೆಗಾಗಿ ಆತ್ಮಬಲಿದಾನ ಮಾಡಲಿಕ್ಕೆ ಅವನು ಬದ್ಧಕಂಕಣನಾಗಿದ್ದನು.

ಮಿಂಚಿನ ಪ್ರಕಾಶದಲ್ಲಿ ಅವನು ರಾಜಮಂದಿರದ ಗೋಡೆಯನ್ನೇರಿ, ತೆರೆದಿದ್ದ ಭಿತ್ತಿವಾತಾಯನದ ಮಾರ್ಗವಾಗಿ ಒಳಗೆ ಪ್ರವೇಶಿಸಿದನು. ಕೂಡಲೆ ಅವನು ಸ್ತಂಭಿತನಾದನು. ಹೊರಗಿನ ಮಳೆ-ಗಾಳಿ, ಅಂಧಕಾರ, ಮಿಂಚು-ಸಿಡಿಲುಗಳು ಅವನ ಕಾರ್ಯಕ್ಕೆ ಅಡ್ಡಿಯನ್ನುಂಟು ಮಾಡಲಿಕ್ಕೆ ಸಮರ್ಥವಾಗಿದ್ದಿಲ್ಲ; ಆದರೆ ಒಳಗೆ ಬಂದ ಕೂಡಲೆ ಅವನು ಕಲ್ಪನಾತೀತವಾಗಿ ಸ್ತಿಮಿತನಾದನು. ಅವನು ಶಿಲಾಪ್ರತಿಮೆಯಂತೆ ಸುಮ್ಮನೆ ನಿಂತನು. ದೃಢನಿಶ್ಚಯಿಯಾದ ಆ ಕ್ಷಾತ್ರವೀರನನ್ನು ಸ್ತಂಭಿತಗೊಳಿಸುವಂತಹ ಯಾವ ದೃಶ್ಯವು ಅಲ್ಲಿ ಕಂಡಿರಬಹುದು?

ರಣಮಲ್ಲನು ಪ್ರವೇಶಿದ ಕೋಣೆಯು ವಿಶಾಲವಾದದ್ದಿದ್ದು, ಗೋಡೆಗಳ ಹಾಗು ಛತ್ತುಗಳ ಮೇಲೆ ಕಲಾಪೂರ್ಣವಾದ ಚಿತ್ರಗಳಿದ್ದವು. ಬಲಗಡೆಯಲ್ಲಿದ್ದ ಬಣ್ಣದ ಚೌಕಿಯ ಮೇಲೆ ಸುಗಂಧ ತೈಲದ ದೀಪವು ಮಂದವಾಗಿ ಉರಿಯುತ್ತಲಿತ್ತು. ಆ ದೀಪದ ಬಳಿಯ ಒಂದು ಸುಂದರವಾದ ಮಂಚದ ಮೇಲೆ ನಗದೇಶದ ರಾಜಕನ್ಯೆಯಾದ ಶೀಲವತಿಯು ಹೊರಗಿನ ಮೇಘಗರ್ಜನೆಯ ಹಾಗು ವೃಷ್ಟಿಯ ಅಬ್ಬರದ ಪರಿವೆಯಿಲ್ಲದೆ ನಿದ್ರಾಧೀನಳಾಗಿದ್ದಳು. ರಣಮಲ್ಲನು ದೀಪದ ಮಂದಪ್ರಕಾಶದಲ್ಲಿ ರಾಣಾನು ಮಲಗುವನೆಂಬ ಸುದ್ದಿಯನ್ನು ಕೇಳಿಯೇ ಅಲ್ಲಿಗೆ ಬಂದಿದ್ದನು; ಆದರೆ ತಾನು ರಾಜಕುಮಾರಿಯ ಶಯನ ಗೃಹವನ್ನು ಪ್ರವೇಶಿಸಿದೆನೆಂಬದು ಗೊತ್ತಾದೊಡನೆಯೆ ಅವನ ಕಾಲುಗಳು ಅಲ್ಲಿಯೇ ಸ್ಥಿರವಾದವು.

ಗಾಢ ನಿದ್ರಾವಶಳಾದ ರಾಜಕನ್ಯೆಯ ಮುಖವು ದೀಪದ ಮಂದ ಪ್ರಕಾಶದಲ್ಲಿ ಸ್ಪಷ್ಟವಾಗಿ ಕಾಣುತ್ತಿತ್ತು. ಪಾವಿತ್ರ್ಯದ ಆ ಮೂರ್ತಿಮಂತ ದೇವತೆಯು ಅವನ ಮನಸ್ಸನ್ನು ಆಕರ್ಷಿಸಿತು. ಸೇಡು ತೀರಿಸಿಕೊಳ್ಳಬೇಕೆಂದು ಸಂಕಲ್ಪಿಸಿದ್ದ ಆ ಕಠೋರ ಹೃದಯಿಯಾದ ರಣಮಲ್ಲನು ಕರ್ತವ್ಯಕ್ಕಾಗಿ ಮಳೆ-ಗಾಳಿಗಳ ಹಾಗು ಭೀಷಣವಾದ ಅಂಧಕಾರದ ಪರಿವೆಯಿಲ್ಲದೆ ಹೊರಟಿದ್ದನು; ನೇತ್ರಗಳಿಂದ ಕಿಡಿಗಳನ್ನು ಕಾರುತ್ತ, ಕಿಡಿಕಿಯೊಳಗಿಂದ ಅರಮನೆ

ಯನ್ನು ಪ್ರವೇಶಿಸಿದ್ದನು. ಹೊರಗಿನ ರೌದ್ರತೆಯಿಂದ ಅಲಿಪ್ತವಾಗಿ ಅಲ್ಲಿಯ ವಾತಾವರಣವಿರುವದೆಂಬದು ಅವನ ಪ್ರತ್ಯಯಕ್ಕೆ ಬಂತು. ರಾಜಕನ್ಯೆಯೂ ಅವಳ ಶಯನಮಂದಿರವೂ ಜಗತ್ತಿನ ಕಠೋರ ವಾತಾವರಣದಿಂದ ದೂರ ವಿರುವವೆಂದು ಅವನಿಗೆ ಭಾಸವಾಯಿತು.

ಮುಂದೆ ಏನು ಮಾಡಬೇಕೆಂಬ ವಿಚಾರದಲ್ಲಿ ರಣಮಲ್ಲನು ಮಗ್ನನಾದನು. ಅವನು ಮತ್ತೊಮ್ಮೆ ರಾಜಕುಮಾರಿಯನ್ನು ನೋಡಿದನು. ಆವಳು ಸುಂದರವಾದ ಜರದ ಗುರಾಬೀ ಪತ್ತಲವನ್ನುಟ್ಟಿದ್ದಳು; ಮುಗಿಲ ಬಣ್ಣದ ಕಂಚುಕವನ್ನು ತೊಟ್ಟಿದ್ದಳು. ಅವಳ ಸುಚಾರುವಾದ ದೇಹಲತೆಯು ಹಂಸ ತೂಲಿಕಾತಲ್ಪದ ಮೇಲೆ ಒರಗಿದ್ದು, ಅವಳು ತನ್ನ ಎಡಗೈಯನ್ನು ತಲೆಯ ಕೆಳಗಿಂದ ದಿಂಬಿನ ಮೇಲೆ ಇರಿಸಿದ್ದಳು ನಾನಾ ಪ್ರಕಾರದ ಅಲಂಕಾರಗಳಿಂದ ವಿಭೂಷಿತವಾದ ಅವಳ ಗೌರವರ್ಣದ ಲಾವಣ್ಯಯುಕ್ತ ತನುಲತೆಯನ್ನು ನೋಡಿದರೆ ಅವಳು ನಿಜವಾಗಿ ಮಾನವಿಯಲ್ಲ; ದೇವಿಯು! ಎಂಬಂತೆ ರಣಮಲ್ಲನಿಗೆ ಭಾಸವಾಯಿತು. ಅವನು ಅರ್ಧಮೀಲಿತ ನೇತ್ರೆಯಾದ ಆ ಭಾಸುರಾಂಗಿಯನ್ನು ಅನಿಮಿಷ ನೇತ್ರದಿಂದ ನೋಡುತ್ತ ನಿಂತಿದ್ದನು. ಅವನ ದೃಷ್ಟಿಯಲ್ಲಿ ಕಲುಷಿತ ವಿಕಾರವಿರಲಿಲ್ಲ ಹೃದಯದಲ್ಲಿ ದೋಷಪೂರ್ಣ ವಿಚಾರಗಳಿರಲಿಲ್ಲ. ಅವನ ದೃಷ್ಟಿಯೂ ಹೃದಯವೂ ಪವಿತ್ರವಾಗಿದ್ದವು. ಆ ಶಯನಾಗಾರವು ರಾಜಕುಮಾರಿಯದೆಂಬದನ್ನು ಅರಿಯದೆ ಅವನು ಅಲ್ಲಿಗೆ ಬಂದಿದ್ದನು. ವಿಕಾರಹೀನದೃಷ್ಟಿಯಿಂದ ಸುಂದರಕಾಯದ ಆ ತರುಣಿಯನ್ನು ಎವೆಯಿಕ್ಕದೆ ನೋಡತೊಡಗಿದ್ದನು. ಕೆಲವು ವೇಳೆಯ ಮೇಲೆ ತನ್ನ ಆ ವರ್ತನದ ಬಗ್ಗೆ ರಣಮಲ್ಲನಿಗೆ ವೈಷಮ್ಯವೆನಿಸಿತು. ಅವನು ತನ್ನ ಎರಡೂ ಕಣ್ಣುಗಳನ್ನು ಕೈಗಳಿಂದ ಮುಚ್ಚಿಕೊಂಡನು. ವಿಕಾರಹೀನ ದೃಷ್ಟಿಯಿಂದಲಾದರೂ ರಾಜಕುಮಾರಿಯನ್ನು ಬಹಳ ವೇಳೆಯ ವರೆಗೆ ನೋಡಿದ್ದು ಅವನ ದೃಷ್ಟಿಗೆ ನೈತಿಕ ಅಪರಾಧವೆಂದು ತೋರಿತು.

ರಣಮಲ್ಲನು ಕಣ್ಣುಮುಚ್ಚಿದಾಗ ಅವನ ಅಂತರಂಗ ದೃಷ್ಟಿಯು ತೆರೆಯಿತು. ಸ್ವರ್ಗಸ್ಥ ಜಗಮಲ್ಲನ ಮೂರ್ತಿಯು ಅವನ ಅಂತಶ್ಚಕ್ಷುವಿನ ಎದುರಿಗೆ ನಿಂತು ಸೇಡು ತೀರಿಸಿಕೊಳ್ಳುವ ಪ್ರೇರಣೆ ಮಾಡತೊಡಗಿತು. ಹೃದಯವನ್ನು ಚಲವಿಚಲಗೊಳಿಸುತ್ತಿರುವ ನಿರ್ಜರಾಂಗನೆಯ ಮೂರ್ತಿಯನ್ನು ಅಂತರಂಗದಿಂದ ಹೊರದೂಡಿ ಕರ್ತವ್ಯರತನಾಗಬೇಕೆಂದು ಉತ್ತೇಜನ ಕೊಡತೊಡಗಿತು. ಕೂಡಲೆ 'ಸೇಡು! ಸೇಡು! ನನ್ನ ತಂದೆಯ ಅಕಾಲ ನಿಧನದ ಸೇಡು!' ಈ ವಿಚಾರವು ಅವನ ಮನಸ್ಸಿನಲ್ಲಿ ಬರುತ್ತಿರುವಷ್ಟರಲ್ಲಿ ಅಲ್ಲಿಯ ಶಾಂತವಾತಾ

ವರಣದಲ್ಲಿ ತಳಮಳಿಸುವ ಹೃದಯದಿಂದ ಹೊರಬೀಳುವ ಅಸ್ಫುಟಧ್ವನಿಯು ಕೇಳಿಸತು:

"ಪ್ರಿಯ ರಣಮಲ್ಲ! ನೀವು ಸುಲಿಗೆಗಾರರಾಗಿದ್ದರೂ ನ....ನ....ಗೆ.... ಪ್ರಿಯರು....ಆ....ಗಿ....ರು....ತ್ತೀ....ರಿ"

ರಣಮಲ್ಲನು ತನ್ನ ಕೈಗಳನ್ನು ಕಣ್ಣಿನ ಮೇಲೆಯೇ ಇಟ್ಟುಕೊಂಡು ನಿಂತಿದ್ದನು. ಈ ಧ್ವನಿಯು ಹೊರಡುತ್ತಲೆ ಕೈಗಳನ್ನು ತೆಗೆದು ನೋಡುತ್ತಾನೆ, ರಾಜಕುಮಾರಿಯು ನಿದ್ರಿತ ಅವಸ್ಥೆಯಲ್ಲೇ ಮೇಲಿನಂತೆ ಅನ್ನತೊಡಗಿದ್ದಳು. ರಣಮಲ್ಲನಿಗೆ ಸಂಭ್ರಮವಾಯಿತು. ಒಮ್ಮೆ ಮಾಡಿದ ಉಪಕಾರವನ್ನು ಇಡೀ ಆಯುಷ್ಯದಲ್ಲೆಲ್ಲ ಮರೆಯದ ವ್ಯಕ್ತಿಗಳು ಈ ಕಠೋರ ಜಗದಲ್ಲಾದರೂ ಇರುತ್ತಾರೆಂಬದನ್ನು ಅವನು ಮನವರಿಕೆ ಮಾಡಿಕೊಂಡಿದ್ದನು. ಆ ವ್ಯಕ್ತಿಗಳಲ್ಲಿಯೇ ರಾಜಕುಮಾರಿಯೊಬ್ಬಳೆಂಬುದು ಅವನಿಗೆ ತಿಳಿಯಿತು. ರಾಜನಂದಿನಿಯಾದ ಶೀಲವತಿಯು ಸ್ವಪ್ನದಲ್ಲಿಯೇ ಉಪಕಾರಕರ್ತನ ನಾಮಜಪ ನಡೆಯಿಸಿದ್ದಳು. ರಣಮಲ್ಲನು ಅವಳ ಮನೋವೃತ್ತಿಯ ಸ್ವರೂಪ ತಿಳಿದು ಸ್ತಂಬಿತನಾದನು!

ಇನ್ನು ಮೇಲೆ ಶಯನಗೃಹದಲ್ಲಿ ನಿಲ್ಲದೆ ಹೊರಗೆ ಹೋಗುವದೇ ಒಳಿತೆಂದು ರಣಮಲ್ಲನಿಗೆ ತೋರಿತು ಕೂಡಲೆ ಆವನು ಅಲ್ಲಿಂದ ಹೊರಡುವದನ್ನು ನಿಶ್ಚಯಿಸಿದನು. ಧ್ಯೇಯಸಾಧನೆಗಾಗಿ ಹೊರಟ ಆ ದೃಢನಿಶ್ಚಯಿಯಾದ ರಣಮಲ್ಲನು ರಾಜಕುಮಾರಿಯ ಕೃತಜ್ಞತಾವಾಣಿಯ ವಿಷಯಕ್ಕೆ ವಿಚಾರಿಸುತ್ತ ನಿಲ್ಲಲು ಮನಸ್ಸಿಲ್ಲದವನಾಗಿದ್ದನು. ಕೊನೆಗೆ ಬಂದ ದಾರಿಯಿಂದ ಹೊರಗೆ ಹೋಗಬೇಕೆಂದು ಕಿಡಕಿಯಲ್ಲಿ ನೋಡಿದನು; ಅಲ್ಲಿ ಅವನಿಗೆ ಏನು ಕಂಡಿತು?

ಮೊದಲಿನ ವಾತಾವರಣವೇ!

ಮೊದಲಿನ ಪ್ರಚಂಡತೆಯೇ!!

ಮೊದಲಿನ ಭಯಾನಕತೆಯೆ!!!

ಆದರೆ ರಣಮಲ್ಲನು ಈ ಎಲ್ಲವುಗಳನ್ನೂ ತುಚ್ಛವೆಂದು ತಿಳಿದಿದ್ದನು. ಅವನು ಅಲ್ಲಿಂದ ಹೊರಬೀಳುವದಕ್ಕಾಗಿ ಕಿಡಕಿಯ ಕಡೆಗೆ ಸಾಗಿದನು. ಅಷ್ಟರಲ್ಲಿ "ಯಾರು? ಸ್ವಪ್ನದಲ್ಲಿ ಕಂಡ ಮೂರ್ತಿಯೇ ಪ್ರತ್ಯಕ್ಷವಿರುವದಲ್ಲ! ಇದೇನು ಸತ್ಯವೋ ಸ್ವಪ್ನವೊ?" ಎಂಬ ಮಾತುಗಳು ರಣಮಲ್ಲನಿಗೆ ಕೇಳಿದವು. ಕೂಡಲೆ ಅವನು ತಿರುಗಿ ನೋಡುತ್ತಾನೆ, ರಾಜಕುಮಾರಿಯು ಅರ್ಧಮರ್ಧ ಎಚ್ಚರದಲ್ಲಿ ತನ್ನ ಸ್ವಪ್ನದ ಬಗ್ಗೆ ವಿಚಾರಿಸುತ್ತ ಕಣ್ಣುತಿಕ್ಕುತ್ತ ಕುಳಿತಿದ್ದಾಳೆ.

"ದೇವಾ! ನನ್ನ ಸ್ವಪ್ನವು ನಿಜವಾಯಿತು. ನಿನ್ನ ಮಹಿಮೆಯು ಅಗಾಧವಾದದ್ದು" ಎಂದು ರಾಜನಂದಿನಿಯು ನುಡಿದು:-"ವೀರವರಾ! ನೀವು ಇಲ್ಲಿಗೆ

ಬರಬಹುದೆಂದು ನಾನು ನನ್ನ ಸ್ವಪ್ನದ ಮೇಲಿಂದ ತಿಳಿದುಕೊಂಡಿದ್ದೆನು.''

ರಣಮಲ್ಲನು ಉದ್ಭ್ರಾಂತನಂತೆ ನಿಂತನು. ಅವನು ಅಜ್ಞಾತ ತಂದ್ರಿಯಲ್ಲಿ ಮಗ್ನನಾಗಿದ್ದನು.

ರಾಜಕುಮಾರಿಯು ಮಂಚದಿಂದಿಳಿದು ರಣಮಲ್ಲನ ಹೃದಯವನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಅವನ ಕಡೆಗೆ ನೋಡಹತ್ತಿದಳು.

ಆವಳ ನೇತ್ರಕಟಾಕ್ಷದಿಂದ ರಣಮಲ್ಲನು ಎಚ್ಚತ್ತನು. ಆಗ ಅವನು:- ''ರಾಜನಂದಿನಿ! ನಾನು ಇಲ್ಲಿಗೆ ನಿನ್ನ ಭೆಟ್ಟಿಗಾಗಿ ಬಂದಿಲ್ಲ; ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ಬಂದಿರುವೆನು.''

''ಏನು? ನೀವು ಇಲ್ಲಿಗೆ ಸೇಡುತೀರಿಸಕೊಳ್ಳಲಿಕ್ಕೆ ಬಂದಿರುವಿರಾ?''ರಾಜಕನ್ಯೆಯು ಉತ್ಸುಕತೆಯಿಂದ ಕೇಳಿದಳು.

''ನಿಜವು; ಸೇಡುತೀರಿಸಿಕೊಳ್ಳುವ ಉದ್ದೇಶದಿಂದಲೇ ನಾನು ಇಲ್ಲಿಗೆ ಬಂದಿರುವೆನು. ನನ್ನ ಪಾಲಕ ಪಿತನ-ನನ್ನ ಮಸ್ತಕದ ಮೇಲಿನ ಛತ್ರದ-ನಾಶ ಮಾಡಿದ್ದಕ್ಕಾಗಿ ಸೇಡುತೀರಿಸಿಕೊಳ್ಳ ಬಂದಿರುವೆನು.''

''ಹಾಗಾದರೆ ನೀವು ಮಯೂರಧ್ವಜ ಸೇನಾಪತಿಗಳನ್ನು ಹುಡುಕಲಿಕ್ಕೆ ಬದದಿರುವಿರೆಂದಂತಾಯಿತು.''

''ಇಲ್ಲ; ನಾನು ಮಯೂರಧ್ವಜನ ಶೋಧಕ್ಕಾಗಿ ಬಂದಿಲ್ಲ. ಹುಚ್ಚುತನದ ಸ್ವಾಮಿಭಕ್ತಿಯು ಮದ್ಯಪ್ರಾಶನ ಮಾಡಿಸಿ, ಆ ಗುಂಗಿನಲ್ಲಿ ಬಂಧುವಧೆ ಮಾಡಿಸಿದ ವಿಚಾರಹೀನನೂ ಅತ್ಯಾಚಾರಿಯೂ ಆದ ರಾಣಾ ರಾಯಸಿಂಹನ ಶೋಧ ಮಾಡಲಿಕ್ಕೆ ಬಂದಿರುವೆನು.''

''ಏನು? ನೀವು ನನ್ನ ತಂದೆಯ ಶೋಧ ಮಾಡತೊಡಗಿರುವಿರಾ?'' ಎಂದು ಭಯವಿಹ್ವಲಳಾಗಿ ಶೀಲವತಿಯು ಕೇಳಿದಳು.

'ಹೌದು; ನಿನ್ನ ತಂದೆಯನ್ನು ಹುಡುಕತೊಡಗಿರುವೆನು.' ರಣಮಲ್ಲನು ಗಂಭೀರತೆಯಿಂದ ಉತ್ತರ ಕೊಟ್ಟನು.

'ಅವರನ್ನು ಹುಡುಕಿ ಏನು ಮಾಡುವಿರಿ?'

'ರುಧಿರಕ್ಕೆ ರುಧಿರ, ಶಿರಕ್ಕೆ ಶಿರ, ಪ್ರಾಣಕ್ಕೆ ಪ್ರಾಣ!' ಎಂದು ರಣಮಲ್ಲನು ಕಠೋರ ವಾಣಿಯಿಂದ ನುಡಿದು:—"ಒಂದು ವೇಳೆ ನನ್ನಿಂದ ಈ ಕಾರ್ಯವಾಗದಿದ್ದರೆ, ಪಿತೃಭಕ್ತಿಯ ಯಜ್ಞಕುಂಡದಲ್ಲಿ ಆತ್ಮಬಲಿದಾನ ಮಾಡುವೆನು.''

''ರಣಮಲ್ಲ! ರಣಮಲ್ಲ!'' ಕರುಣಾಪೂರ್ಣ ಹೃದಯದಿಂದ ಹೊರಟ ಕೋಮಲ ಶಬ್ದಗಳಿಂದ ರಾಜಕುಮಾರಿಯು-'ಅಂದು ಪಾತಕಿಯಾದ ವಿಲಾಸ

ವಿಜಯ ರಾಣಾನ ಕೈಯಿಂದ ನನ್ನನ್ನು ಪಾರುಮಾಡಿದ್ದನ್ನು ನೀವು ಮರೆತಿರು ವಿರಾ? ಪ್ರಿಯ ರಣಮಲ್ಲ, ಅಂದಿನಿಂದ ನನ್ನ ಹೃದಯದಲ್ಲಿ ಒಂದು ಬಗೆಯ ಅನುರಾಗವು ಉತ್ಪನ್ನವಾಗಿದೆ. ಅದು ಶುದ್ಧವಿದೆ; ಸಾತ್ವಿಕವಿದೆ. ದೃಢವೂ ನಿಶ್ಚಯವೂ ಇದೆ. ನಾನು ಆ ಅನುರಾಗಕ್ಕೆ ವಶಳಾಗಿ ದಿವರಾತ್ರಿಯಲ್ಲಿ ನಿಮ್ಮ-ನ್ನು ಆರಾಧಿಸುತ್ತಿರುವೆನು. ನಿಮ್ಮನ್ನು ಕಾಣಲಿಕ್ಕೆ ಉತ್ಸುಕಳಾಗಿರುವೆನು. ನಿಮ್ಮ ಸಹವಾಸವನ್ನು ಇಚ್ಛಿಸುತ್ತಿರುವೆನು. ನಾಥ! ಅಂದಿನಿಂದ ನಾನು ನನ್ನ ಪಂಚಪ್ರಾಣಗಳನ್ನು ನಿಮ್ಮ ಚರಣಕಮಲಗಳಿಗೆ ಅರ್ಪಿಸಿರುವೆನು. ನಿಮ್ಮ ನಾಮಸ್ಮರಣೆಯಲ್ಲಿಯೂ, ನಿಮ್ಮ ಕಲ್ಪಿತ ಮೂರ್ತಿಯ ಪೂಜೆಯಲ್ಲಿಯೂ ಕಾಲಕಳೆಯತೊಡಗಿರುವೆನು. ಹೃದಯೇಶ್ವರರೆ, ನೀವು ನನ್ನ ಜೀವನ ಸರ್ವಸ್ವ ರಾಗಿರುವಿರಿ. ನಾನು ನಿಮ್ಮನ್ನು ಸ್ವಪ್ನದಲ್ಲಿ ಕಂಡೆನು; ಎಚ್ಚರಾದೊಡನೆಯೆ ಪ್ರತ್ಯಕ್ಷವಾಗಿ ನೋಡಿದೆನು. ಅದೆಂತಹ ಅಕಲ್ಪಿತ ಘಟನೆಯು ನೋಡಿರಿ! ನನ್ನ ತಪಾಚರಣೆಗೆ ಮೆಚ್ಚಿ ನೀವು ನನ್ನ ಮನೋರಥವನ್ನು ಪೂರೈಸಲಿಕ್ಕೆ ಬಂದಿರಿ. ನೀವು ಸೇಡುತೀರಿಸಿಕೊಳ್ಳುವ ಹವ್ಯಾಸಕ್ಕೆ ಬಿದ್ದು, ಪ್ರಾಣವನ್ನು ಗಂಡಾಂತರದಲ್ಲಿ ಹಾಕಬೇಡಿರಿ. ಮಳೆಯ ಅಬ್ಬರದಲ್ಲಿ ನಿಮ್ಮ ಸುಳಿವು ಇದು ವರೆಗೆ ಯಾರಿಗೂ ಹತ್ತಿರುವದಿಲ್ಲ. ನೀವು ಹೆಚ್ಚಿನ ಸಾಹಸಕ್ಕೆ ಹೋದರೆ, ನಿಜ ವಾಗಿಯೂ ಸಂಕಟವು ಪ್ರಾಪ್ತವಾಗುವದು. ರಾಣಾ ರಾಯಸಿಂಹರ ರಾಜಮಂ ದಿರವೆಂದರೆ, ಏನೆಂದು ತಿಳಿದಿರುವಿರಿ? ಹೊರಗೆ ನಗ್ನ-ಖಡ್ಗಧಾರಿಗಳಾದ ಅಸಂ-ಖ್ಯ ಸೈನಿಕರು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾವಲು ಮಾಡುತ್ತಿರುವರು. ನೀವು ನನ್ನ ಹೃದಯದ ಸ್ವಾಮಿಗಳಾಗಿರುವದರಿಂದ, ಮನಃಪೂರ್ವಕವಾಗಿ ನಿಮ್ಮ ಒಳಿತನ್ನು ನೆನೆಯುತ್ತಲಿರುವೆನು.''

''ರಾಜಕನ್ಯೆ, ನನ್ನನ್ನು ಕ್ಷಮಿಸು. ಈ ಸಂಧಿಯಲ್ಲಿ ನಾನು ಯಾವ ಬೆದರಿಕೆಗೂ ಸೊಪ್ಪುಹಾಕುವದಿಲ್ಲ. ಕರ್ತವ್ಯದಲ್ಲಿ ತೊಡಗಿದ ನಾನು ಈಗ ಪ್ರೇಮ-ಕೋಮಲತೆಗಳ ಅನುಭವ ಹೊಂದಲಿಕ್ಕೆ ಇಲ್ಲಿಗೆ ಬಂದಿಲ್ಲ ಹೊಡೆಯು ವೆನು; ಇಲ್ಲವೆ ಮಡಿಯುವೆನು. ಇದೇ ನನ್ನ ನಿಜವಾದ ಗುರಿಯು. ಇವೆರಡ ರಲ್ಲಿ ಬೇಕಾದ ಹಾಗಾದರೂ ಅಡ್ಡಿಯಿಲ್ಲ. ಕರ್ತವ್ಯನಿಷ್ಠ ಪುರುಷಸಿಂಹನು ಪರಿಣಾಮದ ವಿಚಾರ ಮಾಡುತ್ತಿರುವದಿಲ್ಲ. ಹೇಗಾದರೂ ಕರ್ತವ್ಯವು ಕರ್ತ ವ್ಯವೇ! ಫಲಾಪೇಕ್ಷೆಯಿಲ್ಲದೆ ಕಾರ್ಯ ಮಾಡುವದೇ ನಿಜವಾದ ಕರ್ಮಯೋ ಗಿಯ ಶೀಲವು''

'ಪ್ರಿಯ ನಾಥ!' ಶೀಲವತಿಯು ದೀನವಾಣಿಯಿಂದ:—''ನನ್ನ ಪ್ರಿಯ ರಮಣ ರಣಮಲ್ಲ, ನೀವು ಸದ್ಯದ ಪ್ರಸಂಗದಲ್ಲಿ ನಾನು ಹೇಳಿದಂತೆ ಕೇಳಲಿಕ್ಕೆ

ಬೇಕು. ನೀವು ನನ್ನ ಹೃದಯೇಶ್ವರರು; ಪ್ರಾಣೇಶ್ವರರು. ನಿಮ್ಮ ಜೀವನವೇ ನನ್ನ ಪಂಚಪ್ರಾಣಗಳು. ನಿಮ್ಮ ಅಸ್ತಿತ್ವದಿಂದ ನನ್ನ ಅಸ್ತಿತ್ವವುಂಟು. ನಿಮಗಿಂತ ವರಿಷ್ಠವು ನನಗೆ ಈ ಜಗತ್ತಿನಲ್ಲಿ ಮತ್ತಾವುದೂ ಇಲ್ಲ. ನನ್ನ ದೀನವಾಣಿಯ ಕಡೆಗೆ ಲಕ್ಷ್ಯವಿಟ್ಟು ಇಲ್ಲಿಂದ ಬೇಗನೆ ತೆರಳಿರಿ. ನೀವು ಅಸಾಧ್ಯವಾದ ಸಾಹಸವನ್ನು ಮಾಡದೆ ಇಲ್ಲಿಂದ ಹೊರಟು ಹೋಗಿರಿ ನಾಥ, ನಿಮಗೆ ನನ್ನ ಆಣೆಯಿದೆ ಬೇಗನೆ ಇಲ್ಲಿಂದ ಹೊರಟು ಹೋಗಿರಿ."

"ರಾಜಕುಮಾರಿ!" ರಣಮಲ್ಲನು ಉಗ್ರತೆಯಿಂದ:—"ಏನು? ನಾನು ತಿರುಗಿ ಹೋಗಬೇಕೇ? ಕರ್ತವ್ಯವನ್ನು ನೆರವೇರಿಸದೆ, ಹಾಗೆಯೆ ಹೊರಟು ಹೋಗಬೇಕೇ? ಜೀವದ ವ್ಯಾಮೋಹವನ್ನು ತೊರೆದು, ಕೋಟೆಯ ಗೋಡೆಯನ್ನೇರಿ, ಅಸೀಮ ಸಾಹಸದಿಂದ ರಾಜಮಂದಿರವನ್ನು ಪ್ರವೇಶಿಸಿದ ನಾನು, ನನ್ನ ಕರ್ತವ್ಯವನ್ನು ಜರುಗಿಸದೆ ಹೊರಟು ಹೋಗಬೇಕೇ? ಅಸಂಭವ, ಅಸಂಭವ! ಸ್ನೇಹ-ಸೌಂದರ್ಯಗಳು ಕರ್ತವ್ಯದ ಮುಂದೆ ತುಚ್ಛವಾಗಿರುವವು. ಸೇಡೇ ನನ್ನ ಕರ್ತವ್ಯವು; ಸೇಡೇ ನನ್ನ ಆಯುಷ್ಯದ ಹೆಗ್ಗುರಿಯು. ರಾಜಕನ್ಯೆ, ನನ್ನನ್ನು ಕ್ಷಮಿಸು. ನಾನು ನನ್ನ ನಿಶ್ಚಯವನ್ನು ಶಿಥಿಲಗೊಳಿಸಲಿಚ್ಛಿಸುವದಿಲ್ಲ."

ರಣಮಲ್ಲನು ಆಡಿದ ದೃಢನಿಶ್ಚಯದ ಶಬ್ದಗಳನ್ನು ಕೇಳಿ ರಾಜಕುಮಾರಿಯ ಅಂತಃಕರಣವು ತಳಮಳಗೊಂಡಿತು. ಭಯವು ಉತ್ಪನ್ನವಾಗಿ, ಸರ್ವಾಂಗವು ಕಂಪಾಯಮಾನವಾಯಿತು. ಆಗ ಅವಳು ಮುಂದೆ ಬಂದು ರಣಮಲ್ಲನ ಪಾದಗಳ ಮೇಲೆ ಮಸ್ತಕವನ್ನಿರಿಸಿ:—"ಪ್ರಿಯಕರಾ! ನೀವು ಕೈಲಾಗದ ಕಾರ್ಯ ಮಾಡಬೇಡಿರಿ. ನಿಮ್ಮ ಸೇಡು ತೀರಿಸಿಕೊಳ್ಳುವ ಇಚ್ಛೆಯು ಸಫಲವಾಗಲಾರದು. ನೀವು ನನ್ನ ತಂದೆಯವರನ್ನು ಕಾಣುವದಕ್ಕಿಂತ ಮುಂಚಿತವೇ ಸೆರೆಯಾಳಾಗುವಿರಿ. ನಿಮ್ಮ ಕೃತಿಯಿಂದ ನಿಶ್ಚಯವಾಗಿ ಗಂಡಾಂತರವು ಪ್ರಾಪ್ತವಾಗುವದು. ಅಂತೆಯೆ ನಾನು ನಿಮಗೆ ಸೆರಗೊಡ್ಡಿ ಬೇಡಿಕೊಳ್ಳತೊಡಗಿರುವೆನು. ಈ ನಗದೇಶದ ರಾಜಕುಮಾರಿಯ-ನಿಮ್ಮ ಚರಣ ಕಿಂಕರಿಯ ದೀನವಾಣಿಯನ್ನು ದುರ್ಲಕ್ಷಿಸದೆ ಹೊರಟು ಹೋಗಬೇಕೆಂದು ಪ್ರಾರ್ಥಿಸುವೆನು."

ರಾಜಕುಮಾರಿಯು ಹೀಗೆ ನುಡಿದು ರಣಮಲ್ಲನೆದುರಿಗೆ ಕೈ ಜೋಡಿಸಿ ನಿಂತುಕೊಂಡಳು. ಆಗ ಅವಳ ನೇತ್ರಗಳು ಅಶ್ರುಪೂರ್ಣವಾಗಿದ್ದವು. ಮುಖವು ದೈನ್ಯತೆಯಿಂದೊಡಗೂಡಿತ್ತು. ಸಾಶ್ರುನಯನೆಯೂ ದೀನೆಯೂ ಆದ ರಾಜಕುಮಾರಿಯ ದಯಾಯಾಚನೆಯನ್ನು ರಣಮಲ್ಲನು ಯಾಚಿಸದಿರಬಹುದೆ? ಆ ಸಾತ್ವಿಕ ಹೃದಯ ಪ್ರೇಮಳ ಮೂರ್ತಿಯನ್ನು ಉಪೇಕ್ಷಿಸಬಹುದೆ?

ರಣಮಲ್ಲನು ದೃಢನಿಶ್ಚಯಿಯಾಗಿದ್ದನು. ಕರ್ತವ್ಯದ ಮುಂದೆ ಅನ್ಯ

ವಿಷಯಗಳು ಅವನಿಗೆ ಕಃಪದಾರ್ಥವಾಗಿದ್ದವು. ಸ್ನೇಹ ಸೌಂದರ್ಯಗಳಿಗೆ ವಶನಾಗಿ, ಪ್ರತಿಜ್ಞೆಯನ್ನು ಮರೆಯುವ ಶಿಥಿಲವೃತ್ತಿಯು ಅವನಲ್ಲಿದ್ದಿಲ್ಲ. ಆಗ ಅವನು ಗಂಭೀರತೆಯಿಂದಲೂ ನಿಶ್ಚಯಪೂರ್ವಕವಾಗಿಯೂ:-"ರಾಜನಂದಿನಿ! ನನ್ನನ್ನು ಈ ಸಂಧಿಯಲ್ಲಿ ಕಾಡಬೇಡ. ನಿನ್ನ ವಿನಂತಿಯನ್ನು ಮನ್ನಿಸುವ ಸಮಯವು ಈಗಿಲ್ಲ. ನಾನು ಪ್ರತಿಜ್ಞಾಬದ್ಧನಾದದ್ದರಿಂದ, ನಿರುಪಾಯನಾಗಿರುವೆನು. ಸೇಡು ನನ್ನ ಹೆಗ್ಗುರಿ. ಸೇಡು, ಸೇಡು, ಸೇಡು!!"

ಅಷ್ಟರಲ್ಲಿ ಒಮ್ಮೆಲೆ ಮಂದಿರದ ದ್ವಾರವು ತೆರೆಯಲ್ಪಟ್ಟಿತು. ಕಣ್ಣುಗಳ ಮೇಲೆ ಕರೀಪಟ್ಟಿಯನ್ನು ಕಟ್ಟಿಕೊಂಡು, ನಗ್ನಖಡ್ಗವನ್ನು ಕೈಯಲ್ಲಿ ಹಿಡಿದ ಭೀಮಕಾಯದ ಒಬ್ಬ ರಜಪುತನು ವಿದ್ಯುದ್ವೇಗಗತಿಯಿಂದ ರಣಮಲ್ಲನ ಬಳಿಗೆ ಬಂದನು.

ಅವನನ್ನು ಕಂಡ ಕೂಡಲೆ ರಾಜಕುಮಾರಿಯ ಅಂತಃಕರಣವು ಹೇಗಾಗಿರಬಹುದು?

---

## ಸ್ವಾಮಿನಿಷ್ಠೆಯ ಪ್ರಚಂಡವಾದ ಗೋಡೆ.

"ಎಲವೊ! ನೀನು ಯಾರು? ಇಂತಹ ಮಧ್ಯರಾತ್ರಿಯಲ್ಲಿ ರಾಜಕನ್ಯೆಯ ಮಂದಿರವನ್ನು ಪ್ರವೇಶಿಸಲಿಕ್ಕೆ ನಿನಗೆ ಯಾವ ಕಾಲನು ನಿಮಂತ್ರಣಕೊಟ್ಟಿದ್ದನು? ರಾಣಾಜಿಯವರ ಸ್ವಾಮಿನಿಷ್ಠ ಸೈನಿಕರು ಅವರ ಪ್ರಿಯ ಕನ್ಯೆಯ ರಕ್ಷಣೆಗಾಗಿ ಹಗಲಿರುಳು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕುಳಿತುಕೊಂಡಿರುತ್ತಾರೆಂಬದನ್ನು ನೀನು ಅರಿತಿಲ್ಲವೊ? ನೀನು ಹೀಗೆ ಕಳ್ಳನಂತೆ ಇಲ್ಲಿ ಪ್ರವೇಶ ಮಾಡಿದ ಕಾರಣವೇನು?"

"ಕಾರಣವು ಬೇಗನೆ ತಿಳಿಯುವದು. ವಿಚಾರಹೀನ ಸೈನಿಕಾ, ನೀನು ಹೀಗೆ ಕಳ್ಳನಂತೆ ಮುಖಕ್ಕೆ ಕರೀಪಟ್ಟಿಯನ್ನು ಕಟ್ಟಿಕೊಂಡು ಬಂದ ಕಾರಣವೇನು? ಗುರುತು ಹತ್ತಗೊಡುವದರಿಂದ ಜೀವಕ್ಕೆ ಭಯವೆನಿಸುತ್ತದೇನು?"

"ಭಯವೆ? ಅದು ಎಂತಹ ಪದಾರ್ಥವಿರುವದೆಂಬದನ್ನು ಈ ನಗಡೇಶದ ಸೇನಾಪತಿಗೆ ಇಂದಿನ ವರೆಗೆ ಗೊತ್ತಿಲ್ಲ. ನೀನೇನಾದರೂ ಅದರ ಪರಿಚಯ ಮಾಡಿಕೊಡ ಬಂದೆಯಾ?"

ಸೈನಿಕನು ಹೀಗೆ ನುಡಿದವನೇ ಕಣ್ಣುಗಳಿಗೆ ಕಟ್ಟಿದ್ದ ಕರೀಪಟ್ಟಿಯನ್ನು ಬಿಚ್ಚಿದನು. ಅವನನ್ನು ನೋಡಿದ ಕೂಡಲೆ ರಣಮಲ್ಲನು ಚಕಿತನಾದನು.

ಇವನಾರು? ಮಯೂರಧ್ವಜ!

ಮಯೂರಧ್ವಜನಾದರೂ ವಿಸ್ಮಿತನಾದನು. ಎದುರಿಗೆ ನಿಂತವನು ತನ್ನ ಬಂಧುವಿನ ಪಾಲಿತಪುತ್ರ ರಣಮಲ್ಲನೇ ಎಂಬದನ್ನು ಅವನು ಗುರ್ತಿಸಿದನು.

ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡುತ್ತ ನಿಂತರು. ಮಯೂರಧ್ವಜನ ಹೃದಯದಲ್ಲಿ ಸುಷುಪ್ತಾವಸ್ಥೆಯಲ್ಲಿದ್ದ ಮಮತೆಯು ಜಾಗೃತ ವಾಯಿತು. ಇದಿನವರೆಗೆ ಗೊತ್ತಿರದಂತಹ ಕರುಣಾಪೂರ್ಣ ಮಮತೆಯು ಇಂದು ಅವನ ಅಂತಃಕರಣವನ್ನು ಸ್ಪರ್ಶ ಮಾಡಿತು.

ರಣಮಲ್ಲನ ಸ್ಥಿತಿಯು ಮಾತ್ರ ವಿಪರೀತವಾಗಿತ್ತು. ಅವನು ಕ್ರೋಧಾವೇಶಗೊಂಡಿದ್ದನು ನೇತ್ರಗಳು ಅಗ್ನಿಕಣವನ್ನು ಸುರಿಸುವಂತಿದ್ದವು. ಸರ್ವಾಂಗವೂ ಕಂಪಾಯಮಾನವಾಗಿತ್ತು. ಜನತ್ತಿನಲ್ಲಿ ರಮಣೀಯವೂ ಪೂಜ್ಯವೂ ಆದ ಒಂದೇ ಒಂದು ವ್ಯಕ್ತಿಯ-ಪಿತೃಸಮಾನನಾಗಿದ್ದ ಜಗಮಲ್ಲನ-ವಧೆಮಾಡಿದ ಮಯೂರಧ್ವಜನು ಎದುರಿಗೆ ನಿಂತದ್ದರಿಂದ, ಅವನ ಅಂತಃಕರಣವು ಕ್ರೋಧಪೂರ್ಣವಾಗಿತ್ತು. ಅಂಥ ರಾಜನಿಷ್ಠೆಯ ಬಲಿಗೆ ಸಿಲುಕಿ, ನಿಜವಾದ ಕ್ಷಾತ್ರಧರ್ಮಕ್ಕೆ ಕಲಂಕ ಹಚ್ಚಿದ ಆ ಸೇನಾಪತಿಯನ್ನು ನೋಡಿ ರಣಮಲ್ಲನ ಮನಸ್ಸಿನಲ್ಲಿ ತಿರಸ್ಕಾರವೂ ಉತ್ಪನ್ನವಾಯಿತು.

ಮಯೂರಧ್ವಜನು ತೀಕ್ಷ್ಣದೃಷ್ಟಿಯಿಂದ ರಣಮಲ್ಲನ ಮುಖವನ್ನು ನಿರೀಕ್ಷಿಸತೊಡಗಿದ್ದನು. ಅವನು ರಣಮಲ್ಲನ ಹೃದಯಭಾವವನ್ನು ತಿಳಿಯಲುತ್ಸುಕನಾಗಿದ್ದನು ತಿರಸ್ಕಾರ-ಸಂತಾಪಗಳಿಂದ ರಣಮಲ್ಲನ ಹೃದಯವು ಅಲ್ಲೋಲ ಕಲ್ಲೋಲವಾಗತೊಡಗಿತ್ತು! ದೃಷ್ಟಿಯು ಉಗ್ರವಿತ್ತು. ಮುಖವು ಆರಕ್ತವಾಗಿತ್ತು. ತೀಕ್ಷ್ಣಬುದ್ಧಿಯ ಸೇನಾಪತಿಯು ಮುಖಚರ್ಯೆಯ ಮೇಲಿಂದಲೇ ಅವನ ಭಾವವನ್ನು ಗುರುತಿಸಿದನು.

ರಾಜಕುಮಾರಿಯ ಬುದ್ಧಿಯು ಕುಂಠಿತವಾಯಿತು. ಪ್ರಾಪ್ತಪ್ರಸಂಗದಲ್ಲಿ ಹೇಗೆ ನಡೆಯಬೇಕೆಂಬದು ಅವಳಿಗೆ ತೋಚದಾಯಿತು. ಅವಳು ಶಿಲಾಪ್ರತಿಮೆಯಂತೆ ನಿಂತುಬಿಟ್ಟಿದ್ದಳು!

ಕೆಲವು ವೇಳೆಯ ಮೇಲೆ ಮಯೂರಧ್ವಜನು ಶೀಲವತಿಯನ್ನು ಕುರಿತು ವಿನಮ್ರಭಾವದಿಂದ-"ರಾಜಕುಮಾರಿ, ನೀನು ಹೊರಗೆ ಹೋಗಿ ವಿಶ್ರಾಂತಿ ಪಡೆ. ನಾನು ನನ್ನ ಕರ್ತವ್ಯವನ್ನು ನೆರವೇರಿಸುವೆನು."

ಶೀಲವತಿಯ ಅಂತಃಕರಣವು ಕಳವಳಗೊಂಡಿತು. ರಣಮಲ್ಲನು ತನ್ನ ಸೂಚನೆಯನ್ನುಪೇಕ್ಷಿಸಿ ಸಂಕಟಕ್ಕೀಡಾದನೆಂದು ಅವಳು ದುಃಖಿಸತೊಡಗಿದಳು. ಕರ್ತವ್ಯನಿಷ್ಠನೂ ಸ್ವಾಮಿಭಕ್ತನೂ ಆದ ಸೇನಾಪತಿಯು ರಣಮಲ್ಲನ ಅಹಿತಚಿಂತನೆ ಮಾಡದಿರಲಾರನೆಂಬದು ಅವಳಿಗೆ ತಿಳಿಯಿತು. ತನ್ನ ಪ್ರಿಯ

ಕರನ ಮುಕ್ತತೆ ಮಾಡಬೇಕೆಂದು ಅವಳು ಪರಮಾತ್ಮನನ್ನು ಅನನ್ಯಭಾವದಿಂದ ಪ್ರಾರ್ಥಿಸಹತ್ತಿದಳು. ಅವಳಿಗೆ ಹೊರಗೆ ಹೋಗುವದಕ್ಕೆ ಮಯೂರಧ್ವಜನು ಆಜ್ಞೆ ಮಾಡಿದ್ದರಿಂದ, ಉಪಾಯವಿಲ್ಲದೆ ಅವಳು ಮಂದಿರದಿಂದ ಹೊರಟಳು.

ಶೀಲವತಿಯು ಹೋದ ಬಳಿಕ ಮಯೂರಧ್ವಜನು ರಣಮಲ್ಲನ ಕಡೆಗೆ ಪ್ರೇಮದೃಷ್ಟಿಯಿಂದ ನೋಡುತ್ತ, ವಾತ್ಸಲ್ಯಯುಕ್ತವಾದ ವಾಣಿಯಿಂದ:—"ಪ್ರಿಯಪುತ್ರ ರಣಮಲ್ಲ, ಕೆಲವು ದಿವಸಗಳಿಂದ ನನ್ನ ಮನಃಸ್ಥಿತಿಯು ವಿಸ್ಮಯ ಜನಕವಾದ ಅಭ್ಯಂತರವನ್ನು ಹೊಂದಿದೆ. ನಿನ್ನನ್ನು ಕಾಣಬೇಕೆಂಬ ಕುತೂಹಲವು ದಿನದಿನಕ್ಕೆ ಬೆಳೆಯುತೊಡಗಿತ್ತು. ಇಂದು ಪರಮಾತ್ಮನು ನನ್ನ ಇಚ್ಛೆಯನ್ನು ಈಡೇರಿಸಿದನು. ನಿನ್ನನ್ನು ನೋಡಿ ನನಗೆ ಸದ್ಯದ ಸ್ಥಿತಿಯಲ್ಲಿ ಸಹ ಪರಮಾನಂದವಾಗಿದೆ."

ಸೇನಾಪತಿಯು ಮಾತನಾಡುವಾಗಲೂ ರಣಮಲ್ಲನ ಹೃದಯದಲ್ಲಿಯ ತಿರಸ್ಕಾರ-ಸಂತಾಪಗಳು ಯಥಾಸ್ಥಿತವಾಗಿದ್ದವು. ಅವನು ಮಯೂರಧ್ವಜನ ಮಾತುಗಳನ್ನು ಕೇಳಿ ಮತ್ತಿಷ್ಟು ಖತಿಗೊಂಡನು. ಆಗ ಅವನು ಕರ್ಕಶವಾಣಿಯಿಂದ: "ನೀವು ಇಲ್ಲಿಗೆ ಬಂದದ್ದರಿಂದ ನಾನು ಅತ್ಯಂತ ದುಃಖಿತನಾದೆನು."

"ರಣಮಲ್ಲ, ಇದೇನು! ನೀನು ಹೀಗೇಕೆ ಮಾತನಾಡುವೆ?"

"ಇಗೋ, ಈ ಪತ್ರವನ್ನು ನೋಡಿರಿ" ರಣಮಲ್ಲನು ತನ್ನ ಕೊರಳೊಳಗಿನ ತಾಯತದಲ್ಲಿದ್ದ ಜಗಮಲ್ಲನ ಪತ್ರವನ್ನು ಮಯೂರಧ್ವಜನ ಕಡೆಗೆ ಕೊಟ್ಟು:—"ಪತ್ರವನ್ನು ಚನ್ನಾಗಿ ಓದಿ ನೋಡಿರಿ."

"ಭಕ್ತಿಪೂರ್ವಕ ಪ್ರಣಾಮಗಳು.

ನಾವಿಬ್ಬರೂ ಸುಹಾಗ ಕೆರೆಯ ದಂಡೆಯ ಮೇಲೆ ಭೆಟ್ಟಿಯಾದ ಬಳಿಕ ಏನು ಪರಿಣಾಮವಾಗುವದೆಂಬದನ್ನು ನಿಮ್ಮ ಪತ್ರ ಬಂದೊಡನೆಯೇ ನಾನು ಅರಿತೆನು. ನಿಮ್ಮ ಕೈಯಿಂದ ಮೃತ್ಯುವು ಸಂಭವಿಸುವದೆಂದು ನನಗೆ ತಿಲಾಂಶವಾದರೂ ದುಃಖವೆನಿಸಲಾರದು. ನನ್ನ ಪ್ರೀತಿಯ ರಣಮಲ್ಲನನ್ನು ನಾನು ಚಿಕ್ಕಂದಿನಿಂದ ಪಾಲನ-ಪೋಷಣ ಮಾಡಿ ಬೆಳೆಯಿಸಿರುವೆನು. ಈ ನನ್ನ ಪಾಲಿತ ಪುತ್ರನನ್ನು ನಾನು ಹೊಟ್ಟೆಯ ಮಗುವಿಗಿಂತಲೂ ಹೆಚ್ಚಾಗಿ ಪ್ರೀತಿಸುವೆನು. ಮರಣ ಸಮಯದಲ್ಲಿಯ ನನ್ನ ಕೊನೆಯ ಇಚ್ಛೆಯೇನಂದರೆ, ನೀವು ರಣಮಲ್ಲನನ್ನು ಪುತ್ರನಂತೆ ತಿಳಿಯಬೇಕು; ಅವನ ತಂದೆಯ ಸ್ಥಾನವನ್ನು ನೀವು ಗ್ರಹಿಸಬೇಕು. ಅಣ್ಣಾ, ನೀವು ಈ ಹತಭಾಗಿಯ ಈ ಅಲ್ಪವಾದ ಇಚ್ಛೆಯನ್ನು ನೆರವೇರಿಸಲಾರಿರಾ? ತಮ್ಮ ಬಂಧು,

ಜಗಮಲ್ಲ."

ಪತ್ರವನ್ನೋದಿದೊಡನೆಯೆ ಮಯೂರಧ್ವಜನ ಹೃದಯವು ಉಕ್ಕಿ ಬಂತು. ಸ್ವಾಮಿಭಕ್ತಿಯ ಶೀತಲತೆಯಿಂದ ಗಟ್ಟಿಯಾದ ಅವನ ಅಂತಃಕರಣವು ಈ ವಾತ್ಸಲ್ಯಪೂರ್ಣವಾದ ಪತ್ರದ ಉಷ್ಣತೆಯಿಂದ ದ್ರವಿಸಿತು. ಜಗಮಲ್ಲನು ಅಂತಹ ಅನುಬಂಧುವೇ ಆಗಿದ್ದನು. ಅಂತಹನನ್ನು ಮಯೂರಧ್ವಜನು ತನ್ನ ಕೈಯಿಂದ ವಧೆಮಾಡಿ, ಕಟುಕರ್ತವ್ಯದ ಪರಾಕಾಷ್ಠೆಯನ್ನು ಪ್ರಕಟಗೊಳಿಸಿದ್ದನು. ಕರ್ತವ್ಯದ ಹಾಗು ಸ್ವಾಮಿನಿಷ್ಠೆಯ ಶುಷ್ಕಭಾವನೆಗೊಳಪಟ್ಟು, ಅವನು ಹೃದಯದ ಪೂರ್ಣ ವಾತ್ಸಲ್ಯಕ್ಕೂ ಮಮತೆಯ ಪ್ರೇಮನಿರ್ಭರವಾದ ಆದರ್ಶಕ್ಕೂ ತಿಲಾಂಜಲಿಯಿತ್ತಿದ್ದನು. ಕೋಮಲಭಾವನೆಯೊಂದು ನಷ್ಟವಾಗಿ ಹೋದ ಮೇಲೆ, ಮಾನವೀ ಹೃದಯದಲ್ಲಿ ಏನು ಉಳಿಯುವದು? ಮಯೂರಧ್ವಜನಿಗೆ ನಿಷ್ಠುರತೆಯಿಂದ ಮಾಡಿದ ಕಟುಕರ್ತವ್ಯದ ಸ್ಮರಣೆಯಾದೊಡನೆಯೆ ವ್ಯಾಕುಲತೆಯಿಂದ ಮುಖವನ್ನು ಬಾಗಿಸಿದನು. ಆಗ ಅವನ ಧಮನಿಗಳಲ್ಲಿ ಮಮತೆಯಿಂದೊಡಗೂಡಿದ ರಕ್ತವು ಹರಿಯಹತ್ತಿತು. ನೇತ್ರಗಳಲ್ಲಿ ವಾತ್ಸಲ್ಯಯುಕ್ತವಾದ ಅಶ್ರುಗಳು ದ್ರವಿಸಹತ್ತಿದವು. ಇಂತಹ ಅವಸ್ಥೆಯಲ್ಲಿ ಕೆಲವು ನಿಮಿಷಗಳು ಗತಿಸಿದ ಮೇಲೆ ಅವನು ಮುಖವೆತ್ತಿ ರಣಮಲ್ಲನನ್ನು ನೋಡಿದನು. ರಣಮಲ್ಲನು ಮಯೂರಧ್ವಜನ ಮುಖವನ್ನು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸತೊಡಗಿದ್ದನು. ಪತ್ರದಿಂದ ಮಯೂರಧ್ವಜನ ಆಂತರಿಕ ಪರಿವರ್ತನೆಯಾಗಿರುವದೋ ಹೇಗೆಂಬದನ್ನು ಅವನು ಪರೀಕ್ಷಿಸತೊಡಗಿದ್ದನು. ಅವನ ನೇತ್ರದೊಳಗಿನ ಕನೀನಿಕೆಗಳು ಧ್ರುವತಾರೆಯಂತೆ ಸ್ಥಿರವಾಗಿದ್ದವು.

‘‘ರಣಮಲ್ಲ!’’ ಮಯೂರಧ್ವಜನು ಅನುತಾಪಯುಕ್ತವಾದ ವಾಣಿಯಿಂದ:—‘‘ಈ ಸಣ್ಣ ಪತ್ರದಲ್ಲಿ ನನ್ನ ಬಂಧುವಿನ ಸ್ನೇಹಮಯ ಹೃದಯದ ಪವಿತ್ರತೆಯೇ ಚಿತ್ರಸಲ್ಪಟ್ಟದೆ ಭ್ರಾತೃಪ್ರೇಮದ ಹಾಗು ಸಹೋದರ ಮಮತೆಯ ಅಲೌಕಿಕ ಗಂಧವು ಈ ಪತ್ರದಲ್ಲಿ ಬೀರುತ್ತಲಿರುವದು. ಈ ಸುವಾಸವು ನನ್ನ ನಾಸಾಪುಟಗಳಿಂದ ಹೃದಯವನ್ನು ಪ್ರವೇಶಿಸಿ, ವಿಲಕ್ಷಣವಾದ ಆಂತರಿಕ ಪರಿವರ್ತನೆ ಮಾಡಿರುವದು. ನನ್ನ ಪ್ರಿಯಬಂಧುವಿನ ಅಂತಿಮ ಇಚ್ಛೆಯನ್ನು ಪೂರ್ಣಮಾಡದಂತಹ ನಿಷ್ಠುರ ಸ್ವಭಾವದವನು ನಾನಲ್ಲ. ಜಗಮಲ್ಲನು ನಿನ್ನನ್ನು ಪುತ್ರನೆಂದು ತಿಳಿದಿದ್ದರಿಂದ, ನೀನು ನನಗೂ ಪುತ್ರನೇ ಆಗಿರುವೆ. ಬಾ; ಮಗೂ, ರಣಮಲ್ಲ, ನನ್ನ ಹೃದಯದ ಅವಶೇಷ ದೀಪವೇ, ಮುಂದೆ ಬಾ. ನಿನ್ನನ್ನು ಆಲಿಂಗಿಸಿ ಪುತ್ರವಾತ್ಸಲ್ಯಾನುಭವ ಹೊಂದುವೆನು.

ಮಯೂರಧ್ವಜನು ಮುಂದೆ ಎರಡು ಹೆಜ್ಜೆಗಳನ್ನಿಟ್ಟನು. ಕೂಡಲೆ ರಣ

ಮಲ್ಲನು:—"ಸಾಕು; ಕಾಕಾಸಾಹೇಬರೇ, ನೀವು ಮುಂದೆ ಬರಲಾಗದು. ಅಲ್ಲಿಯೇ ನಿಂತುಕೊಳ್ಳಿರಿ. ನೀವು ಒಂದು ಹೆಜ್ಜೆಯನ್ನಾದರೂ ಮುಂದಿಡಬಾರದೆಂದು ನನ್ನ ಇಚ್ಛೆಯುಂಟು."

"ಮಗೂ" ಮಯೂರಧ್ವಜನು ವಿಸ್ಮಿತನಾಗಿ:—"ಅದೇಕೆ ಮುಂದೆ ಹೆಜ್ಜೆಯನ್ನಿಡಬಾರದು? ಪುತ್ರಾಲಿಂಗನದ ವಾತ್ಸಲ್ಯಾನುಭವ ಹೊಂದುವ ಅಧಿಕಾರವು ತಂದೆಗೆ ಇರುವದಿಲ್ಲವೆ?"

"ಓಹೋ! ಇರದೇನು ಮಾಡೀತು? ಸ್ನೇಹಮಯಿಗಳೂ ಸತ್ಯಶೀಲರೂ ಆದ ತಂದೆಗಳಿಗೆ ಅಂತಹ ಅಧಿಕಾರವು ಇದ್ದೇ ಇರುವದು; ಆದರೆ ಪುತ್ರನ ಮಸ್ತಕದ ಮೇಲಿನ ಸ್ನೇಹಮಯ ಛತ್ರವನ್ನು ನಾಶಗೊಳಿಸಿದ ನಿಮ್ಮಂತಹ ಪಾಷಾಣ ಹೃದಯಿಗಳಾದ ತಂದೆಗಳಿಗೆ ಆ ಅಧಿಕಾರವು ಲಭಿಸಲಾರದು."

ಮಯೂರಧ್ವಜನು ಚಕಿತನಾದನು! ಯಾರೋ ತನ್ನ ಹೃದಯದ ಮೇಲೆ ಕುಠಾರಾಘಾತ ಮಾಡಿದಂತೆ ಅವನಿಗೆ ಭಾಸವಾಯಿತು ಅನೇಕ ವಿಧದ ಕ್ಲೇಶಗಳಿಂದ ಅವನು ಜರ್ಜರಿತನಾಗಹತ್ತಿದನು. ಮತ್ತೆ ಕೆಲವು ವೇಳೆಯ ಮೇಲೆ ಸ್ಥೈರ್ಯ ಹೊಂದಿ:—"ಕುಮಾರಾ, ನಾನು ನನ್ನ ಕರ್ತವ್ಯ ಮಾಡಿದೆನು ಕರ್ತವ್ಯಕ್ಕಾಗಿ ಬಂಧುವಾತ್ಸಲ್ಯವನ್ನು ಬದಿಗಿರಿಸಬೇಕೆಂಬ ಪಾಠವನ್ನು ನನ್ನ ಸ್ವಾಮಿಭಕ್ತಿಯು ನನಗೆ ಕಲಿಸಿದ್ದರಿಂದ, ಹಾಗೆ ಮಾಡಬೇಕಾಯಿತು. ಮಗೂ, ಈ ಜಗತ್ತಿನಲ್ಲಿ ಕರ್ತವ್ಯಕ್ಕೆ ಎಲ್ಲ ಧರ್ಮಗಳಿಗಿಂತ ಅಗ್ರಸ್ಥಾನವಿದೆ."

"ಪಿತಾಜಿ, ಸ್ವಾಮಿನಿಷ್ಠೆಯ ಅಂಧಶ್ರದ್ಧೆಯಿಂದ ಅನೀತಿಯ ಕಾರ್ಯ ಮಾಡುವದಕ್ಕೆ ನಿಮಗೆ ಮುಕ್ತವಾಗಿರುವದೆಂಬಂತಾಯಿತು! ಕರ್ತವ್ಯವು ಉಚಿತವೋ ಅನುಚಿತವೋ ಎಂಬದನ್ನು ಪರಿಶೀಲಿಸದೆ, ಕೇವಲ ರಾಜನ ರಾಕ್ಷಸೀ ಲಹರಿಗೊಳಪಟ್ಟು, ಸ್ವಾಮಿಭಕ್ತಿಯ ಸೋಗಿನಿಂದ ನಿಮ್ಮಂತಹ ಸ್ವಜನವಿಘಾತಿಗಳು ರಾಷ್ಟ್ರವನ್ನೇ ಅಧೋಗತಿಗೆ ಮುಟ್ಟಿಸುವರೆಂಬದರಲ್ಲಿ ಸಂದೇಹವಿಲ್ಲ. ರಾಜಾಜ್ಞೆಯಿಂದ ಒಂದು ಹುಚ್ಚು ನಾಯಿಯು ಒಬ್ಬ ನಿರ್ದೋಷಿಯನ್ನು ಕಚ್ಚಹೋದರೆ, ಆ ನಾಯಿಯ ಕೃತ್ಯವು ಸ್ವಾಮಿನಿಷ್ಠೆಯ ದ್ಯೋತಕವೆನಿಸುವದೆ? ರಾಜನ ಆಜ್ಞೆಯು ನೀತಿಯದೋ ಅನೀತಿಯದೋ ಎಂಬದನ್ನು ಪರಿಶೀಲಿಸದೆ, ನಿಮ್ಮಂತಹ ಅಧಿಕೃತರು ಕುರಿಯಂತೆ ದುಮುಕ ತೊಡಗಿದರೆ, ರಾಷ್ಟ್ರಕ್ಕೆ ಸೌಖ್ಯವು ಹೇಗೆ ದೊರೆಯುವದು? ಕಾಕಾಸಾಹೇಬರೇ, ನೀವು ನಿಮ್ಮ ಬಂಧುವಿನ ಕೊರಳು ಕೊಯ್ದುದ್ದಕ್ಕೆ ಆ ಅನೀತಿಪರನಾದ ರಾಜನಿಂದ ನಿಮಗೆ ದೊರೆತ ಪಾರಿತೋಷಕವಾದರೂ ಏನು?"

"ರಣಮಲ್ಲ, ಕರ್ತವ್ಯಪಾಲನೆಯ ಆನಂದವೇ ಹೆಚ್ಚಿನ ಪಾರಿತೋಷಕ!"

"ಕಾಕಾಸಾಹೇಬರೇ, ನೀವು ನಿಮ್ಮ ವಿವೇಕವನ್ನು ಜಾಗ್ರತಪಡಿಸಿರಿ. ನಿರಪರಾಧಿಯಾದ ಬಂಧುವಿನ ಕತ್ತನ್ನು ಕತ್ತರಿಸುವದು ನಿಮ್ಮ ಕರ್ತವ್ಯವೇ ಹೇಗೆಂಬದನ್ನು ಚನ್ನಾಗಿ ವಿಚಾರಿಸಿರಿ. ನಿಮ್ಮ ಬಂಧುವು ಅಂತಹ ಅಪರಾಧ ವನ್ನೇನು ಮಾಡಿದ್ದನು? ನ್ಯಾಯುವಾಗಿ ವಿಚಾರಿಸಿದರೆ, ಆ ಶಿಕ್ಷೆಯು ನಿಮ್ಮ ಸ್ವಾಮಿಗೇ ದೊರೆಯಬೇಕಾಗಿತ್ತು. ವಿಷಯಲಾಲಸೆಗೋಸ್ಕರಾಗಿ, ಅನ್ಯರ ಪ್ರಣಯುಭಂಗ ಮಾಡುವ ರಾಜನ ಲಹರಿಗೆ ಸಿಲುಕಿ, ನೀವು ನಿರರ್ಥಕವಾಗಿ ಒಬ್ಬ ಪ್ರಭಾವಶಾಲಿಯಾದ ಕ್ಷತ್ರಿಯನ ಅಸುವನ್ನು ಹೀರಿದಿರಿ. ದೇವೀ ಕಲ್ಯಾಣಿಯು ರಾಣಾನಲ್ಲಿ ಅನುರಾಗವುಳ್ಳವಳಾಗಿದ್ದರೆ, ಜಲಸಮಾಧಿಯನ್ನು ಹೊಂದುತ್ತಿದ್ದಿಲ್ಲ. ನಿಮ್ಮ ರಾಣಾನೂ, ಅವನ ಲಹರಿಗೆ ಸಿಲುಕಿದ ನಿಮ್ಮಂತಹ ಅಧಿಕಾರಿಗಳೂ ನೀತಿವಿರೋಧವಾದ ಕೃತ್ಯಗಳನ್ನು ಮಾಡಿ ಏನ ಗಳಿಸುವಿರಿ? ಕಾಕಾಸಾಹೇಬ, ಸ್ವಾಮಿಭಕ್ತಿಯ ಮಧ್ಯಪ್ರಾಶನದಿಂದ ಉನ್ಮಾದಗೊಂಡ ನಿಮ್ಮ ಆತ್ಮವನ್ನು ಜಾಗ್ರತಪಡಿಸಿ ಅದನ್ನು ವಿಚಾರಿಸಿರಿ. ಬಂಧುವಿನ ಕೊಲೆ ಮಾಡಿದ ಕರ್ತವ್ಯಕ್ಕಾಗಿ ಅದಕ್ಕೆ ಏನು ಪ್ರಾಪ್ತವಾಗಿರುವದು? ಕರ್ತವ್ಯಪಾಲ ನೆಯ ಸಂತೋಷವೋ, ಬಂಧುವಧೆಯ ಪಶ್ಚಾತ್ತಾಪವೋ?"

ಮಯೂರಧ್ವಜನ ಅಂತಃಕರಣವು ದ್ರವಿಸಿತು. ದುಃಖವು ಹೃದಯ ವನ್ನು ತುಂಬಿ ಹೊರಸೂಸಹತ್ತಿತು. ಅಷ್ಟರಲ್ಲಿ ಜಗಮಲ್ಲನ ಮೂರ್ತಿಯು ಅವನ ಮುಂದೆ ನಿಂತು:-"ಭ್ರಾತೃವರ, ನೀವು ನನ್ನ ಕೊಲೆ ಮಾಡಿದ್ದು ಯಥಾ ಯೋಗ್ಯವು. ಸ್ವಾಮಿನಿಷ್ಠ ಹೃದಯಿಗಳಾದ ನಿಮಗೆ ಅದು ಕರ್ತವ್ಯವೇ ಆಗಿತ್ತು. ಅದಕ್ಕಾಗಿ ಖೇದಪಡುವ ಕಾರಣವಿಲ್ಲ" ಎಂದು ಹೇಳಿದಂತಾಯಿತು. ಆಗ ಅವನ ಮನಸ್ಸು ಸ್ಥೈರ್ಯಗೊಂಡಿತು. ರಣಮಲ್ಲನ ಮಾತಿಗೆ ಉತ್ತರ ಕೊಡದಿದ್ದರೆ ನನ್ನ ಹೃದಯದ ಶೈಥಿಲ್ಯವು ವ್ಯಕ್ತವಾಗುವದೆಂದು ತಿಳಿದು ಅವನು ಗಾಂಭೀರ್ಯದಿಂದ:-"ರಣಮಲ್ಲ, ಕರ್ತವ್ಯವೆಂದರೆ ಆತ್ಮತ್ಯಾ ಗವು. ಪ್ರಿಯವಸ್ತುವಿನ ಹಾಗು ತನ್ನ ಆತ್ಮದ ಬಲಿದಾನ ಮಾಡುವದರಲ್ಲಿಯೆ ಏಕನಿಷ್ಠ ಹೃದಯದ ಒರೆಯು ಹತ್ತುತ್ತಿರುತ್ತದೆ. ಕರ್ತವ್ಯಯಜ್ಞದಲ್ಲಿ ಆಗುವ ಬಲಿದಾನವು ಕರ್ತವ್ಯಭಾವನೆಯ ಪೋಷಣರೂಪವಾಗಿರುತ್ತದೆ."

'ಕಾಕಾಸಾಹೇಬ!' ರಣಮಲ್ಲನು ಉಚ್ಚಕಂಠದಿಂದ-"ಮನಸಿಗೆ ರುಚಿಸ ದಂತಹ ಮಾತಾಡಿದ್ದಕ್ಕೆ ಕ್ಷಮೆಯಿರಲಿ. ನೀವು ಕರ್ತವ್ಯ ಕರ್ತವ್ಯವೆಂದು ಅನು ಚಿತ ಕಾರ್ಯವನ್ನು ಮಾಡಲುಪಕ್ರಮಿಸಿರುವಿರಿ. ಎಲ್ಲಿ ನ್ಯಾಯ-ನೀತಿಗಳ ಲವಲೇಶವಾದರೂ ಇರುವದಿಲ್ಲವೊ, ವಿಚಾರ-ವಿವೇಕಗಳಿಗೆ ಅಸ್ಪದವಿರುವ ದಿಲ್ಲವೊ ಅಂಥಲ್ಲಿ ಜರುಗುವ ಕಾರ್ಯಗಳ ಬಗ್ಗೆ ನಿಷೇಧವನ್ನು ವ್ಯಕ್ತಪಡಿಸದೆ,

ಕೇವಲ ರಾಜಾಜ್ಞೆಯೆಂದು ಅಮಾನುಷ ಕರ್ಮರತರಾದರೆ, ಅವರಿಗೆ ಕರ್ತವ್ಯ ದಕ್ಷರೆಂದು ಅನ್ನಬಹುದೆ?"

"ಮಗೂ, ನಾನು ಸಾರಾಸಾರ ವಿಚಾರ ಮಾಡಿ, ನನಗೆ ಯೋಗ್ಯವೆನಿಸಿದ್ದನ್ನು ಮಾಡಿರುವೆನು. ಕರ್ತವ್ಯಪಾಲನೆ ಮಾಡುವಾಗ ಆಂತರಿಕ ವ್ಯಥೆಯನ್ನು ಸಹನ ಮಾಡಬೇಕಾಗುವದು. ನಾನು ನನ್ನ ಹೃದಯವನ್ನು ಶೀಳಿ ತೋರಿಸಲಿಕ್ಕೆ ಸಮರ್ಥನಾಗಿದ್ದರೆ, ಅದರಲ್ಲಿ ಬಂಧುಪ್ರೇಮದ ಸ್ಥಾಪನೆಯು ಹೇಗಾಗಿರುವದೆಂಬದು ನಿನ್ನ ನಿದರ್ಶನಕ್ಕೆ ಬರುತ್ತಿತ್ತು."

"ಅಸತ್ಯ ಸ್ವಾಮಿನಿಷ್ಠೆಯು ನಿಮ್ಮ ಹೃದಯವನ್ನು ಪ್ರವೇಶಿಸಿ, ನಿಮ್ಮಲ್ಲಿಯ ಮಿಕ್ಕ ಸದ್ಗುಣಗಳನ್ನು ಬಂಧನಕ್ಕೊಳಪಡಿಸಿರುವದು."

"ಸ್ವಾಮಿನಿಷ್ಠ ಸೇವಕರಿಗೆ ಉಳಿದ ಗುಣಗಳ ಅವಶ್ಯಕತೆಯಿಲ್ಲ."

"ಆದ್ದರಿಂದಲೇ ನಿಮ್ಮಿಂದ ಅನ್ಯಾಯವಾಗಿರುವದೆಂದು ಸಾರಿ ಸಾರಿ ಹೇಳುತ್ತೇನೆ."

"ಅನ್ಯಾಯವೆ? ಅನ್ಯಾಯವಾದರೆ ನೀನು ಅದರ ಪರಿಮಾರ್ಜನೆ ಮಾಡಲಿಕ್ಕೆ ಯತ್ನಿಸುವದಿಲ್ಲವೇಕೆ?"

"ಅದಕ್ಕಾಗಿಯೇ ನಾನು ಈಗ ಇಲ್ಲಿಗೆ ಬಂದೆನು; ಆದರೆ ದುರ್ದೈವವು ನನ್ನನ್ನು ರಾಣಾನ ಶಯನ ಮಂದಿರಕ್ಕೆ ಒಯ್ಯದೆ, ರಾಜಕುಮಾರಿಯ ಗೃಹಕ್ಕೆ ತಂದುಬಿಟ್ಟಿತು."

ಮಯೂರಧ್ವಜನು ವಿಸ್ಮಿತನಾದನು. ಇಂತಹ ಅಘೋರವಾದ ರಾತ್ರಿಯಲ್ಲಿ ರಣಮಲ್ಲನು ರಾಣಾನ ಕೊಲೆ ಮಾಡುವದಕ್ಕಾಗಿ ಬಂದಿರುವನೆಂಬದು ತಿಳಿದ ಕೂಡಲೆ ಅವನಲ್ಲಿ ಸಂತಾಪವು ಉದ್ವಿಗ್ನವಾಯಿತು. ಅಚ್ಚ ರಜಪುತನೆನಿಸಿಕೊಳ್ಳುವವನು ಹೀಗೆ ಗುಪ್ತಘಾತಕಿಯಾಗಲುಪಕ್ರಮಿಸಿದ್ದರಿಂದ, ಅವನಲ್ಲಿ ರಣಮಲ್ಲನ ವಿಷಯವಾಗಿ ಹುಟ್ಟಿದ ಮಮತೆಯು ಪೂರಾ ನಷ್ಟವಾಯಿತು. ಆಗ ಅವನು ತಿರಸ್ಕಾರ-ಸಂತಾಪಗಳಿಂದ:---"ಕುಲಕಲಂಕಾ! ನೀನು ಇಂತಹ ರಾತ್ರಿಯಲ್ಲಿ ನನ್ನ ಸ್ವಾಮಿಯ ಕೊಲೆ ಮಾಡ ಬಂದೆಯಾ?"

"ಕೊಲೆಗಲ್ಲ; ಕಾಕಾಸಾಹೇಬ! ಸೇಡಿಗಾಗಿ ಬಂದಿರುವೆನು!"

"ಹೀಗೆ ಕಳ್ಳನಂತೆ ರಾತ್ರಿಯಲ್ಲಿಯೇ ಸೇಡುತೀರಿಸಿಕೊಳ್ಳಬಂದೆಯಾ?"

"ಕಠೋರಕರ್ಮಕ್ಕಾಗಿ ಭಯಾನಕ ವಾತಾವರಣವೇ ಅನುಕೂಲವಾಗುತ್ತಿರುತ್ತದೆ."

ಮಯೂರಧ್ವಜನ ದೃಷ್ಟಿಯು ಧಿಃಕಾರದ ವೃಷ್ಟಿಯನ್ನು ಸುರಿಸುತ್ತಿತ್ತು. ರಣಮಲ್ಲನು ಕ್ಷುದ್ರವಿಚಾರಿಯಿರುವನೆಂದು ತಿಳಿದಿದ್ದರಿಂದ, ಅವನ ಮುಖವು

ತಿರಸ್ಕಾರಯುಕ್ತ ಹೃದಯದ ಕಳೆಯನ್ನು ತೋರಿಸುತ್ತಿತ್ತು. ಮಧ್ಯರಾತ್ರಿ ಯಲ್ಲಿ ಕಳ್ಳತನದಿಂದ ಕೊಲೆಮಾಡಬಂದ ರಣಮಲ್ಲನು ತನ್ನ ಬಂಧುವಾದ ವೀರ ಜಗಮಲ್ಲನ ಪುತ್ರನೆನಿಸಿಕೊಳ್ಳಲಿಕ್ಕೆ ಅರ್ಹನಲ್ಲ; ಎಂಬ ವಿಚಾರವು ಅವ ನಲ್ಲಿ ಹುಟ್ಟಿತು. ಆಗ ಅವನು ಕ್ರೋಧದಿಂದ:—“ರಜಪುತಧರ್ಮ ಸಂಹಾರಕ ರಣಮಲ್ಲ, ಹೀಗೆ ಗುಪ್ತರೀತಿಯಿಂದ ಯಾವ ರಜಪುತನಾದರೂ ಶತ್ರುವಧೆ ಮಾಡಲುದ್ಯುಕ್ತನಾದದ್ದನ್ನು ನೀನು ಕಂಡಿರುವೆಯಾ?

“ಕಾಕಾಸಾಹೇಬರೆ, ನಾನು ಹಾಗೆ ಗುಪ್ತರೀತಿಯಿಂದ ನಿಮ್ಮ ಸ್ವಾಮಿ ಯನ್ನು ವಧೆಮಾಡಲಿಕ್ಕೆ ಬಂದಿಲ್ಲ. ಅವನನ್ನು ಕೂಗಿ ಎಬ್ಬಿಸಿ, ದ್ವಂದ್ವಯುದ್ಧ ಮಾಡಬೇಕೆಂದು ಬಂದಿರುವೆನು. ನನ್ನ ವಿಷಯವಾಗಿ ನೀವು ವಿಪರೀತ ಕಲ್ಪನೆ ಮಾಡಿಕೊಂಡದ್ದು ತಪ್ಪಾಗಿರುವದು. ಶರಣುಬಂದು, ಪಾದಸನ್ನಿಧಿಯಲ್ಲಿ ಕೈ ಜೋಡಿಸಿ ಶಿರಬಾಗಿ ಕುಳಿತ ಬಂಧುವಿನ ಮೇಲೆ, ಕಣ್ಣು ಮುಚ್ಚಿಕೊಂಡು ಖಡ್ಗವನ್ನೆಸೆಯುವ ರಜಪುತನು ನಾನಿರುವದಿಲ್ಲ; ಅಂತಹರು ನನ್ನ ಕಾಕಾ ಸಾಹೇಬರೇ!”

ಮಯೂರಧ್ವಜನ ಆಂತರಿಕ ವ್ಯಥೆಯು ರಣಮಲ್ಲನ ಮಾರ್ಮಿಕ ಭಾಷಣದಿಂದ ದ್ವಿಗುಣಿಸಿತು; ಆದರೆ ಅವನು ತನ್ನ ಮನಸ್ಸಿನೊಳಗಿನ ಕಲ್ಪ- ನಾತೀತವಾದ ವೇದನೆಯನ್ನು ಹೊರಡಿಸದೆ, ಗಾಂಭೀರ್ಯದಿಂದ ರಣಮಲ್ಲ ನನ್ನು ಕುರಿತು—“ರಣಮಲ್ಲ, ನೀನು ಈ ಮಾಯಾವೀ ಸಂಸಾರದೊಳಗಿನ ಒಂದು ಕ್ಷುದ್ರ ವ್ಯಕ್ತಿಯಿರುವೆ. ಮಾಯೆಯಿಂದ ಭಿನ್ನವಾದ ಕರ್ತವ್ಯಭೂಮಿ ಯಲ್ಲಿ ಎಂದು ಪ್ರವೇಶಿಸುವಿಯೋ, ಆಗ ನಿನಗೆ ಕಾರ್ಯದ ಯೋಗ್ಯಾಯೋಗ್ಯ ಗಳ ನಿರ್ಣಯವಾಗುವದು. ಆಗಲಿ. ಈಗ ಈ ವಿಷಯದ ಚರ್ಚೆಯು ಬೇಕಾ ಗಿಲ್ಲ. ಈ ವೇಳೆಯಲ್ಲಿ ನಿನ್ನ ಇಚ್ಛೆಯೇನುಂಟು?”

“ನನ್ನ ಪಾಲಕ ಪಿತನ ಮೃತ್ಯುವಿನ ವಾರ್ತೆಯನ್ನು ಕೇಳಿದಾಗಿನಿಂದ ನನ್ನ ಮನಸ್ಸಿನಲ್ಲಿ ಯಾವ ಇಚ್ಛೆಯು ಉತ್ಪನ್ನವಾಗಿರುವದೋ, ಅದೇ ಇಚ್ಛೆ ಯು ಈ ಕ್ಷಣದ ವರೆಗೂ ಇರುವದು. ಆ ಇಚ್ಛೆಯು ನಿಮ್ಮ ಒಡೆಯನ ಬಿಸಿ ನೆತ್ತರದಿಂದಲೇ ತೃಪ್ತಿಯಾಗತಕ್ಕದ್ದಿದೆ.”

ರಣಮಲ್ಲನ ಮಾತುಗಳನ್ನು ಕೇಳಿ ಮಯೂರಧ್ವಜನು ಗಹಗಹಿಸಿ ನಕ್ಕು: “ಮಗೂ, ಈ ನಿನ್ನ ಇಚ್ಛೆಯು ನನ್ನ ದೇಹದಲ್ಲಿ ಜೀವವಿರುವಾಗ ಸಿದ್ಧಿಸಬಹುದೆಂದು ಕಲ್ಪಿಸಿರುವೆಯೇನು? ನನ್ನ ಅಸ್ತಿತ್ವವಿರುವವರೆಗೆ ನನ್ನ ಸ್ವಾಮಿಯ ಕೂದಲು ಸಹ ಕೊಂಕಿಸುವ ಎದೆಯು ಯಾವನದೂ ಅಲ್ಲ.”

“ನಾನು ಯಾವ ವಿಧದಿಂದಲಾದರೂ ರಾಣಾನ ಹೃದಯದಲ್ಲಿ ರಕ್ತ

ಪಿಪಾಸುವಾದ ನನ್ನೀ ಕೈಗತ್ತಿಯನ್ನು ಚುಚ್ಚಿಬಿಡುವೆನು." ಎಂದು ರಣಮಲ್ಲನು ಖಡ್ಗವನ್ನು ಹಿರಿದು, ಬಲಸ್ಯೆಯನ್ನೆತ್ತಿ ಗಂಭೀರತೆಯಿಂದ ನುಡಿದನು.

'ರಣಮಲ್ಲ!' ಮಯೂರಧ್ವಜನು ಅಷ್ಟೇ ಗಾಂಭೀರ್ಯದಿಂದ:-"ನಿನ್ನ ಮಾರ್ಗದಲ್ಲಿ ಸ್ವಾಮಿಭಕ್ತಿಯ ಪ್ರಚಂಡವಾದ ಗೋಡೆಯಿರುವದೆಂಬದನ್ನು ಲಕ್ಷ್ಯದಲ್ಲಿಡು. ಇಗೋ, ಈ ಗೋಡೆಯನ್ನು ಭೇದಿಸುವದು ನಿನ್ನ ಸಾಮರ್ಥ್ಯಕ್ಕೆ ಸಾಧ್ಯವಿದೆ?"

ಮಯೂರಧ್ವಜನು ರಣಮಲ್ಲನೆದುರಿಗೆ ನಿಂತು, ಅವನ ಮಾರ್ಗಕ್ಕೆ ಬಲವಾದ ಪ್ರತಿಬಂಧವನ್ನುಂಟು ಮಾಡಿದನು.

ತಂದೆಯ ಮೃತಿಯಿಂದ ಹುಚ್ಚಾದ ರಣಮಲ್ಲನು ಆಂತರಿಕ ಆವೇಶದಿಂದ ತನ ಎದುರಿನಲ್ಲಿ ಎದ್ದುಯಾಗಿದ್ದ ಸ್ವಾಮಿನಿಷ್ಠೆಯ ಪ್ರಚಂಡವಾದ ಗೋಡೆಯನ್ನು ಭೇದಿಸಬಹುದೆ?

---

## ಎರಡು ನಿಷ್ಠೆಗಳ ಹೋರಾಟ.

ಮಯೂರಧ್ವಜನು ತನ್ನ ಮಾರ್ಗದಲ್ಲಿ ಬಲವಾದ ಅಡ್ಡಿಯನ್ನುಂಟು ಮಾಡುವನೆಂಬದು ರಣಮಲ್ಲನಿಗೆ, ತಿಳಿಯಿತು. ರಾಣಾನ ರಕ್ತಪಾನ ಮಾಡಲು ಉತ್ಸುಕವಾದ ತನ್ನ ಗೆಲುವಿನ ಕತ್ತಿಗೆ ಮೊದಲು ಅವನ ಏಕನಿಷ್ಠ ಸೇನಾಪತಿಯ ಶೋಣಿತವನ್ನು ಹೀರುವ ಪ್ರಸಂಗವು ಬರುವದೆಂದು ಅವನು ಮನವರಿಕೆ ಮಾಡಿಕೊಂಡನು. ಅವನು ತನ್ನ ಖಡ್ಗವನ್ನು ಝಳಪಿಸುತ್ತ:—"ಕಾಕಾ ಸಾಹೇಬ, ತಂದೆಯ ಮೃತ್ಯುವಿನಿಂದ ಹುಚ್ಚನಾದ ಪುತ್ರನ ಆಂತರಿಕ ಆವೇಶದ ಭೂಕಂಪವು ಸ್ವಾಮಿನಿಷ್ಠೆಯ ಪ್ರಚಂಡವಾದ ಗೋಡೆಯನ್ನು ದ್ವಿಭಂಗಗೊಳಿಸಿ, ಕರ್ತವ್ಯವನ್ನು ಈಡೇರಿಸುವದೆಂದು ಖಂಡಿತವಾಗಿ ಹೇಳುವೆನು."

"ರಣಮಲ್ಲ, ಈ ಗೋಡೆಯು ಎಂತಹ ಪ್ರಚಂಡವಾದದ್ದೆಂಬದರ ಕಲ್ಪನೆಯು ನಿನಗಿಲ್ಲ. ಅಂತೆಯೆ ಹೀಗೆ ಮಾತಾಡುವೆ. ಇಚ್ಛೆಯಿದ್ದರೆ ಪರೀಕ್ಷೆ ಮಾಡಿ ನೋಡು. ನಿನ್ನ ಈ ಪಿತೃವಿನ ಸ್ವಾಮಿನಿಷ್ಠೆಯನ್ನು ಪರೀಕ್ಷಿಸುವಾಗಲೆ, ನಿನ್ನ ನಿಶ್ಚಯವು ಶಿಥಿಲವಾಗಿ ಹೋಗುವದು."

"ದೇಹದಲ್ಲಿ ಪ್ರಾಣವಿರುವವರೆಗೂ ನನ್ನ ನಿಶ್ಚಯವು ಶಿಥಿಲವಾಗುವದಿಲ್ಲ ರಾಣಾನ ಪ್ರಾಣವನ್ನು ಹಿರಿಯೇ ನಾನು ಮುಂದಿನ ಕೆಲಸ ಮಾಡತಕ್ಕವನು.'

"ರಣಮಲ್ಲ, ನಿನ್ನ ಈ ತಂದೆಯ ಸ್ವಾಮಿಭಕ್ತಿಯ ವಿಷಯವಾಗಿ ಚೆನ್ನಾಗಿ ಮನವರಿಕೆ ಮಾಡಿಕೊಂಡು ಕಾರ್ಯಪ್ರವೃತ್ತನಾಗು."

"ಕಾಕಾಸಾಹೇಬ, ನಿಮ್ಮ ಸ್ವಾಮಿನಿಷ್ಠೆಯ ಮದವನ್ನು ಇಳಿಸಿದ ಹೊರತು ನೀವು ಸತ್ಯವ್ರತರಾಗಲಾರಿರಿ."

"ಕಾಲತ್ರಯದಲ್ಲೂ ನನ್ನ ಸ್ವಾಮಿನಿಷ್ಠೆಯ ಪ್ರಶವು ಬೇರೆಯಾಗುವದಿಲ್ಲ. ಆದ್ದರಿಂದ ನೀನು ವಿಚಾರಿಸಿ ಕರ್ತವ್ಯದಲ್ಲಿ ತೊಡಗಬೇಕೆಂದು ಇನ್ನೊಮ್ಮೆ ಸೂಚಿಸುತ್ತೇನೆ."

"ನೀವು ಹೇಗೆ ಸ್ವಾಮಿನಿಷ್ಠರೋ, ಹಾಗೆಯೇ ನಾನು ಪಿತೃಭಕ್ತನಿರುವೆನು. ನನ್ನ ನಿಮ್ಮ ಸ್ವಭಾವದಲ್ಲಿ ಅಭ್ಯಂತರವು ಮಾತ್ರ ಉಂಟು. ನಿಮ್ಮ ನಿಷ್ಠೆಯು ಅಂಧವಾದದ್ದಿರುವದು; ಆದರೆ ನನ್ನ ಪಿತೃಭಕ್ತಿಯು ದಿವ್ಯದೃಷ್ಟಿಯದುಂಟು." ಎಂದು ರಣಮಲ್ಲನು ನುಡಿದು, ಕರ್ಕಶವಾಣಿಯಿಂದ:—"ಕಾಕಾಸಾಹೇಬ, ನೀವು ನನಗೆ ಹಾದಿಯನ್ನು ಕೊಡಿರಿ. ಇಷ್ಟು ವೇಳೆಯವರೆಗೆ ನಿರರ್ಥಕವಾಗಿ ಕಾಲವಿಲಂಬವಾಯಿತು ನಾನು ನಿಮ್ಮ ಪ್ರಭುವನ್ನು ಮೋಸದಿಂದ ಕೊಲ್ಲುವದಿಲ್ಲ ಅವನನ್ನು ಎಚ್ಚರಗೊಳಿಸಿ, ದ್ವಂದ್ವ ಯುದ್ಧವನ್ನು ಮಾಡುವೆನು. ಹೂಂ! ಬೇಗನೆ ಬದಿಗೆ ಸರಿಯಿರಿ"

ಮಯೂರಧ್ವಜನು ಅವನ ಎದುರಿಗೆ ನಿಂತಲ್ಲಿಯೆ ಸ್ಥಿರವಾಗಿ ನಿಂತು:-"ಕುಮಾರಾ, ನೀನು ರಾಣಾಜಿಯವರನ್ನು ದ್ವಂದ್ವದಲ್ಲಿ ವಧೆ ಮಾಡಿದೆಯೆಂದರೆ ನಾನು ನನ್ನ ಬಂಧುವಿನ ಕೊಲೆ ಮಾಡಿದ್ದರ ಸೇಡಿಗಾಗಿ ಅವರು ಕೊಲ್ಲಲ್ಪಟ್ಟಂತಾಗಿ, ಜಗತ್ತು ನನ್ನ ಮೇಲೆ ಅಪಕೀರ್ತಿ ಹೊರಿಸುವದು; ಮತ್ತು ರಾಣಾಜಿಯವರ ಪಾಲಿಗೂ ಅದರ ಭಾರವು ಬರುವದು."

"ಹಾಗೆಯೇ ಆಗಬೇಕೆಂದು ನನ್ನ ಇಚ್ಛೆಯಿದೆ."

"ನನ್ನ ಇಚ್ಛೆಯು ಮಾತ್ರ ಹಾಗೆ ಇರುವದಿಲ್ಲ. ನಮ್ಮ ವಂಶದೊಳಗಿನ ಕೊನೆಯ ವಂಶಜನು ಜೀವದಿಂದಿರುವವರೆಗೆ ಸ್ವಾಮಿಗೆ ಅಹಿತವನ್ನು ಮಾಡಗೊಡುವಂತಹ ಅಧಮರು ನಮ್ಮಲ್ಲಿ ಯಾರಿರುವರು?"

ಮಯೂರಧ್ವಜನು ಹೀಗೆ ನುಡಿದು, ತನ್ನ ಖಡ್ಗವನ್ನು ನೆಲಕ್ಕೆ ಚಲ್ಲಿ, ರಣಮಲ್ಲನ ಕಾಲಬಳಿಯಲ್ಲಿ ಕುಳಿತನು ಅನಂತರದಲ್ಲಿ ಅವನು:—"ಪ್ರಿಯ ಕುಮಾರ, ರಣಮಲ್ಲ, ನಾನು ನನ್ನ ಖಡ್ಗವನ್ನು ಬಿಸುಟಿರುವೆನು. ನಿನ್ನ ತಂದೆಯು ಹೇಗೆ ನನ್ನ ಸಮ್ಮುಖದಲ್ಲಿ ಕುಳಿತಿದ್ದನೋ, ಹಾಗೆಯೇ ನಾನು ಈಗ ಕುಳಿತುಕೊಂಡಿರುವೆನು. ನೀನು ನಿನ್ನ ಗೆಲವಿನ ಕತ್ತಿಯಿಂದ-ನಿನ್ನ ಪಿತೃದತ್ತವಾದ ವಿಜಯಿ ಖಡ್ಗದಿಂದ-ನನ್ನ ಶಿರಚ್ಛೇದನ ಮಾಡು. ನನ್ನನ್ನು ಸೇವಾಧರ್ಮದಿಂದ ಮುಕ್ತನನ್ನಾಗಿ ಮಾಡಿದ ಮೇಲೆ, ನೀನು ನನ್ನ ಸ್ವಾಮಿಯ ಮೇಲಿನ ಸೇಡನ್ನು ಬೇಕಾದ ಹಾಗೆ ತೀರಿಸಿಕೋ."

ರಣಮಲ್ಲನು ಸ್ತಂಭಿತನಾದನು. ಮಯೂರಧ್ವಜನು ಇಂತಹ ದೃಢ ತರದ ಸಾ ಮಿಭಕ್ತನೂ ನಿಶ್ಚಲಹೃದಯಿಯೂ ಕರ್ತವ್ಯದ ಆದರ್ಶವೂ ಆಗಿರುವ ನೆಂದು ಅವನು ಇದುವರೆಗೆ ತಿಳಿದಿದ್ದಿಲ್ಲ ಕೃಷ್ಣರಾತ್ರಿಯ ಭಯಾನಕತೆಯಲ್ಲಿ, ವೃಷ್ಟಿ-ವಿದ್ಯುಲ್ಲತೆಗಳ ಉನ್ಮಾದದಲ್ಲಿ, ಪ್ರಬಲ ಝಂಝಾವಾತದ ಸಮಯದಲ್ಲಿ, ರಾಜಕನ್ಯೆಯ ಶಯನಾಗಾರದಲ್ಲಿ ನಗದೇಶದ ಅದ್ವಿತೀಯ ವೀರಸೇನಾಪತಿಯು ಪುತ್ರನ ಪಸಸಾನ್ನಿಧ್ಯದಲ್ಲಿ ಕುಳಿತುಕೊಂಡಿದ್ದನು ಇಂತಹ ಆದರ್ಶವತ್ ಕರ್ತವ್ಯಪಾಲಕ ಶಲಿಯ ಮೇಲೆ ಖಡ್ಗಪ್ರಯೋಗ ಮಾಡಿದರೆ, ಈ ಕೃತ್ಯದ ಬಗ್ಗೆ ಜಗತ್ತು ತನ್ನನ್ನು ಹೀನನೆಂದು ಭಾವಿಸದಿರಲಾರದೆಂದು ರಣಮಲ್ಲನು ತಿಳಿದನು ಕಾಲಬಳಿಯಲ್ಲಿ ಮುಖವನ್ನು ಕೆಳಗೆ ಮಾಡಿ ಕುಳಿತ ತಂದೆಯನ್ನು ನೋಡಿದೊಡನೆಯೆ, ಅವನ ಕಲ್ಪನೆಯು ಒಂದು ಅದ್ಭುತ ಭಾವನೆಯಿಂದ ಸತೇಜವಾಯಿತು. ಕರ್ತವ್ಯದಿಂದ ಉತ್ಪನ್ನವಾದ ನಿರ್ಭಯತೆಯಿಂದ ನಿಶ್ಚಲ ಮನಸ್ಕನಾಗಿ ಕುಳಿತ ಮಯೂರಧ್ವಜನ ದೇಹದಿಂದ ವ್ಯತಪಿತೃವಾದ ಜಗ ಮಲ್ಲನ ಮೂರ್ತಿಯು ಹೊರಟು, ಅವನಿಗೆ ಸಂಕೇತ ಮಾಡುತ್ತಿರುವಂತೆ ಭಾಸ ವಾಯಿತು. ಯಾವ ಬಂಧುವು ದೇವಸಮಾನನೆಂದು ಭಾವಿಸಿ ಅವನ ಪಾದ ಗಳ ಮೇಲೆ ಮಸ್ತಕವಿರಿಸಿದ್ದೆನೋ, ಅಂಥವನ ಶಿರಚ್ಛೇದನ ಮಾಡುವದು ನಿನ್ನ ಕರ್ತವ್ಯವಲ್ಲವೆಂದು ಆ ಮೂರ್ತಿಯು ಹೇಳಿದಂತೆ ರಣಮಲ್ಲನಿಗೆ ತೋರಿತು. ಕೂಡಲೆ ರಣಮಲ್ಲನು ಆ ಕಲ್ಪನಾ ಮೂರ್ತಿಗೆ.-'ನಾನು ಹೀನ ಕಾರ್ಯವನ್ನೆಂ ದಿಗೂ ಮಾಡುವದಿಲ್ಲ.' ಎಂದು ಕಲ್ಪನೆಯಲ್ಲಿಯೇ ಉತ್ತರವಿತ್ತನು. ಅನಂತರ ದಲ್ಲಿ ಆ ಮೂರ್ತಿಯು ಮಯೂರಧ್ವಜನ ದೇಹದಲ್ಲಿಯೇ ಅಂತರ್ಧಾನವಾ ಯಿತು! ಕೂಡಲೆ ಕನಸು ಕಂಡವರಂತೆ ರಣಮಲ್ಲನ ಸ್ಥಿತಿಯಾಯಿತು ಅವನು ತನ್ನ ಕಣ್ಣುಗಳನ್ನು ತಿಕ್ಕಿಕೊಂಡು, ತನ್ನ ತಂದೆಯ ಮೂರ್ತಿಯ ಆವೇಶದ ಬಗ್ಗೆ ವಿಚಾರ ಮಾಡತೊಡಗಿದನು. ಕೊನೆಗೆ ಅವನು ಏನನ್ನೋ ನಿರ್ಧರಿಸಿ ಕೊಂಡು, ಮಯೂರಧ್ವಜನನ್ನು ಕುರಿತು:-'ಕಾಕಾಸಾಹೇಬ, ನಿಃಶಸ್ತ್ರರಾಗಿ ಎದುರಿಗೆ ಕುಳಿತವರ ಮೇಲೆ ಖಡ್ಗಪ್ರಯೋಗ ಮಾಡುವಂತಹನು ನಾನಲ್ಲ. ನಿಮ್ಮೊಡನೆ ದ್ವಂದ್ವ ಯುದ್ಧ ಮಾಡಿ, ಸ್ವಾಮಿನಿಷ್ಠೆ-ಪಿತೃನಿಷ್ಠೆಗಳಲ್ಲಿ ಯಾವಾಗ ಯುದ್ಧವು ಪ್ರಾರಂಭವಾಗುವದೋ, ಆಗ ಯಾವದು ವಿಜಯಿಯಾಗುವದೆಂಬ ದನ್ನು ನಾನು ಜಗತ್ತಿನ ನಿದರ್ಶನಕ್ಕೆ ತಂದುಕೊಡುವೆನು. ನಿಮ್ಮನ್ನು ಪೂಜ್ಯ ರೆಂದೂ ದೇವತಾಸಮಾನರೆಂದೂ ಭಾವಿಸಿ, ನನ್ನ ತಂದೆಯವರು ನಿಮ್ಮ ಚರಣ ಗಳ ಮೇಲೆ ಮಸ್ತಕವಿರಿಸಿದ್ದರಿಂದ ನನಗೂ ನೀವು ದೇವಾಧಿದೇವರೇ ಆಗಿರು ವಿರಿ. ಇಂತಹ ವಂದನೀಯ-ಪೂಜನೀಯ ಪಿತೃಗಳ ಮೇಲೆ ನಿಃಶಸ್ತ್ರಸ್ಥಿತಿಯಲ್ಲಿ

ನಾನು ಹೇಗೆ ಶಸ್ತ್ರಪ್ರಯೋಗ ಮಾಡಲಿ? ಆವಶ್ಯಕವೆನಿಸಿದರೆ ಇಂತಹ ಸಂದರ್ಭ ದಲ್ಲಿ ಆತ್ಮತ್ಯಾಗ ಮಾಡೇನು; ಆದರೆ ನಿಮ್ಮನ್ನು ಎಂದಿಗೂ ವಧಿಸಲಾರೆನು"

'ರಣಮಲ್ಲ,' ಮಯೂರಧ್ವಜನು ಮುಖವೆತ್ತಿ ನಿಶ್ಚಲತೆಯಿಂದಲೂ ಗಂಭೀರತೆಯಿಂದಲೂ:-"ಹಾಗಾದರೆ ರಾಣಾಜಿಯವರಿಗೆ ಲವಮಾತ್ರವಾದರೂ ಧಕ್ಕೆ ಹತ್ತುವ ಸಂಭವವಿಲ್ಲ. ಅವರ ಏಕನಿಷ್ಠ ಸೇನಾಪತಿಯು ಎಂದಿಗೆ ಇಹ ಲೋಕವನ್ನು ತ್ಯಜಿಸುವನೋ, ಅಂದು ಒಂದು ವೇಳೆ ಅವರಿಗೆ ನಿನ್ನಂತಹ ರಿಂದ ಅಕಲ್ಯಾಣವಾಗಬಹುದು."

'ತಂದೆಯವರೆ!' ರಣಮಲ್ಲನು ದೃಢತರವಾದ ವಾಣಿಯಿಂದ:-"ನೀವು ಜೀವಂತವಾಗಿರುತ್ತಲೆ ರಾಣಾನು ನನ್ನ ಕೈಯಿಂದ ಮೃತಿಹೊಂದುವನು. ಈ ಸಂಧಿಯಲ್ಲಿ ನೀವು ನನ್ನ ಕಾರ್ಯಕ್ಕೆ ಅಡ್ಡಿಯನ್ನುಂಟುಮಾಡಬಹುದು; ಆದರೂ ಮತ್ತೊಮ್ಮೆ ಹೊತ್ತು ಸಾಧಿಸಿ ನನ್ನ ಅಭೀಷ್ಟವನ್ನು ಕೊನೆಗಾಣಿಸಿ ಕೊಳ್ಳದೆ ಬಿಡುವದಿಲ್ಲ."

"ಆದರೆ ನೀನು ಇಲ್ಲಿಂದ ಬಿಡುಗಡೆಯಾಗಿ ಹೋದರೆ ಮಾತ್ರ ನಿನ್ನ ಅಭಿಲಾಷೆಯು ಈಡೇರಬಹುದು"

"ಬಿಡುಗಡೆಯಾಗದಿರಲಿಕ್ಕೆ ಏನಾಗಿದೆ?"

"ನೀನು ರಾಜಕನ್ಯೆಯ ಮಂದಿರಕ್ಕೆ ಕಳ್ಳನಂತೆ ಬಂದಿರುವೆ. ಆದ್ದರಿಂದ ನೀನು ಅಪರಾಧಿಯಾದೆ. ಕೈಯಲ್ಲಿ ಶಿಲುಕಿದ ಅಪರಾಧಿಯನ್ನು ಹಾಗೇ ಬಿಡುವ ದೆಂದರೆ, ನನ್ನಂತಹ ರಾಜನಿಷ್ಠ ಸೇವಕನಿಗೆ ದುಷ್ಕೀರ್ತಿಕಾರಕವು. ರಣಮಲ್ಲ, ನೀನು ನನ್ನ ಸೆರೆಯಾಳಾಗಿರುವೆ."

"ಇಲ್ಲ; ನಾನು ಎಂದಿಗೂ ಸೆರೆಯಾಳಾಗುವದಿಲ್ಲ"

"ಸೆರೆಯಾಳಾಗದಿದ್ದರೆ ನನ್ನನ್ನು ವಧೆಮಾಡಿಯೇ ಪಾರಾಗಬೇಕಾಗು ವದು. ಇದರ ಹೊರತು ನೀನು ಸುಖರೂಪವಾಗಿ ದಾಟಲಾರೆ."

ಈಗ ಮಾತ್ರ ರಣಮಲ್ಲನು ಒಳ್ಳೆಯ ತೊಂದರೆಯಲ್ಲಿ ಸಿಲುಕಿದನು! ರಾಣಾನ ಸೇಡು ತೀರಿಸಿಕೊಳ್ಳುವದು ಒಂದುಕಡೆಗೇ ಉಳಿದು, ಸೆರೆಯಾಳಾಗುವ ಪ್ರಸಂಗವು ತನ್ನ ಮೇಲೆಯೇ ಬಂದಿತೆಂದು ಅವನು ಯೋಚನೆಗೊಳಗಾದನು. ಪಾರಾಗಿ ಹೋಗಬೇಕೆಂದರೆ, ಸ್ವಾಮಿನಿಷ್ಠಸೇನಾಪತಿಯು ಬಲವಾದ ಅಡ್ಡಿಯು. ಅವನನ್ನು ಕೊಲ್ಲದೆ ಆ ಅಡ್ಡಿಯು ದೂರವಾಗುವಂತಿದ್ದಿಲ್ಲ. ಮುಂದೆ ಯಾವ ಯುಕ್ತಿಯನ್ನು ಯೋಚಿಸಬೇಕೆಂಬದೇ ರಣಮಲ್ಲನಿಗೆ ತಿಳಿಯದಾಯಿತು. ಅವನು ಬಹಳ ವೇಳೆಯ ವರೆಗೆ ವಿಚಾರಿಸಿದ ಮೇಲೆ ಮಯೂರಧ್ವಜನನ್ನು ಕುರಿತು:—"ಕಾಕಾಸಾಹೇಬ, ನೀವು ನನ್ನನ್ನು ಸೆರೆಹಿಡಿಯಲಾರಿರಿ. ನಾನು

ರಾಣಾನ ಮೇಲಿನ ಸೇಡು ತಿರಿಸಿಕೊಳ್ಳುವದಕ್ಕಾಗಿ ಹೇಗಾದರೂ ಮಾಡಿ ಪಾರಾಗಿ ಹೋಗಲಿಕ್ಕೇಬೇಕು. ಆ ಭಿತ್ತಿವಾತಾಯನದ ಮಾರ್ಗವಾಗಿ ನಾನು ಹಾರಿ ಹೋಗುವೆನು. ಸಾಮರ್ಥ್ಯವಿದ್ದರೆ ನನ್ನನ್ನು ಹಿಡಿಯಿರಿ."

"ಅಂಜುಬುರುಕಾ, ತಂದೆಯ ಕೀರ್ತಿಗೆ ಕಲಂಕ ಹಚ್ಚುವ ಹಾಗು ರಜಪುತರ ಶೀಲಕ್ಕೆ ಭಂಗವನ್ನುಂಟುಮಾಡುವ ಹೇಡಿತನದ ಶೌರ್ಯ ಮಾಡುವವನಾದ ನಿನ್ನನ್ನು ವೀರ ರಜಪುತನೆಂದು ಅದಾರು ಅನ್ನುವರು? ನೀನು ಜಾತಿವಂತ ವೀರನಿದ್ದು, ಹೀಗೆ ಓಡಿಹೋಗುವ ಯೋಚನೆ ತೆಗೆಯಬಹುದೆ? ನೀನು ನಿನ್ನ ವೀರಮಾತೆಯನ್ನು ನಾಚಿಸುವೆ. ನಿನ್ನ ಸ್ವರ್ಗಸ್ಥ ಪಿತೃವಿನ ತಲೆಯನ್ನು ಕೆಳಗೆ ಮಾಡಹಚ್ಚುವೆ. ಖಡ್ಗವನ್ನು ಹಿಡಿದು ದ್ವಂದ್ವಯುದ್ಧ ಮಾಡು. ಜಯಶಾಲಿಯಾಗಿ ವಿಜಯನಿನಾದಗೆಯ್ಯುತ್ತ ಹೊರಟು ಹೋಗು. ಕಳ್ಳನಂತೆ ಓಡಿಹೋಗಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೆ?"

ಹೀಗೆ ನುಡಿದವನೇ ಮಯೂರಧ್ವಜನು ಕೆಳಗೆ ಬಿದ್ದ ಖಡ್ಗವನ್ನು ಹಿರಿದು, ವಾತಾವರಣದಲ್ಲಿ ಗರಗರನೆ ತಿರುವಹತ್ತಿದನು.

ರಣಮಲ್ಲನಲ್ಲೂ ಆವೇಶವು ಉತ್ಪನ್ನವಾಯಿತು. ಅಚ್ಚ ರಜಪುತ ರಕ್ತವು ಅವನ ಧಮನಿಗಳಲ್ಲಿ ಹರಿಯುತ್ತಿತ್ತು. ಅದು ವೀರಶ್ರೀಯೊಡನೆ ಯುಕ್ತವಾಗಿ ಮತ್ತಿಷ್ಟು ವೇಗದಿಂದ ಹರಿಯತೊಡಗಿತು. ಕೂಡಲೆ ಅವನು ಒರೆಯಿಂದ ಕತ್ತಿಯನ್ನು ಹಿರಿದು:-- "ಕಾಕಾಸಾಹೇಬ, ಈ ಕ್ಷತ್ರಿಯ ವೀರನ ಕೈಯನ್ನು ಚನ್ನಾಗಿ ನೋಡಿರಿ."

ಕ್ಷಣಾರ್ಧದಲ್ಲಿ ಇಬ್ಬರೂ ವೀರರು ದ್ವಂದ್ವಯುದ್ಧವನ್ನು ನಡೆಸಿದರು. ರಾಜಕುವರಿಯ ಶಯನಮಂದಿರವು ಆ ವೀರರ ಸಮರಭೂಮಿಯಾಯಿತು!

ಹೊರಗಿನ ವಾತಾವರಣದಲ್ಲಿ ವಿದ್ಯುಲ್ಲತೆಯು ಲಕಲಕಿಸುತ್ತಿರುವಂತೆ ರಾಜನಂದಿನಿಯ ಶಯನಮಂದಿರದಲ್ಲಿ ಆ ವೀರರ ಖಡ್ಗಗಳು ಲಕಲಕಿಸುತ್ತಿದ್ದವು. ಹೊರಗೆ ವಿದ್ಯುಲ್ಲತೆಯಿಂದ ಅಗ್ನಿವರ್ಷಣವಾಗುತ್ತಿರುವಂತೆ ಅಲ್ಲಿ ಖಡ್ಗಸಂಘರ್ಷಣದಿಂದ ಅಗ್ನಿಕಣಗಳು ಹೊರಬೀಳುತ್ತಿರುವಂತೆ ದೃಗ್ಗೋಚರವಾಯಿತು.

ಇಬ್ಬರೂ ಶೂರರು ಬಲಾಢ್ಯರು. ಒಬ್ಬರು ಮತ್ತೊಬ್ಬರಿಗಿಂತ ಯಾವ ವಿಷಯದಲ್ಲಿಯೂ ಕಡಿಮೆಯಿದ್ದಿಲ್ಲ. ಇಬ್ಬರೂ ಹಿಂಜರಿಯದೆ ದ್ವಂದ್ವಯುದ್ಧ ಮಾಡತೊಡಗಿದ್ದರು. ಯುದ್ಧದ ಪರಿಣಾಮವು ಅನಿಶ್ಚಿತವಿತ್ತು. ಇಬ್ಬರೂ ಪರಿಣಾಮವನ್ನು ತಿಳಿದುಕೊಳ್ಳಲಿಕ್ಕೆ ತತ್ಪರರೂ ಆತುರರೂ ಆಗಿದ್ದರು. ಆ ಇಬ್ಬರಲ್ಲಿ ಒಬ್ಬನು ಕರ್ತವ್ಯವೇದಿಕೆಯ ಮೇಲೆ ತನ್ನ ಆತ್ಮಾಹುತಿ ಕೊಡಲಿಕ್ಕೆ ಸಿದ್ಧನಾಗಿದ್ದನು; ಮತ್ತೊಬ್ಬನು ಸ್ವರ್ಗೀಯ ಪಿತೃವಿನ ಆತ್ಮಶಾಂತಿಗಾಗಿ ಆತ್ಮ

ಬಲಿದಾನ ಮಾಡಲುದ್ಯುಕ್ತನಾಗಿದ್ದನು. ಒಬ್ಬನ ಖಡ್ಗದಲ್ಲಿ ಸ್ವಾಮಿಭಕ್ತಿಯು ಬಲವೂ ಮತ್ತೊಬ್ಬನ ಖಡ್ಗದಲ್ಲಿ ಪಿತೃಭಕ್ತಿಯ ಶಕ್ತಿಯೂ ಸಮ್ಮಿಲಿತವಾಗಿದ್ದುವು; ಸ್ವಾಮಿನಿಷ್ಠೆ-ಪಿತೃನಿಷ್ಠೆಗಳ ಹೋರಾಟದಲ್ಲಿ ಯಾವದು ವಿಜಯಿಯಾಗುವದೆಂಬದನ್ನು ತಿಳಿದುಕೊಳ್ಳಲಿಕ್ಕೆ ಆ ವೀರರು ಆತುರರಾಗಿದ್ದರು.

ಇಬ್ಬರೂ ವೀರರು ಅತುಲನೀಯ ಶಕ್ತಿಯಿಂದ ಕಾದುತ್ತಿರುವಾಗ ರಣಮಲ್ಲನ ಖಡ್ಗದ ಪ್ರಚಂಡ ಆಘಾತದಿಂದ ಮಯೂರಧ್ವಜನ ಖಡ್ಗವು ದೂರ ಸಿಡಿದು ಬಿತ್ತು. ಕೂಡಲೆ ರಣಮಲ್ಲನು ವಿಲಂಬ ಮಾಡದೆ ಪ್ರತಿಪಕ್ಷಿಯ ಮೇಲೇರಿ ಹೋಗಿ, ಅವನ ದೇಹಕ್ಕೆ ಬಲವಾಗಿ ಆಘಾತ ಮಾಡಿದನು. ಆ ಕೂಡಲೆ ಮಯೂರಧ್ವಜನು ಭೂಮಿಗೆ ಬಿದ್ದನು. ರಣಮಲ್ಲನು ಅವನ ಎದೆಯ ಮೇಲೆ ಆರೂಢನಾಗಿ:—"ಕಾಕಾಸಾಹೇಬ, ಪಿತೃಭಕ್ತಿ-ಸ್ವಾಮಿಭಕ್ತಿಗಳಲ್ಲಿ ಯಾವದು ವರಿಷ್ಠವೆಂಬದರ ಮನವರಿಕೆ ಮಾಡಿಕೊಂಡಿರಾ? ಸ್ವಾಮಿಭಕ್ತಿಗೆ ವಿಜಯವು ದೊರೆಯಬೇಕಾಗಿತ್ತು; ಆದರೆ ನಿಮ್ಮ ಸ್ವಾಮಿನಿಷ್ಠೆಯು ಅಂಥವಿರುವದು ಅದಕ್ಕೆ ನ್ಯಾಯಾನ್ಯಾಯಗಳ ಪರೀಕ್ಷೆಯಿಲ್ಲ. ಅಂತೆಯೇ ನೋಡಿರಿ, ಅದು ಹೇಗೆ ಧರಾಶಾಯಿಯಾಗಿರುವದು! ಇನ್ನಾದರೂ ನನ್ನನ್ನು ಹೋಗಗೊಡುವಿರೋ, ಮೃತ್ಯುವಿನ ಅಪೇಕ್ಷೆ ಮಾಡುವಿರೊ?"

"ರಣಮಲ್ಲ, ನಾನು ಮರಣವನ್ನಿಚ್ಛಿಸುವೆನು. ನಾನು ಜೀವದಿಂದಿರುವ ವರೆಗೆ ಸೇವಾಧರ್ಮವು ಲೋಪವಾಗಲಾರದು."

"ಶಾಬಾಸ! ಸೇನಾಪತಿ, ಶಾಬಾಸ!!"

ಮಂದಿರದ ಬಾಗಿಲವು ತೆರೆಯಲ್ಪಟ್ಟಿತು. ಮೇಲಿನಂತೆ ಉದ್ಗಾರ ತೆಗೆಯುತ್ತ, ರಾಣಾ ರಾಯಸಿಂಗನು ಆರು ಜನ ಅಂಗರಕ್ಷಕರೊಡನೆ ಮಂದಿರವನ್ನು ಪ್ರವೇಶಿಸಿದನು.

---

## ಅತ್ಯಾಚಾರವಲ್ಲ, ಪ್ರತೀಕಾರವು!

ರಣಮಲ್ಲನು ಯಾವ ವ್ಯಕ್ತಿಗಾಗಿ ರಾತ್ರಿಯ ಭೀಷಣ ವಾತಾವರಣದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸಿ ರಾಜಮಂದಿರಕ್ಕೆ ಬಂದಿದ್ದನೋ, ಆ ವ್ಯಕ್ತಿಯಾದ ರಾಣಾ ರಾಯಸಿಂಹನೇ ಅವನ ಮುಂದೆ ಬಂದು ನಿಂತಿದ್ದನು. ಅನೀತಿಯಿಂದ ತನ್ನ ತಂದೆಯ ಕೊಲೆ ಮಾಡಿಸಿದ ರಾಣಾನನ್ನು ನೋಡಿದೊಡನೆಯೇ, ರಣಮಲ್ಲನಿಗೆ ತನ್ನ ಜೀವನದ ಧ್ಯೇಯವು ಅಕಸ್ಮಾತ್ತಾಗಿ ಮೂರ್ತಸ್ವರೂಪಕ್ಕೆ ಬಂದಂತಾಯಿತು. ಇಚ್ಛಾಸಿದ್ಧಿಯ ಒಂದು ವಿರಲವಾದ ರಣನಾದವು

ಕರ್ಣರಂಧ್ರವನ್ನು ಪ್ರವೇಶಿಸಿ, ಮೆಲ್ಲಮೆಲ್ಲನೆ ಹೆಚ್ಚು ಹೆಚ್ಚು ತೇಜವುಳ್ಳದ್ದಾಗ ತೊಡಗಿತು. ಕೂಡಲೆ ಆ ಪಿತೃಭಕ್ತನ ಧಮನಿಗಳಲ್ಲಿ ಶೋಣಿತವು ಒತ್ತರ ದಿಂದ ಹರಿಯಲಾರಂಭಿಸಿತು. ಆಗ ಅವನು ತ್ವೇಷದಿಂದ:—"ಯಾರು! ರಾಯಸಿಂಹನೇ? ಸಾಕು. ನಿನ್ನ ಪ್ರಾಣ, ನನ್ನ ಸೇಡು! ಸೇಡಿಗೆ ಸೇಡು! ನಗ ದೇಶದ ರಾಜಾಧಿರಾಜಾ, ಖಡ್ಗವನ್ನು ಒರೆಯಿಂದ ಹಿರಿ. ಸತ್ಯಾಸತ್ಯಗಳ ದ್ವಂದ್ವವು ಪ್ರಾರಂಭವಾಗಲಿ!"

ರಾಯಸಿಂಹನು ಗಹಗಹಿಸಿ ನಕ್ಕನು. ಅವನ ಹಾಸ್ಯದಲ್ಲಿ ನಿಶ್ಚಿಂತತೆ, ತಿರಸ್ಕಾರ, ಶುಷ್ಕ ರಾಜಗೌರವ ಮೊದಲಾದ ಲಕ್ಷಣಗಳು ಅಡಗಿದ್ದವು. ಆಗ ಅವನು ಗರ್ಜಿಸುತ್ತ:—"ಮೂರ್ಖ ಬಾಲಕಾ, ನೀನು ಇನ್ನೂ ಅಜ್ಞನಿರುವೆ. ಜೀವನದ ಬೆಲೆಯು ನಿನಗೆ ಇನ್ನೂ ತಿಳಿದಿಲ್ಲ. ಮೊದಲು ಜೀವನದ ಬೆಲೆ ಯೇನಿರುವುದೆಂಬದನ್ನು ಕಲಿ. ನೀನು ಇಂತಹ ರಾತ್ರಿಯಲ್ಲಿ ರಾಜಮಂದಿರ ವನ್ನು ಪ್ರವೇಶಿಸಿದ್ದು ಮೂರ್ಖತನವಲ್ಲವೆ?"

"ರಾಣಾ, ನಾನು ಮೂರ್ಖತನ ಮಾಡಿಲ್ಲ; ಜಾಣತನವನ್ನೇ ಮಾಡಿರು ವೆನು. ವಿಷಯಲಂಪಟನಾದ ರಾಣಾ, ಜೀವನದ ಬೆಲೆಯನ್ನು ಕಟ್ಟುತ್ತ ಕರ್ತವ್ಯವನ್ನು ದುರ್ಲಕ್ಷಿಸುವದು, ಸ್ವಾರ್ಥಕ್ಕಾಗಿ ಅನ್ಯರಿಂದ ನಿರ್ದೋ ಷಿಯ ಕೊಲೆ ಮಾಡಹಚ್ಚುವದು ನಿನ್ನಂತಹನಿಗೇ ಶೋಭಿಸುವದು. ನೀನು ನೀತಿವಂತ ಕ್ಷತ್ರಿಯನಲ್ಲ. ಹಾಗಿದ್ದರೆ ಜೀವನಕ್ಕೆ ಇಷ್ಟು ಮಹತ್ವ ಕೊಡು ತ್ತಿದ್ದಿಲ್ಲ. ಯಾವ ಜಾತಿವಂತ ಕ್ಷತ್ರಿಯನು ಜೀವದ ವ್ಯಾಮೋಹದಿಂದ ನೀತಿಚ್ಯುತನಾಗಿರುವನು? ಕರ್ತವ್ಯಭ್ರಷ್ಟನಾಗಿರುವನು? ಸಮುದ್ರದ ಒಂದು ಪ್ರಚಂಡ ತರಂಗವು ನಿಸರ್ಗವನ್ನು ಅಲ್ಲೋಲ-ಕಲ್ಲೋಲ ಮಾಡುವ ಅದ್ಭುತವಾದ ವಾತಲಹರಿಯು, ಜ್ವಾಜ್ವಲ್ಯಮಾನವಾದ ಒಂದು ಅಗ್ನಿಶಿಖೆಯು ಆ ಜೀವನವನ್ನು ತತ್ಕಾಲ ನಾಶ ಮಾಡುವವು. ಅಂದಮೇಲೆ ಜೀವನದ ಬೆಲೆ ಯೇನು? ಕ್ಷತ್ರಿಯನಿಗೆ ಜೀವನವೆಂದರೆ ವಿದ್ಯುಲ್ಲತೆಯ ಒಂದೇ ಒಂದು ಮಿಂಚು. ಮಿಂಚಿನ ಮಿಂಚಿನಂತೆ, ನೀರಮೇಲಿನ ಗುಳ್ಳೆಯಂತೆ ಕ್ಷಣಿಕವಾದ ಈ ಜೀವ ನಕ್ಕೆ ಬೆಲೆ ಬರಬೇಕಾದರೆ, ಅದು ತನ್ನ ಕರ್ತವ್ಯ ಮಾಡಿದ ಮೇಲಲ್ಲವೆ? ಇದು ಲಬ್ಧಕೀರ್ತಿಪ್ರತಿಷ್ಠಿತರ ಮಾತು; ಆದರೆ ವೈಷಯಿಕ ವ್ಯಾಮೋಹದಲ್ಲಿ ಲೀನ ರಾಗಿ, ಅಂಧಸ್ವಾಮಿಭಕ್ತರ ಕೈಯಿಂದ ಅನ್ಯಾಯ ಮಾಡಿಸುತ್ತ, ಸುಖ ಲೋಲುಪರಾದ ದುಷ್ಕೀರ್ತಿಯುತರಿಗೆ ಕರ್ತವ್ಯಾಕರ್ತವ್ಯಗಳ ಜ್ಞಾನವೆಲ್ಲಿ? ಅಂತಹರಿಗೆ ಜೀವನವೆಂದರೆ, ವಿಶ್ವದ ಬೆಲೆಯಂತೆ ತೋರುತ್ತಿರಬಹುದು. ರಾಣಾ, ನೀನಾದರೂ ಅದೇ ಮಾಲಿಕೆಯೊಳಗಿನ ಮಣಿಯಾಗಿರುವೆಯಲ್ಲವೆ?"

"ರಣಮಲ್ಲ!" ರಾಣಾನು ಹುಬ್ಬು ಏರಿಸಿ:—"ಹಾಗಾದರೆ ನೀನು ಸಾಯಲಿಕ್ಕೆ ಬಂದಿರುವೆ!"

"ಸಾಯಲಿಕ್ಕೆ ಬಂದಿರುವೆನೋ, ಕೊಲ್ಲಲಿಕ್ಕೆಬಂದಿರುವೆನೋ? ಎಂಬದು ಪರಿಣಾಮಾಂತ್ಯದಲ್ಲೆ ತಿಳಿಯುವದು."

"ರಣಮಲ್ಲ, ಅದು ಪರಿಣಾಮಾಂತ್ಯದಲ್ಲಿಯೇ ತಿಳಿಯಲೊಲ್ಲದೇಕೆ. ನೀನು ಯಾವ ಜೀವನಕ್ಕೆ ಬೆಲೆ ಕೊಡುವೆ?"

"ಕರ್ತವ್ಯನಿರತವಾದ ಹಾಗು ನೀತಿಪರಿಪ್ಲುತವಾದ ಜೀವನವೇ ಬೆಲೆಯುಳ್ಳದ್ದು."

"ಪ್ರಾಣವು ಸಂಕಟದಲ್ಲಿ ಬಿದ್ದಾಗ ಎಲ್ಲಿಯ ಕರ್ತವ್ಯವು? ಎಲ್ಲಿಯ ನೀತಿಯು?"

"ಸಂಕಟಕಾಲದಲ್ಲಿಯೇ ಮನುಷ್ಯನ ಒರೆಹತ್ತುತ್ತಿರುವದು."

"ಇಂತಹ ನೀತಿವಂತನಾದ ನೀನು ಕಳ್ಳನಂತೆ ಮಧ್ಯರಾತ್ರಿಯಲ್ಲಿ ರಾಜಮಂದಿರವನ್ನು ಪ್ರವೇಶಿಸಿದೆಯೇಕೆ?"

"ನಾನು ಕಳ್ಳನಂತೆ ಗುಪ್ತರೀತಿಯಿಂದ ನಿನ್ನ ವಧೆಮಾಡಬಂದಿಲ್ಲ; ನಿನ್ನನ್ನು ಎಚ್ಚರಿಸಿ, ದ್ವಂದ್ವಯುದ್ಧ ಮಾಡಬೇಕೆಂದು ಬಂದಿರುವೆನು."

ರಾಣಾನು ಗಹಗಹಿಸಿ ನಕ್ಕು, ಉಪಹಾಸಾತ್ಮಕ ವಾಣಿಯಿಂದ:—"ಅಜ್ಞಬಾಲಕಾ, ನಾನು ನಿನ್ನ ತಂದೆಗಳಾದ ಮಯೂರಧ್ವಜರಂತೆ........"

"ಹಾಂ! ಜಾಗ್ರತೆ! ನನ್ನ ಕಕ್ಕಂದಿರು ನಿಜವಾದ ರಜಪುತರಿರುವರು! ಆದರ್ಶ ಸ್ವಾಮಿನಿಷ್ಠರಿರುವರು! ಅಂತಹರ ನಿರ್ಭರ್ತ್ಸನೆ ಮಾಡಿದರೆ, ನಿನ್ನ ಪರಿಣಾಮವು ಒಳಿತಾಗಲಾರದು."

"ಹಾಗಿದ್ದರೆ, ನೀನು ಇವರ ರಜಪೂತತ್ವಕ್ಕೆ ಹಾಗು ಆದರ್ಶ ಸ್ವಾಮಿ ಭಕ್ತಿಗೆ ಕುಂದು ತರುವ ಹೇಡಿ ಪುತ್ರನಿರುವೆ."

"ಹೇಡಿಯೆ? ನಾನು ಹೇಡಿಯೇ? ರಾಣಾ! ನನ್ನ ಪ್ರತಾಪವನ್ನು ನೋಡಿದರೆ, ನನಗೆ ಹೇಡಿಯೆಂದ ಬಗ್ಗೆ ನಿನಗೆ ಪಶ್ಚಾತ್ತಾಪವಾಗುವದು. ಬಾ, ಮುಂದೆ ಬಾ. ಯುದ್ಧಕ್ಕೆ ಸಿದ್ಧನಾಗು!" ಎಂದು ನುಡಿದು, ರಣಮಲ್ಲನು ತನ್ನ ಖಡ್ಗವನ್ನು ಗರಗರನೆ ತಿರುವಿದನು.

ರಾಣಾಜಿಯು ಮತ್ತೆ ಗಹಗಹಿಸಿ ನಕ್ಕನು.

"ರಾಣಾ, ಸುಮ್ಮನೆ ನಗುತ್ತ ನಿಂತೆಯೇಕೆ? ಬೇಗನೆ ಯುದ್ಧಕ್ಕೆ ಬಾ."

ರಾಣಾನು ನಿಂತಸ್ಥಳದಲ್ಲಿಯೇ ನಿಂತು, ರಣಮಲ್ಲನ ಮುಖವನ್ನು ನೋಡುತ್ತ ನಿರ್ಭಯದಿಂದ ಮತ್ತಿಷ್ಟು ನಗತೊಡಗಿದನು.

"ನಗದೇಶದ ರಾಣಾನು ಇಷ್ಟು ಕ್ಷುದ್ರ ಹೇಡಿಯಿರುವನೆಂಬದು ಇದು ವರೆಗೆ ನನಗೆ ತಿಳಿದಿದ್ದಿಲ್ಲ. ಖಡ್ಗವನ್ನು ಹಿರಿಯುವೆಯೋ, ಪ್ರಾಣವನ್ನು ಹೀರಲೊ?" ರಣಮಲ್ಲನು ಧಿಃಕಾರಪೂರ್ವಕವಾಗಿ ಗರ್ಜಿಸಿದನು.

ಆದರೂ ಅದೇ ಹಾಸ್ಯವು, ಅದೇ ನಿರ್ಭಯತೆಯು, ಅದೇ ನಿಶ್ಚಿಂತತೆಯು, ಅದೇ ದೃಢತೆಯು! ರಾಣಾನು ನಿಂತ ಸ್ಥಳದಿಂದ ಮಿಸುಕಲಿಲ್ಲ.

"ಇದೇ ಏನು ವೀರತ್ವವು? ನಗದೇಶದ ರಾಜವಂಶದಲ್ಲಿ ಇಂತಹ ವೃತ್ತಿಗೇ ವೀರತ್ವವೆಂದು ಸಂಬೋಧಿಸುವರೇನು?"

"ರಣಮಲ್ಲ, ನಿಷ್ಫಲವಾದ ವೀರತ್ವದಿಂದ ಪ್ರಯೋಜನವೇನು? ಕಾರ್ಯವನ್ನು ಕೊನೆಗಾಣಿಸಿಕೊಳ್ಳುವಂತಹ ತಂತ್ರವೇ ವೀರತ್ವವು"

"ಹಾಗಾದರೆ ಸತೀ ಕಲ್ಯಾಣಿಯ ಶೀಲಹರಣ, ವೀರ ಜಗಮಲ್ಲರ ಪ್ರಾಣಹರಣಗಳನ್ನು ಮಾಡುವದರಲ್ಲಿ ನೀನು ತೋರಿಸಿದ ಪ್ರತಾಪಕ್ಕೇ ವೀರತ್ವವೆಂದೆನ್ನಬೇಕಾಯಿತು."

"ರಣಮಲ್ಲ, ನೀನು ಉನ್ಮತ್ತನಿರುವೆ. ನಿನ್ನ ಈ ಉದ್ಧತತನಕ್ಕೆ ಪ್ರಾಯಶ್ಚಿತ್ತವನ್ನು ವಿಧಿಸಲೇಬೇಕು."

ರಾಣಾನು ಬಚ್ಚಿಟ್ಟ ಕೈ ತುಬಾಕಿಯನ್ನು ಹೊರಗೆ ತೆಗೆದನು. ರಣಮಲ್ಲನು ರಾಣಾನ ಕೈಯೊಳಗಿನ ತುಬಾಕಿಯ ಕಡೆಗೆ ನೋಡಹತ್ತಿದನು. ಆ ತುಬಾಕಿಯಲ್ಲಿ ರಣಮಲ್ಲನ ಮೃತ್ಯುವು ಗುಂಡಿನ ಸ್ವರೂಪದಿಂದ ಕುಳಿತು ಕೊಂಡಿತ್ತು.

ತಂದೆಯ ಮರಣದ ಸೇಡು ತೀರಿಸಿಕೊಳ್ಳಬೇಕೆಂದು ತಾನು ಮಾಡಿದ ಪ್ರತಿಜ್ಞೆಯು ಈಡೇರದೆ, ತಾನೇ ಮೃತ್ಯುಮುಖದಲ್ಲಿ ಬೀಳಬೇಕಾದ ಪ್ರಸಂಗವು ಬಂದಿತೆಂಬದು ರಣಮಲ್ಲನಿಗೆ ತಿಳಿದೊಡನೆಯೇ ಆತನ ಹೃದಯವು ತಳಮಳಿಸಹತ್ತಿತು.

ಮಯೂರಧ್ವಜನ ಮನಃಸ್ಥಿತಿಯಾದರೂ ವಿಚಿತ್ರವಾಗಿತ್ತು. ಮೃತ ಬಂಧುವಿನ ಪುತ್ರನಾದ ರಣಮಲ್ಲನ ದೀಪವು ಆರಿ ಹೋಗುವುದೆಲ್ಲಿಯೋ, ಎಂದು ಅವನು ದಿಙ್ಮೂಢನಾಗಿದ್ದನು.

'ವೀರರೆ!' ರಾಣಾನು ತನ್ನ ಸೈನಿಕರನ್ನು ಕುರಿತು:—"ನೀವು ಆರೂ ಜನರು ಈ ಸುಲಿಗೆಗಾರನ ಎದೆಗೆ ನಿಮ್ಮ ತುಬಾಕಿಗಳ ಗುರಿಯಿಡಿರಿ."

ಸೈನಿಕರು ರಾಜಾಜ್ಞೆಯಂತೆ ತಮ್ಮ ತುಬಾಕಿಗಳನ್ನು ರಣಮಲ್ಲನ ಎದೆಯ ಕಡೆಗೆ ಹಿಡಿದರು. ಕೂಡಲೆ ಮಯೂರಧ್ವಜನ ಅಂತಃಕರಣವು ಕಸವಿಸಿ ಪಡಹತ್ತಿತು. ತನ್ನ ಪುತ್ರನಿಗೆ ಜೀವದಾನ ಕೊಡುವ ಬಗ್ಗೆ ರಾಣಾನಿಗೆ

ವಿನಂತಿ ಮಾಡಿಕೊಳ್ಳಬೇಕೆಂದು ಹವಣಿಸಿದನು; ಆದರೆ ಅವನ ಮುಖದಿಂದ ಮಾತುಗಳೇ ಹೊರಡಲಿಲ್ಲ ಅವನ ಹೃದಯದ ತಳಮಳದೊಡನೆ ಅನೇಕ ವಿಧದ ಸಂಶಯವೂ ಹುಟ್ಟಿತು. ರಣಮಲ್ಲನಿಗೆ ಜೀವದಾನ ಕೊಡುವದಕ್ಕಾಗಿ ವಿನಂತಿ ಮಾಡಿಕೊಂಡರೆ ಅದು ವ್ಯರ್ಥವಾಗಬಹುದೆ? ತನ್ನ ಸ್ವಾಮಿನಿಷ್ಠೆಯ ಮೂಲ್ಯದಲ್ಲಿ ಜೀವದಾನ ಬೇಡುವದು ಅನುಚಿತವೆನಿಸಬಹುದೆ? ಮೊದಲಾದ ವಿಚಾರಗಳು ಅವನಲ್ಲಿ ಹುಟ್ಟಿದವು

ಹೊರಗಿನ ವಾತಾವರಣವು ಶಾಂತವಾಗಿತ್ತು. ಮೊದಲಿನ ಬಿರುಗಾಳಿಯೂ, ಮುಸಲಧಾರ ವೃಷ್ಟಿಯೂ, ಮಿಂಚೂ ಈಗ ಇದ್ದಿಲ್ಲ. ಹೊರಗಿನ ವಾತಾವರಣವು ಶಾಂತವಿದ್ದರೂ, ರಾಜಕುಮಾರಿಯ ಮಂದಿರದೊಳಗಿನ ವಾತಾವರಣವು ಪ್ರಕ್ಷುಬ್ಧವಾಗಿತ್ತು.. ಅದು ರಾಣಾನ ಕರ್ಕಶವಾಣಿಯಿಂದ ಅಶಾಂತಿಯನ್ನು ಹೊಂದಿತ್ತು.

"ನಾನು ಕೈಯೆತ್ತಿದೊಡನೆಯೇ ಎಲ್ಲರೂ ಒಮ್ಮೆಲೆ ಈ ಸುಲಿಗೆಗಾರನ ಎದೆಗೆ ಗುಂಡು ಹಾಕಿರಿ!" ಎಂದು ರಾಣಾನು ದರ್ಪೋಕ್ತಿಯಿಂದ ನುಡಿದು, ರಣಮಲ್ಲನ ಮುಖವನ್ನು ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸತೊಡಗಿದನು.

ಮಯೂರಧ್ವಜನ ಸರ್ವಾಂಗವು ಕಂಪಾಯಮಾನವಾಯಿತು!

ರಣಮಲ್ಲನು ಅವನ ಕಡೆಗೆ ತಿರಸ್ಕಾರದೃಷ್ಟಿಯಿಂದ ನೋಡಿ, ವ್ಯಂಗತೆಯ ಕರುಣಾಪೂರ್ಣ ಸ್ವರದಿಂದ:-"ಕಾಕಾಸಾಹೇಬರೆ, ನೋಡಿರಿ! ನಿಮ್ಮ ಕುರುಡ ಸ್ವಾಮಿಭಕ್ತಿಯ ಫಲವು ಹೇಗಿದೆ? ಚನ್ನಾಗಿ ನೋಡಿರಿ. ರಾಜಾಜ್ಞೆಯೇ ದೇವಾಜ್ಞೆಯೆಂದು ತಿಳಿದು, ಬಂಧುವಿನ ಕೊರಳ ಕೊಯ್ದು, ಅದ್ವಿತೀಯ ಕರ್ತವ್ಯಪ್ರಭಾವವನ್ನು ತೋರಿಸಿದ್ದರ ಅಮೌಲ್ಯ ಲಾಭವಿದು!"

ಮಯೂರಧ್ವಜನ ವಿಚಾರಶಕ್ತಿಯು ಕುಂಠಿತವಾಯಿತು. ಏಳೂ ತುಬಾಕಿಗಳ ನಾಳಗಳಲ್ಲಿ ಅವನ ಹೃದಯವೂ ಆತ್ಮವೂ ಲುಪ್ತವಾಗಿದ್ದವು. ಅವನು ಪಾಷಾಣ ಮೂರ್ತಿಯಂತೆ ನಿಂತುಕೊಂಡಿದ್ದನು. ಅಲ್ಲಿಯ ಪರಿಸ್ಥಿತಿಯಿಂದ ಅವನ ಬುದ್ಧಿಯು ಭ್ರಮೆಗೊಂಡಿತ್ತು.

"ಹೂಂ! ಮರಣಕ್ಕೆ ಸಿದ್ಧನಾಗು! ನೀನು ಇಹಲೋಕವನ್ನು ಬಿಡುವ ಮುಂಚಿತವಾಗಿ ನಿನ್ನ ಆರಾಧ್ಯದೈವತವನ್ನು ನೆನೆ!" ರಾಣಾನು ಉಚ್ಚಸ್ವರದಿಂದ ರಣಮಲ್ಲನಿಗೆ ಹೇಳಿದನು.

ಈಗ ರಣಮಲ್ಲನು ನಿರುಪಾಯನಾಗಿದ್ದನು ಏಳು ಜನ ತುಬಾಕಿಯವರ ಮುಂದೆ ನಿಂತವನಾದ ಅವನಿಗೆ ಆತ್ಮರಕ್ಷಣೆಗೆ ಮಾರ್ಗವೇ ಇಲ್ಲದಾಗಿತ್ತು. ಅವನು ಕಣ್ಣು ಮುಚ್ಚಿಕೊಂಡು ತನ್ನ ಆರಾಧ್ಯ ದೇವತೆಯನ್ನು ಸ್ಮರಿಸತೊಡ

ಗಿದನು. ಅವನ ಹೃದಯದ ಪರಮಾತ್ಮನೆಂದರೆ, ಸ್ವರ್ಗಸ್ಥನಾದ ಪಿತನೇ ಆಗಿದ್ದನು. ಕೊನೆಯ ಶ್ವಾಸದ ವರೆಗೆ ಸೇಡೇ ಅವನ ಮುಖ್ಯ ಧ್ಯೇಯವಾಗಿತ್ತು. ಆಗ ಅವನ ತಂದೆಯು ಎದುರಿಗೆ ನಿಂತಂತಾಯಿತು. ಕೂಡಲೆ ತುಬಾಕಿಯೊಳಗಿನ ಗುಂಡುಗಳು ಹಾರಿದಂತೆ ಭಾಸವಾಗಿ, ಅವನ ಕಿವಿಗಳು ಗಡಚಿಕ್ಕಿದವು.

ಮಯೂರಧ್ವಜನು ಮಾತಾಡಲು ಪ್ರಯತ್ನಿಸಹತ್ತಿದನು; ಆದರೆ ಮಾತುಗಳೇ ಹೊರಡದಂತಾದವು. ಅವನ ಮೌನವು ಕ್ಷಣಕ್ಷಣಕ್ಕೆ ರಣಮಲ್ಲನ ಮೃತ್ಯುವನ್ನು ಸಮೀಪಕ್ಕೆ ತರಹತ್ತಿತು. ಏನಾದರೂ ಮಾತನಾಡಿ, ರಾಣಾನ ಚರಣ ಕಮಲಗಳಲ್ಲಿ ಮಸ್ತಕವಿರಿಸಿ, ರಣಮಲ್ಲನ ಜೀವವನ್ನು ಉಳಿಸುವದಕ್ಕಾಗಿ ಸಾಹಸ ಮಾಡಬೇಕೆಂದು ಮಯೂರಧ್ವಜನ ಮನಸ್ಸಿನಲ್ಲಿತ್ತು; ಆದರೆ ಅವನ ನಾಲಿಗೆಯೋ ತಾಲು ಪ್ರದೇಶಕ್ಕೆ ಅಂಟಿಕೊಂಡಂತಾಗಿತ್ತು. ಕಾಲುಗಳು ಭೂಮಿಗೆ ಅಂಟಿಕೊಂಡಂತಾಗಿದ್ದವು. ಅವನ ದೃಷ್ಟಿಯು ಮಾತ್ರ ಕರುಣಾಪೂರ್ಣವಿತ್ತು. ಹೃದಯವು ಅಲೌಕಿಕವಾದ ದಯಾಪೂರಿತ ಯಾಚನೆ ಮಾಡುತ್ತಿರುವಂತೆ ಅವನ ಮುಖಚಿಹ್ನದಿಂದ ವ್ಯಕ್ತವಾಗುತ್ತಿತ್ತು; ಆದರೆ ಗರ್ವೋದ್ಧತನಾದ ರಾಣಾನಿಗೆ ಅವನ ಚರ್ಯೆಗಳ ಮೇಲಿಂದ ಅವನ ಸ್ಥಿತಿಯನ್ನು ಗುರುತಿಸಿಕೊಳ್ಳುವ ಅವಶ್ಯಕತೆಯೇನಿತ್ತು? ಮಯೂರಧ್ವಜನು ರಣಮಲ್ಲನ ರಕ್ಷಣೆಯ ಸಲುವಾಗಿ ಒಂದೆರಡು ಮಾತುಗಳನ್ನಾಡಿದ್ದರೆ, ಎಷ್ಟೋ ಪ್ರಯೋಜನವಾಗುತ್ತಲಿತ್ತು; ಆದರೆ ಅಷ್ಟು ಮಾತಾಡುವ ಆತ್ಮಬಲವು ಅವನಲ್ಲಿದ್ದಿಲ್ಲ ರಣಮಲ್ಲನ ಪಕ್ಷವನ್ನು ವಹಿಸಿ ಮಾತಾಡಿದರೆ, ರಾಜದ್ರೋಹಿಯೆನಿಸಿಕೊಳ್ಳುವ ಪ್ರಸಂಗವೆಲ್ಲಿ ಬರುವದೋ? ಎಂದು ಅವನು ಹಿಂಜರಿಯತೊಡಗಿದ್ದನು. ಇದೆಂತಹ ಸಾರಾಸಾರ ವಿಚಾರಹೀನ ಕರುಣಾಜನಕ ಸ್ಥಿತಿಯು! ಯಾವನು ಪ್ರತಿಜ್ಞಾಪೂರ್ತಿಗಾಗಿ ಆತ್ಮಬಲಿದಾನ ಮಾಡಿದ್ದನೋ, ಅಂತಹ ಸತ್ಯವ್ರತ ಬಂಧುವಿನ ಅಂತಿಮ ಇಚ್ಛೆಯನ್ನು-ರಣಮಲ್ಲನ ರಕ್ಷಣೆಯ ಕಾರ್ಯವನ್ನು-ಈಡೇರಿಸುವದಕ್ಕಾಗಿ ಉಜ್ವಲ ಕೀರ್ತಿಯುತನಾದ ರಾಜನಿಷ್ಠ ಸೇನಾಪತಿಯ ಮುಖದಿಂದ ಎರಡು ಶಬ್ದಗಳು ಕೂಡ ಹೊರಡಬಾರದೆ? ಎಂತಹ ಕರುಣಾಜನಕ ಸ್ಥಿತಿಯಿದು! ಅವನ ಅವಸ್ಥೆಯು ಹೀಗಾಗಲಿಕ್ಕೆ ಕಾರಣವೇನಿರಬಹುದು? ತನ್ನ ಮನಃಸ್ಥಿತಿಯು ಹೀಗಾದ ಬಗ್ಗೆ ಮಯೂರಧ್ವಜನಿಗೆ ವಿಚಿತ್ರವೆನಿಸಿತ್ತು. ತನ್ನ ಬಂಧುವಿನ ಪಾಲಿತ ಪುತ್ರನ ಆಯುಷ್ಯದ ಕೊನೆಯ ಭಾಗವು ಒಂದೆರಡು ನಿಮಿಷಗಳಲ್ಲಿ ಮುಗಿಯುವದೆಂಬದು ಗೊತ್ತಾದ ಮೇಲೆ ಸಹ ಅವನು ಹೀಗೆ ಮುಗ್ಧನೇಕೆ?

“ಸೈನಿಕರೆ!” ರಾಣಾನು ಗಂಭೀರತೆಯಿಂದ ತನ್ನ ಸೇವಕರನ್ನು ಕುರಿತು:

“ನೀವು ಗುಂಡು ಹೊಡೆಯಲಿಕ್ಕೆ ಸಿದ್ಧರಾಗಿ ನಿಂತಿರವಿರಲ್ಲವೆ?”

“ಜೀ ಸರಕಾರ!” ಎಲ್ಲ ಸೈನಿಕರೂ ಏಕಮುಖದಿಂದ ಉತ್ತರವಿತ್ತರು.

“ಸಾವಧರಾಗಿರತಕ್ಕದ್ದು. ನನ್ನ ಕೈಯು ಇನ್ನು ಎತ್ತಲ್ಪಡುವದು.”

ಅಷ್ಟರಲ್ಲಿ ವ್ಯೋಮಪಟಲವನ್ನೊಡೆದು ವಿದ್ಯುತ್ತು ಭೂಮಿಗೆ ಎರಗುವಂತೆ, ರಾಜಕುಮಾರಿ ಶೀಲವತಿಯು ಎತ್ತಣಿಂದಲೋ ಮಿಂಚಿನಂತೆ ಬಂದು, ರಾಣಾನ ಎದುರಿಗೆ ನಿಂತಳು!

ರಾಯಸಿಂಹನು ವಿಸ್ಮಿತನಾದನು. ಇಂತಹ ಸಮಯದಲ್ಲಿ ಆಗಮಿಸಿದ ಯುವತಿಯು ಯಾರಾಗಿರಬಹುದೆಂದು ಅವನು ಚಕಿತದೃಷ್ಟಿಯಿಂದ ಅವಳ ಕಡೆಗೆ ನೋಡಿದನು. ಆ ಅಬಲೆಯು ಮತ್ತಾರೂ ಆಗಿರದೆ, ತನ್ನ ಕುವರಿಯೇ ಎಂಬ ವಿಷಯದಲ್ಲಿ ಅವನಿಗೆ ನಂಬಿಗೆಯಾಗಲೊಲ್ಲದು.

ಶೀಲವತಿಯ ನೂಪುರನಾದದಿಂದ ಧ್ಯಾನಮಗ್ನ ರಣಮಲ್ಲನ ಸ್ಥೈರ್ಯವು ಶಿಥಿಲವಾಯಿತು. ಅವನು ಮೆಲ್ಲನೆ ಕಣ್ಣುತೆರೆದನು. ನೋಡುತ್ತಾನೆ, ಎದುರಿಗೆ ಅದೇ ಅನುಕಂಪಾಮಯ ನೇತ್ರಗಳು; ಅದೇ ಅನುರಾಗಮಯ ಯಾಚನೆಯು; ಅದೇ ಸ್ನೇಹಪೂರ್ಣಹೃದಯಿಯು; ಅದೇ ಸುಶೀಲದ ಮೂರ್ತಿಮಂತ ದೇವತೆಯು!

ಶೀಲವತಿಯನ್ನು ನೋಡಿದ ಕೂಡಲೆ ಮಯೂರಧ್ವಜನು ವಿಸ್ಮಯಗೊಂಡನು! ತನ್ನ ಮೌನದಿಂದಾಗ ತೊಡಗಿದ ಕಠೋರ ಪರಿಣಾಮದ ನಿವಾರಣೆಗಾಗಿ ಪರಮೇಶ್ವರನಿಂದ ಕಳುಹಿಸಲ್ಪಟ್ಟ ಸ್ವರ್ಗೀಯ ದೇವತೆಯೇ ಇವಳೆಂದು ಅವನ ಭಾವನೆಯಾಯಿತು. ಇನ್ನು ಮುಂದೆ ಯಾವ ಸ್ಥಿತ್ಯಂತರವಾಗುವದೆಂಬದನ್ನು ನೋಡಲಿಕ್ಕೆ ಅವನ ಕಣ್ಮನಗಳು ಆತುರಗೊಂಡವು.

“ಪಿತಾಜಿ!” ಶೀಲವತಿಯು ಗಾಂಭೀರ್ಯದಿಂದ:—“ಯಾರ ಎದೆಯ ಮೇಲೆ ಹೊಡೆಯುವದಕ್ಕಾಗಿ ಈ ತುಬಾಕಿಗಳು ಸಿದ್ಧವಾಗಿರುವವು? ಈ ರಣಮಲ್ಲರ ಹೃದಯ ಛೇದನೆ ಮಾಡಲಿಕ್ಕೆ ನಿಮ್ಮ ತುಬಾಕಿಗಳು ಸಿದ್ಧವಾಗಿರುವವಲ್ಲವೆ? ಈ ಮಹಾನುಭಾವರಾದ ತರುಣರ ಮೃತ್ಯುವಿನ ಉಚ್ಚಾರವನ್ನು ನೀವು ಯಾವ ಹೃದಯದಿಂದ, ಯಾವ ಮುಖದಿಂದ ಮಾಡತೊಡಗಿರುವಿರಿ?”

“ಕುಮಾರಿ!” ರಾಯಸಿಂಹನು ಸೌಮ್ಯವಾಣಿಯಿಂದ:—“ಈ ರಣಮಲ್ಲನ ತಂದೆಯಾದ ಜಗಮಲ್ಲನು ತನ್ನ ಆಯುಷ್ಯದ ಕೊನೆಯ ಗಳಿಗೆಯವರೆಗೆ-ಕೊನೆಯ ಕ್ಷಣದ ವರೆಗೆ-ನನ್ನ ವೈರಿಯಾಗಿದ್ದನು. ಇವನಾದರೂ ತನ್ನ ತಂದೆಯಂತೆಯೇ ನನಗೆ ವಿರೋಧಿಯಾಗಿದ್ದಾನೆ. ಇವನು ಇಂದು ನನ್ನನ್ನು ಕೊಲ್ಲುವದಕ್ಕಾಗಿ ದೀರ್ಘ ಸಾಹಸ ಮಾಡಿ, ಇಂತಹ ಭಯಾನಕ

ವಾದ ರಾತ್ರಿಯಲ್ಲಿ ಇಲ್ಲಿಗೆ ಬಂದಿರುವನು. ಘಾತಕಿಯಾದ ಇವನ ಕೊಲೆ ಮಾಡಲಿಕ್ಕೆ ಆಜ್ಞೆಮಾಡದೆ, ಮತ್ತೇನು ಮಾಡಬೇಕೆಂದು ನೀನು ಇಚ್ಛಿಸುತ್ತಿರುವೆ?''

''ನನ್ನ ಇಚ್ಛೆಯು ಏನಿರುವದೆಂಬದು ನಿಮಗೆ ಗೊತ್ತಾಗುವಂತಿಲ್ಲವೆ? ಪಿತಾಜಿ! ಇವರು ರಾಣಾವಿಲಾಸವಿಜಯನಿಂದ ನನ್ನ ಮುಕ್ತತೆ ಮಾಡಿರುವದನ್ನು ನೀವು ಇಷ್ಟರಲ್ಲಿಯೇ ಮರೆತಿರುವಿರೇನು?''

''ಇಲ್ಲ; ನಾನು ಅದನ್ನು ಮರೆತಿಲ್ಲ. ಶೀಲವತೀ, ಆ ವೇಳೆಯಲ್ಲಿ ಇವನು ಬಂದು ನಿನ್ನ ಮುಕ್ತತೆ ಮಾಡದಿದ್ದರೆ, ಸೈನ್ಯಕಳಿಸಿಯಾದರೂ ಆ ಕಾರ್ಯವನ್ನು ನಾನು ಮಾಡಿಸುತ್ತಿದ್ದೆನು''

''ಆದರೆ ಪಿತಾಜೀ, ಪಾತಿವ್ರತ್ಯ, ನಾರೀ ಸನ್ಮಾನ, ಕುಲಾಭಿಮಾನ ಇವು ಸ್ತ್ರೀಯರ ಅಮೌಲ್ಯವಾದ ಧನಗಳು. ದುಷ್ಟನಿಂದ ಈ ಸಂಪತ್ತುಗಳ ಸುಲಿಗೆಯಾದ ಮೇಲೆ, ನಿಮ್ಮ ಸಹಸ್ರಾವಧಿ ಸೈನ್ಯವು ಬಂದು ಪ್ರಯೋಜನವೇನು?''

''ಇವನನ್ನು ಬಿಡುವುದೆಂದರೆ, ನನ್ನ ಮೃತ್ಯುವನ್ನು ನಾನೇ ಬರಮಾಡಿಕೊಂಡಂತೆಯೇ ಸರಿ; ಯಾಕಂದರೆ, ಇವನು ಮತ್ತೊಂದು ಬಾರಿಯಾದರೂ ಯತ್ನಿಸಿ, ನನ್ನ ಗಂಟಲಿಗೆ ಗಾಣನಾಗತಕ್ಕವನಿರುವನು. ಕೈಗೆ ಸಿಕ್ಕ ಬೇಟೆಯನ್ನು ಬಿಟ್ಟು, ಗಂಡಾಂತರಕ್ಕೊಳಗಾಗುವದು ಮೂರ್ಖತನವಲ್ಲವೆ?''

''ಉಪಕಾರವನ್ನು ತೀರಿಸುವಂಥ ಸಂಧಿಯನ್ನು ವ್ಯರ್ಥವಾಗಗೊಡುವದು ಮಾನವೀವೃತ್ತಿಯ ಲಕ್ಷಣವೇನು, ಪಿತಾಜಿ?''

''ಶೀಲವತೀ, ನಿನ್ನ ಮನಸ್ಸಿನಂತಾಗುವದು ಅಸಂಭವವು ರಾಜಾಧಿಕಾರವೂ ರಾಜಧರ್ಮವೂ ಇವನಿಗೆ ಮರಣದಂಡನೆಯನ್ನು ಹೇಳುತ್ತಲಿರುವವು''

''ಆದರೆ ಮಾನವೀ ಹೃದಯವೂ ಮಾನವೀ ಅಧಿಕಾರವೂ ಇವರ ಬಿಡುಗಡೆಯ ಇಚ್ಛೆ ಮಾಡುತ್ತಲಿರುವವು.''

''ನಂದಿನಿ, ಹಾಗೆ ಆಗುವಂತಿಲ್ಲ. ಇವನು ನನ್ನ ಅಸ್ಥಿವೈರಿಯಿರುವದರಿಂದ ದಯೆದೋರುವದು ಆತ್ಮಘಾತಕವಾಗಿದೆ ಆದ್ದರಿಂದ ನಿನ್ನ ಮಾತಿಗೆ ಮನ್ನಣೆ ಕೊಡಲಾಗುವದಿಲ್ಲ. ನನ್ನ ವೃತ್ತಿಯಿಂದ ನಿನಗೆ ದುಃಖವಾಗುತ್ತಿರಬಹುದು; ಆದರೆ ಅದಕ್ಕೆ ನನ್ನ ಯತ್ನವಿಲ್ಲ. ಶೂರ ಸೈನಿಕರೆ, ಸಾವಧರಾಗಿರತಕ್ಕದ್ದು. ಸ್ವಲ್ಪ ವೇಳೆಯಲ್ಲಿಯೇ ನಾನು ಕೈಯ್ಯನ್ನೆತ್ತುವೆನು. ಕೂಡಲೆ ಎಲ್ಲರ ನಾಳದೊಳಗಿನ ಗುಂಡುಗಳೂ ಒಮ್ಮೆಲೆ ಹಾರತಕ್ಕದ್ದು.''

ಕೂಡಲೆ ಶೀಲವತಿಯು ರಣಮಲ್ಲನನ್ನು ತನ್ನ ಹಿಂದೆ ಮಾಡಿಕೊಂಡು,

ಸೈನಿಕರ ತುಬಾಕಿಗಳಿಗೆ ತನ್ನ ಎದೆಕೊಟ್ಟು ನಿಂತಳು. ಅನಂತರದಲ್ಲಿ ಅವಳು: "ತಂದೆಯವರೇ, ನೀವು ನಿಮ್ಮ ಕೈಯನ್ನು ಬೇಕಾದಾಗ ಎತ್ತಿರಿ. ಸೈನಿಕರೇ, ನಿರಪರಾಧಿಗಳ ಮೇಲೆ ಶಸ್ತ್ರವೆತ್ತಿರುವ ಆದರ್ಶ ವೀರರಾದ ಶೂರರೇ, ನಿಮ್ಮ ತುಬಾಕಿಗಳ ಗುಂಡು ಬೇಕಾದಾಗ ಹಾರಲಿ!"

ರಾಣಾನು ಸ್ತಂಭಿತನಾದನು. ತನ್ನ ಪುತ್ರಿಯಿಂದಲೇ ಈ ಕೃತಿಯು ಆಗುತ್ತಿರುವದೆಂಬದರ ಕಲ್ಪನೆಯು ಅವನಿಗಾಗಲಿಲ್ಲ. ಕೆಲಹೊತ್ತಿನ ವರೆಗೆ ಅವನು ದಿಙ್ಮೂಢನಂತೆ ನಿಂತಿದ್ದನು ತರುವಾಯ ಅವನು:- "ಇದೇನು? ನನ್ನ ಪುತ್ರಿಯೇ ನನ್ನ ಶತ್ರುಗಳಿಗೆ ಸಹಾಯಕಾರಿಯು! ಇದೇನು? ಇದೇನು!"

"ಪಿತಾಜಿ, ನೀವು ನಿಮ್ಮ ರಾಜನೀತಿಯನ್ನು ಅವಶ್ಯವಾಗಿ ಸಂತುಷ್ಟ ಪಡಿಸಿರಿ. ಉಪಕಾರದ ಭಾರವನ್ನು ಅಪಕಾರದಿಂದ ತೀರಿಸಿರಿ."

'ಇದೇನು? ಪಿತ್ರಾಜ್ಞೆ-ರಾಜಧರ್ಮಗಳ ವಿರುದ್ಧವಾದ ಅತ್ಯಾಚಾರವು?'

"ಅಲ್ಲ. ಇದು ಅತ್ಯಾಚಾರವಲ್ಲ; ನ್ಯಾಯ-ಧರ್ಮಗಳ ರಕ್ಷಣೆಗಾಗಿ ಪ್ರತೀಕಾರ!"

ರಾಣಾನು ನಿರುಪಾಯನಾದನು. ತುಬಾಕಿಯನ್ನು ಹಿಡಿದ ಕೈಯು ಸಡಿಲಾಗಿ ಕೆಳಗಿಳಿಯಿತು. ಕೂಡಲೆ ಮುಷ್ಟಿಯೊಳಗಿನ ತುಬಾಕಿಯು ಆತನಿಗೆ ತಿಳಿಯದ ಹಾಗೆ ಭೂಮಿಗೆ ಬಿದ್ದು, ಕರ್ಣಕಠೋರವಾದ ಧ್ವನಿ ಮಾಡಿತು.

"ಸೈನಿಕರೇ," ರಾಣಾನು ಉಚ್ಚವೂ ಅಧಿಕಾರಯುಕ್ತವೂ ಆದ ವಾಣಿಯಿಂದ:—"ಇವನನ್ನು ಸೆರೆಹಿಡಿಯಿರಿ. ನಾಳೆ ಓಲಗದಲ್ಲಿ ಇವನ ಅಪರಾಧದ ಬಗ್ಗೆ ನ್ಯಾಯವಿಚಾರಣೆ ಮಾಡುವೆನು."

ಕ್ಷಣಮಾತ್ರದಲ್ಲಿ ರಾಣಾಜ್ಞೆಯು ಪಾಲಿಸಲ್ಪಟ್ಟಿತು.

---

## ಅಧಿಕಾರತ್ಯಾಗ.

೧೦೦ ದಿನ ಪ್ರಕರಣದಲ್ಲಿ ವರ್ಣಿಸಲ್ಪಟ್ಟ ಘಟನೆಯು ಆರಂಭವು ರಾತ್ರಿಯಲ್ಲಾದರೂ ಅದರ ಕೊನೆಯು ಸೂರ್ಯೋದಯದ ಸಮಯಕ್ಕೇ ಆಯಿತು.

ಜಗಮಲ್ಲನ ಪಾಲಿತ ಪುತ್ರನಾದ ರಣಮಲ್ಲನನ್ನು ರಾತ್ರಿಯಲ್ಲಿ ರಾಜದೂತರು ಸೆರೆಹಿಡಿದಿದ್ದು, ಅವನ ನ್ಯಾಯವಿಚಾರಣೆಯು ಇಂದಿನ ದಿನವೇ ಆಗುವದೆಂಬ ವಾರ್ತೆಯು ರಾಣಾನ ರಾಜಧಾನಿಯ ತುಂಬಾ ಪಸರಿಸಿತು.

ನಗದೇಶ ರಾಜಧಾನಿಯೊಳಗಿನ ಪ್ರಜೆಗಳು ರಣಮಲ್ಲನ ಅಪರಾಧ ವಿಚಾರಣೆಯ ದೃಶ್ಯವನ್ನು ನೋಡುವದಕ್ಕಾಗಿ ರಾಜಸಭೆಯ ಕಡೆಗೆ ತಂಡ

ಗಟ್ಟೆ ನಡೆದಿದ್ದರು. ಅವರು ತಮ್ಮ ತಮ್ಮ ಬುದ್ಧಿಗನುಸಾರವಾಗಿ ಅನೇಕ ವಿಧ ದಿಂದ ತರ್ಕವಿತರ್ಕ ಮಾಡತೊಡಗಿದ್ದರು. ಇಂದು ರಾಜಸಭೆಯ ಪಟಾಂಗಣ ದಲ್ಲಿ ರಣಮಲ್ಲನ ಶಿರಚ್ಛೇದನವಾಗುವದೆಂದು ಕೆಲವರು ಅನ್ನುತ್ತಿದ್ದರೆ, ದೊಡ್ಡ ಪೇಟಿಯಲ್ಲಿ ಅವನಿಗೆ ಗುಂಡುಹಾಕಲ್ಪಡುವದೆಂದು ಕೆಲವರು ಅನ್ನುತ್ತಿದ್ದರು. ಸೇನಾಪತಿಯು ಅವನ ಬಂಧವಿಮೋಚನೆ ಮಾಡಿಸುವನೆಂದು ಕೆಲವರು ಊಹಿಸತೊಡಗಿದ್ದರು. ಹೀಗೆ ಅನೇಕ ವಿಧವಾಗಿ ಮಾತನಾಡುತ್ತ ಜನರ ಪ್ರಚಂಡವಾದ ಸಂದೋಹವು ರಾಜಸಭೆಯನ್ನು ಸೇರಿತು. ಅಲ್ಲಿ ಇರವೆಯು ಪ್ರವೇಶಿಸುವಷ್ಟು ಸಹ ಅವಕಾಶವಿಲ್ಲದಂತೆ ಜನಸಂದಣಿಯು ಕೂಡಿತು. ಎಲ್ಲ ಅಧಿಕಾರಿಗಳು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿದ್ದರು. ಎಲ್ಲರೂ ರಣಮಲ್ಲನ ಅಪರಾಧದ ತೀರ್ಪು ಕೇಳಲಿಕ್ಕೆ ಉತ್ಸುಕರಾಗಿದ್ದರು. ಇನ್ನೂ ರಾಜಾಗಮನ ವಾಗಿರಲಿಲ್ಲ. ಜನರು ರಾಣಾನ ಮಾರ್ಗಪ್ರತೀಕ್ಷೆ ಮಾಡತೊಡಗಿದ್ದರು. ಅಷ್ಟ ರಲ್ಲಿ ಜಯಘೋಷವು ಕೇಳಲಾರಂಭಿಸಿತು ಮುಂದೆ ಕೆಲವು ವೇಳೆಯಲ್ಲಿ ರಾಣಾ ರಾಯಸಿಂಹನು ರಾಜಸಭೆಯನ್ನು ಪ್ರವೇಶಿಸಿ, ಗರ್ವೋದ್ಧತೆಯಿಂದ ಸಿಂಹಾಸನದ ಕಡೆಗೆ ನಡೆದನು. ಓಲಗಸ್ಥ ಜನರು ಎದ್ದು ನಿಂತು ರಾಣಾನಿಗೆ ಅಭಿವಾದನೆ ಮಾಡಿದರು.

ರಾಣಾನು ಸಿಂಹಾಸನದ ಮೇಲೆ ಕುಳಿತ ಬಳಿಕ ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತರು. ಸಭೆಯಲ್ಲಿ ಪ್ರಚಂಡವಾದ ಜನಸಮುದಾಯವಿದ್ದರೂ ಯಾರ ಮುಖದಿಂದಲೂ ಒಂದು ಶಬ್ದ ಸಹ ಹೊರಡುತ್ತಿರಲಿಲ್ಲ. ಎತ್ತ ನೋಡಿ ದತ್ತ ಶಾಂತತೆಯು ಪಸರಿಸಿತ್ತು. ಕೆಲವು ವೇಳೆಯ ಮೇಲೆ ರಾಣಾನು ಆ ಶಾಂತತೆಯನ್ನು ಭಂಗಪಡಿಸಿದನು. ಅವನು ಸಭಿಕರನ್ನುದ್ದೇಶಿಸಿ:—"ನಿನ್ನೆ ರಾತ್ರಿಯಲ್ಲಿ ಡಾಕು ಜಗಮಲ್ಲನ ಪಾಲಿತ ಪುತ್ರನಾದ ರಣಮಲ್ಲನು ಕಳ್ಳನಂತೆ ರಾಜಮಂದಿರವನ್ನು ಪ್ರವೇಶಿಸಿದ್ದನು. ನಮ್ಮ ಪ್ರಾಣಹರಣ ಮಾಡಬೇಕೆಂಬು ದೇ ಅವನ ಉದ್ದೇಶವಿತ್ತು; ಆದರೆ ಪರಮಾತ್ಮನ ಅನುಗ್ರಹದಿಂದ ನಮ್ಮ ರಕ್ಷಣೆ ಯಾಯಿತು. ನಾವು ಆಗಿಂದಾಗಲೆ ಅವನನ್ನು ಸೆರೆಹಿಡಿದೆವು. ಆ ಸುಲಿಗೆಗಾರನಿಗೆ ಯಾವ ವಿಧದ ದಂಡನೆಯನ್ನು ವಿಧಿಸತಕ್ಕದ್ದೆಂಬದನ್ನು ನೀವು ನನಗೆ ಹೇಳ ಬೇಕು. ಸಭಿಕರ ಬಹುಮತದಂತೆ ಅವನಿಗೆ ಶಿಕ್ಷೆವಿಧಿಸುವ ಮನಸ್ಸಿದೆ."

ಓಲಗದಲ್ಲಿ ಕುಳಿತ ಜನರು ತಮ್ಮತಮ್ಮೊಳಗೆ ಗುಣಗುಟ್ಟಹತ್ತಿದರು. ಕೆಲವರ ಮುಖದಿಂದ ಆವೇಶಯುಕ್ತವಾದ ಉದ್ಗಾರಗಳು ಹೊರಡಹತ್ತಿದವು. ಕೊಲೆಗಡಕನಿಗೆ ಯೋಗ್ಯ ಶಿಕ್ಷೆ ವಿಧಿಸಬೇಕು; ಪ್ರಾಣದಂಡನೆ ಮಾಡಬೇಕು; ಗಡಿಪಾರ ಮಾಡಬೇಕು ಮೊದಲಾದ ಉದ್ಗಾರಗಳು ರಾಣಾನ ಕಿವಿಗೆ ಮುಟ್ಟೆ

ದವು. ಒಟ್ಟಿನ ಮೇಲೆ ಅವನು ಪ್ರಜಾಜನರ ಮತವನ್ನು ಕಂಡುಹಿಡಿದನು. ಅನಂತರದಲ್ಲಿ ರಣಮಲ್ಲನನ್ನು ಕರಕೊಂಡು ಬರುವದಕ್ಕಾಗಿ ಅವನ ಸೇವಕರಿಗೆ ಆಜ್ಞಾಪಿಸಿದನು. ಓಲಗದೊಳಗಿನ ಜನರು ರಣಮಲ್ಲನು ಬರುವದನ್ನು ಆತುರ ದಿಂದ ನೋಡಹತ್ತಿದರು.

ಮಯೂರಧ್ವಜನು ಮುಖವನ್ನು ಕೆಳಗೆ ಮಾಡಿ ಕುಳಿತಿದ್ದನು. ಓಲ ಗದಲ್ಲಿ ನಡೆದ ಕೋಲಾಹಲದಿಂದ ಅವನ ಎದೆಯು ಬಿಚ್ಚಿ ಇಬ್ಭಾಗವಾಗತೊಡ ಗಿತ್ತು. ಇದೇನು ಪ್ರಳಯ ಕಾಲದ ಕಲ್ಲೋಲವೋ, ಸೂರ್ಯ-ಪೃಥ್ವಿಗಳ ಆಘಾತವಾಗುವ ಯೋಗವೊ, ಬ್ರಹ್ಮಾಂಡವು ಬಿರಿದು ಹೋಗುವ ಚಿಹ್ನವೋ, ಭಯಂಕರವಾದ ಭೂಕಂಪವಾಗಿ ರಾಜಸಭೆಯು ಪೃಥ್ವಿಯ ಗರ್ಭದಲ್ಲಿ ಅಡಗಿ ಹೋಗುವ ಲಕ್ಷಣವೋ ಎಂದು ಅವನು ಚಿಂತಿಸಹತ್ತಿದ್ದನು. ಅವನು ಮುಖ ವೆತ್ತಿ ಒಮ್ಮೆ ರಾಣಾನನ್ನು ನೋಡಿದನು. ತಾನು ಯಾರ ಸಲುವಾಗಿ ನೈಸರ್ಗಿಕ ಪ್ರೇಮವನ್ನು ಬದಿಗಿರಿಸಿ ಬಂಧುವಧೆ ಮಾಡಿದ್ದನೋ, ಅದೇ ರಾಣಾನು ಆಧ್ಯತೆ ಯಿಂದ ಕುಳಿತಿದ್ದನು. ಯಾವನ ಆಜ್ಞೆಯನ್ನು ದೇವಾಜ್ಞೆಯಂತೆ ಮನ್ನಿಸು ತ್ತಿದ್ದನೋ ಅದೇ ರಾಣಾನು ತನ್ನ ಸ್ವರ್ಗಸ್ಥ ಬಂಧುವಿನ ಪಾಲಿತ ಪುತ್ರನಾದ ರಣಮಲ್ಲನ ಮೇಲೆ ಖಡ್ಗಚಾಲನೆ ಮಾಡಲಿಕ್ಕೆ, ಕರ್ತವ್ಯಪಾಲನೆಯ ನಾಟಕೀ ಆವಿರ್ಭಾವವನ್ನು ತಳೆದು ಕುಳಿತುಕೊಂಡಿದ್ದನು.

ಅಷ್ಟರಲ್ಲಿ ನಾಲ್ಕು ಜನ ನಗ್ನ ಖಡ್ಗಧಾರಿಗಳಾದ ರಾಜದೂತರು ಶೃಂ-ಖಲಾಬದ್ಧನಾದ ರಣಮಲ್ಲನನ್ನು ಓಲಗದಲ್ಲಿ ಕರೆತಂದರು. ರಣಮಲ್ಲನ ಮುಖವು ಒಳ್ಳೆಯ ಗಂಭೀರವಾಗಿದ್ದು, ಭಾವೀ ಗಂಡಾಂತರವನ್ನು ತಿಳಿದಂ ತಹ ಹಾಗು ಸಂಕಟಕ್ಕೆ ಎದೆಗೊಟ್ಟು ನಿಲ್ಲುವಂತಹ ಭಾವವನ್ನು ತಳೆದದ್ದಾ ಗಿತ್ತು. 'ನವಮುದದ್ವಿಪಗತಿಯ ಗರುವಾಯಿಯಲಿ' ಬಂದ ಅವನನ್ನು ನೋ-ಡಿದೊಡನೆಯೆ ರಾಣಾನ ಸಂತಾಪವು ಒಳ್ಳೆಯ ಜಾಗ್ರತವಾಯಿತು. ಆಗ ಅವನು:—"ಡಾಕು! ಸುಲಿಗೆಗಾರಿಕೆಯ ನೀಚವೃತ್ತಿಯಿಂದ ಕ್ಷತ್ರಿಯ ಧರ್ಮ ವನ್ನು ಹೀನ ಕೋಟಿಯಲ್ಲೆಳೆಯಲುಪಕ್ರಮಿಸಿದ ಗರ್ವಿಷ್ಠ ಬಾಲಕಾ! ನಿನ್ನ ನಿನ್ನಿನ ಅಪರಾಧವು ನಿನಗೆ ಮರಣದಂಡನೆಯನ್ನು ಹೇಳುತ್ತಲಿದೆ. ಮರಣದ ಪೂರ್ವದಲ್ಲಿ ಏನಾದರೂ ಹೇಳುವದಿದ್ದರೆ, ಅವಶ್ಯವಾಗಿ ಹೇಳು; ಕೇಳಲಿಕ್ಕೆ ನಮ್ಮ ಸಿದ್ಧತೆಯಿದೆ"

"ರಾಣಾ! ಅನ್ಯಾಯಿಯಾದ ನಿನಗೆ ನಾನು ಏನು ಹೇಳಬೇಕು? ಅನೀತಿ ಯಿಂದ ನನ್ನ ಪರಮಪೂಜ್ಯ ಪಿತನ ಕೊರಳು ಕೊಯ್ಸಿದ ಅಧಮನ ಸೇಡು ತೀರಿಸಿಕೊಳ್ಳುವ ದೃಢನಿಶ್ಚಯವು ಪ್ರಾಣಾಂತ್ಯದ ವರೆಗೂ ನನ್ನಲ್ಲಿ ಮನೆ

ಮಾಡಿಕೊಂಡಿರುವದೆಂಬದನ್ನಿಷ್ಟೇ ಈ ಜನಸಮೂಹದೆದುರಿಗೆ ಹೇಳುವೆನು ಇದಕ್ಕಿಂತ ಹೆಚ್ಚಾಗಿ ಇನ್ನೇನು ಹೇಳಲಿ?''

‘‘ಇದೇ ನಿನ್ನ ನಿಶ್ಚಯವಾಗಿದ್ದರೆ, ನೀನಾಗಿ ಮೃತ್ಯುಮುಖದಲ್ಲಿ ಬಿದ್ದಂತಾಗುವದು.''

‘‘ಇದಕ್ಕೆ ಕಾರಣವೆಂದರೆ, ಈ ರಣವೀರ ರಣಮಲ್ಲನು ಜಗವೀರ ಜಗಮಲ್ಲನ ಪುತ್ರನು; ವೀರ ಕ್ಷತ್ರಿಯನು; ನೀತಿವಂತ ರಜಪುತನು! ಅತ್ಯಾಚಾರಿಯಾದ ರಾಣಾ, ಯಾವದೊಂದು ಅಧಿಕಾರಲಾಲಸೆಗಾಗಿ ಅಥವಾ ದ್ರವ್ಯದಾಶೆಗಾಗಿ ಇಲ್ಲವೆ ಪ್ರಾಣದ ವ್ಯಾಮೋಹದಿಂದ ಕ್ಷತ್ರಿಯೋಚಿತ ಶೀಲವನ್ನೂ ಮಾನವ್ಯವನ್ನೂ ಮಾರಿಕೊಳ್ಳಲಿಕ್ಕೆ ನಾನು ಸಿದ್ಧನಿಲ್ಲ ಸ್ವಾಮಿನಿಷ್ಠೆಯ ಆಡಂಬರವನ್ನು ಮೆರೆಯಿಸುತ್ತ, ರಾಜನ ಎಂಜಲಿಗಾಗಿ ಒಡಹುಟ್ಟಿದ ತಮ್ಮನ ಶಿರವನ್ನಿಳುಹುವ ಅಣ್ಣನು ನಾನಲ್ಲ!''

ಪ್ರವಾಹಪತಿತನಂತಾದ ಮಯೂರಧ್ವಜನ ಸ್ಥಿತಿಯು ರಣಮಲ್ಲನ ಕಡೆಯ ಉದ್ಗಾರವನ್ನು ಕೇಳಿ ಮತ್ತಿಷ್ಟು ವಿಚಿತ್ರವಾಯಿತು! ಎತ್ತಣಿಂದಲೋ ಒಂದು ವಿದ್ಯುಲ್ಲತೆಯು ಸರ್ರನೆ ಬಂದು ಅವನ ದೇಹದಲ್ಲಿ ಪ್ರವೇಶಿಸಿದಂತಾಯಿತು. ಅವನು ಕುಳಿತ ಆಸನದಿಂದ ಒಂದು ವಿಷಯುಕ್ತ ಸರ್ಪವು ಅಕಸ್ಮಾತ್ತಾಗಿ ಬಂದು ದಂಶ ಮಾಡಿದಂತಾಯಿತು. ಇಡೀ ಸಭಾಲಯವು ಜಲಧಿಯಲ್ಲಿ ಮುಳುಗಿ ಹೋದಂತೆ ಅವನಿಗೆ ಭಾಸವಾಗಹತ್ತಿತು. ಪ್ರಚಂಡವಾದ ಜನಸಮೂಹದಲ್ಲಿ, ಅದರಲ್ಲಿ ನಗದೇಶದ ಓಲಗದಲ್ಲಿ ಅವನ ಮಾನಕ್ಷಿತಿಯಾದ ಪ್ರಸಂಗವು ಅವನ ಆಯುಷ್ಯದಲ್ಲಿ ಇದೇ ಮೊದಲು. ‘ರಣಮಲ್ಲನು ಅನ್ನುತ್ತಿರುವಂತೆ ಎಷ್ಟೋ ಜನರು ಅನ್ನುತ್ತಿರಬಹುದಲ್ಲವೆ? ನನ್ನ ಕರ್ತವ್ಯವು ನೀಚತಮವೆಂದು ಗ್ರಹಿಸಿ, ಎಷ್ಟೋ ಜನರು ತಿರಸ್ಕಾರ ದೃಷ್ಟಿಯಿಂದ ನನ್ನ ಕಡೆಗೆ ನೋಡುತ್ತಿರಬಹುದಲ್ಲವೆ? ಸ್ವಾಮಿನಿಷ್ಠೆಯ ಪರಾಕಾಷ್ಠೆಯನ್ನು ತೋರಿಸಿದ ನನ್ನನ್ನು ಸ್ವಾರ್ಥಿಯೆಂದು ಜಗತ್ತು ನಿಂದಿಸುತ್ತಿರಬಹುದಲ್ಲವೆ?' ಎಂದು ನಾನಾ ವಿಧದ ವಿಚಾರದಲ್ಲಿ ಅವನು ಮುಳುಗಿದನು. ಅನಂತರದಲ್ಲಿ ಅವನು ರಣಮಲ್ಲನ ಮುಖವನ್ನು ನಿರೀಕ್ಷಿಸಿದನು. ಆಗ ರಣಮಲ್ಲನ ಮುಖವು ಆರಕ್ತವೂ ಗಂಭೀರಯುಕ್ತವೂ ಆಗಿದ್ದು, ನೇತ್ರಗಳು ಕಿಡಿಗಳನ್ನುಗುಳುತ್ತಿರುವಂತೆ ಭಾಸವಾಗತೊಡಗಿದ್ದವು!

ರಾಣಾನು ರಣಮಲ್ಲನ ಗಂಭೀರತೆಯನ್ನು ನೋಡಿ, ಓಜಯುಕ್ತ ಭಾಷಣವನ್ನು ಕೇಳಿ ಚಕಿತನಾದನು. ಆಗ ಅವನು:-‘‘ಬಾಲಕಾ, ನಿನ್ನಂತಹ ತೇಜಸ್ವಿಯಾದ ಪುತ್ರನು ನನಗಿರುತ್ತಿದ್ದರೆ, ನಾನು ಅವನ ಪ್ರಾಣರಕ್ಷಣೆಗಾಗಿ

ರಾಜ್ಯತ್ಯಾಗ ಮಾಡಲಿಕ್ಕೆ ಹಿಂದುಮುಂದೆ ನೋಡುತ್ತಿದ್ದಿಲ್ಲ; ಆದರೆ ನಿನಗೆ ನಿನ್ನ ಜೀವನದ ಬೆಲೆಯೇ ತಿಳಿಯದ್ದನ್ನು ನೋಡಿ ವಿಸ್ಮಯವೂ ದುಃಖವೂ ಆಗುತ್ತಿದೆ"

"ರಾಣಾಜಿ!" ರಣಮಲ್ಲನು ಉಚ್ಚಕಂಠದಿಂದ:—"ಮಾಯಾ-ಮೋಹಗಳ ಕರ್ದಮದಲ್ಲಿ ಲೋಲಾಡುವ ಕೀಟಕಕ್ಕೆ ಕರ್ತವ್ಯದ ಮಹತಿಯು ಹೇಗೆ ತಿಳಿಯಬೇಕು"

ರಾಣಾನು ಈ ಅವಹೇಲನೆಯಿಂದ ರೇಗಿದನು. ಆಗ ಅವನು:—"ರಣಮಲ್ಲ, ನೀನು ಈಗ ನಿನ್ನ ಕರ್ತವ್ಯದ ಹಾಗು ವಿನಯದ ಸೀಮೆಯನ್ನು ದಾಟತೊಡಗಿದೆ ಇದು ಜಗಮಲ್ಲನ ನಿವಾಸದ ಕಟ್ಟಡವಿಯಲ್ಲ; ನಗದೇಶದ ರಾಜಧಾನಿಯು! ನೀನು ನಿನ್ನ ಜೀವನದ ಬೆಲೆಯನ್ನು ಚೆನ್ನಾಗಿ ಅರಿತು ಕಾರ್ಯಮಾಡು ಮಹಾನುಭಾವತೆಯಿಂದ ಇದುವರೆಗೆ ನಿನ್ನನ್ನು ಮನ್ನಿಸಿರುವೆನು. ನಿನಗೆ ಕೊನೆಯ ಪ್ರಶ್ನೆಯನ್ನು ವಿಚಾರಿಸುವದೆಂದರೆ, ರಾಜಸೇವೆ ಬೇಕೋ, ಮೃತ್ಯುವು ಬೇಕೊ? ಇವೆರಡರಲ್ಲಿ ನಿನಗೆ ಸರಿಗಂಡದ್ದನ್ನು ಆರಿಸಿಕೋ."

"ರಾಣಾ!' ರಣಮಲ್ಲನು ಗಾಂಭೀರ್ಯದಿಂದ:—"ಅನ್ಯಾಯಿಯಾದ ರಾಜನ ಸೇವೆ ಮಾಡಿ ಪಾಪ ಗಳಿಸುವದಕ್ಕಿಂತ, ಮೃತ್ಯುವನ್ನು ಸ್ವೀಕರಿಸುವದು ಶ್ರೇಯಸ್ಕರವಲ್ಲವೆ?"

ರಾಣಾನು ಸಿಂಹಾಸನದಿಂದೆದ್ದು ಕಂಪಿತಧ್ವನಿಯಿಂದ:—"ಬಹಳೇ ಉತ್ತಮವು. ಬಹಳೇ ಉತ್ತಮವು! ಹಾಗಾದರೆ ನೀನು ಮರಣಕ್ಕೆ ಸಿದ್ಧನಾಗು. ನಾಳೆ ಸುರ್ಯೋದಯವಾಗುತ್ತಲೆ ಓಲಗದ ಪಟಾಂಗಣದಲ್ಲಿ ನಿನ್ನನ್ನು ಶೂಲಕ್ಕೇರಿಸಬೇಕೆಂದು ತೀರ್ಪು ಮಾಡಿದ್ದೇನೆ."

ತೀರ್ಮಾನವನ್ನು ಕೇಳಿದೊಡನೆಯೆ ಓಲಗವು ಸ್ತಬ್ಧವಾಯಿತು ಆಕಾಶದೊಳಗಿನ ಸಜಲ ಮೇಘಗಳು ಒಂದಕ್ಕೊಂದು ತಾಕಲಾಡಿ ಜಲಧಾರೆಯನ್ನು ಸುರಿಸುವಂತೆ, ಮಯೂರಧ್ವಜನ ಹೃದಯದಲ್ಲಿ ಕಲ್ಪನಾಮೇಘಗಳು ಪರಸ್ಪರ ಆಘಾತದಿಂದ ಮಮತಾರೂಪಿಯಾದ ಜಲಧಾರೆಗಳನ್ನು ಸುರಿಸತೊಡಗಿದ್ದವು. ರಾಣಾನು ತಂಬಿದ ಸಭೆಯಲ್ಲಿ 'ನಿನ್ನಂತಹ ತೇಜಸ್ವಿಯಾದ ಪುತ್ರನು ನನಗಿರುತ್ತಿದ್ದರೆ, ನಾನು ಅವನ ಪ್ರಾಣರಕ್ಷಣೆಗಾಗಿ ರಾಜ್ಯತ್ಯಾಗ ಮಾಡಲಿಕ್ಕೆ ಸಹ ಹಿಂದುಮುಂದೆ ನೋಡುತ್ತಿದ್ದಿಲ್ಲ.' ಎಂದು ಆಡಿದ ಮಾತುಗಳು ಅವನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮಕಾರಿಯಾಗಿದ್ದವು. ಮಾನವೀ ಹೃದಯವು ಯಾವಾಗಲೂ ವಾತ್ಸಲ್ಯಶೂನ್ಯವಿರುವದಿಲ್ಲವೆಂಬ ಸಂಗತಿಯು ಈಗ ಅವನ ಮನವರಿಕೆಯಾಯಿತು. ಕೂಡಲೆ ಅವನು ಅಸನವನ್ನು ಬಿಟ್ಟು ಎದ್ದು ನಿಂತನು. ಆಗ ಓಲಗದೊಳಗಿನ ಎಲ್ಲ ಜನರೂ ಅವ

ನನ್ನು ಚಕಿತದೃಷ್ಟಿಯಿಂದ ನೋಡತೊಡಗಿದರು. ರಾಣಾನ ದೃಷ್ಟಿಯೂ ಅವನ ಮೇಲೆ ಬಿದ್ದಿತು. ಕೂಡಲೆ ಕಂಪಿತ ವಾಣಿಯಿಂದ ಅವನು ರಾಣಾನನ್ನು ಕುರಿತು:—"ಮಹಾರಾಜ!"

ರಾಣಾನು ಅವನ ಕಡೆಗೆ ದೃಷ್ಟಿಯನ್ನು ಸ್ಥಿರಪಡಿಸಿ:—"ಮಾತಾಡಿರಿ, ಸೇನಾಪತಿಗಳೆ!"

"ಯಾವ ವೇಳೆಯಲ್ಲಿ ನಾನು ನನ್ನ ಬಂಧುವಿನ ರಕ್ತಮಯ ಮಸ್ತಕ ವನ್ನು ತಮ್ಮ ಚರಣಕ್ಕರ್ಪಿಸಿದೆನೋ, ಆಗ ನೀವು ನನಗೆ ದೊಡ್ಡ ಜಹಗೀರಿ ಯನ್ನು ಪಾರಿತೋಷಕವಾಗಿ ಕೊಡುವ ಇಚ್ಛೆಯನ್ನು ಪ್ರಕಟಿಸಿದ್ದಿರಿ; ಆದರೆ ಆಗ ನಾನು ಸಂಭಾವನೆಯು ಅವಶ್ಯವಿಲ್ಲೆಂದು ಹೇಳಿದ್ದೆನು. ನನ್ನ ಕರ್ತವ್ಯದ ಬಗ್ಗೆ ನಿಜವಾಗಿ ನೀವು ಸಂತುಷ್ಟರಾಗಿದ್ದರೆ, ನಾನು ಇಂದು ಪಾರಿತೋಷಕ ವನ್ನು ಪಡೆಯಲಿಚ್ಛಿಸಿರುವೆನು. ಮಹಾರಾಜರೆ, ಇಂದು ನನ್ನ ಇಚ್ಛೆಯನ್ನು ಈಡೇರಿಸುವಿರಾ?"

ರಾಯಸಿಂಹನು ಸೇನಾಪತಿಯ ಭಾವವನ್ನು ತಿಳಿದನು. ಆದರೂ ಅವನು ಅರಿಯದವನಂತೆ:—"ಸೇನಾಪತಿಗಳೆ, ಯಾವ ಪಾರಿತೋಷಕ ಬೇಕು?"

"ಜೀವನಕ್ಕೆ ಪ್ರತಿಯಾಗಿ ಜೀವನವು; ಪ್ರಾಣಕ್ಕೆ ಪ್ರತಿಯಾಗಿ ಪ್ರಾಣವು! ನಾನು ನಿಮಗೆ ನನ್ನ ಬಂಧುವಿನ ಪ್ರಾಣವನ್ನು ಅರ್ಪಿಸಿದೆನು; ನೀವು ಅದಕ್ಕೆ ಪ್ರತಿಫಲವೆಂದು ನನಗೆ ನನ್ನ ಬಂಧುವಿನ ಪುತ್ರನಾದ ಈ ರಣಮಲ್ಲನ ಪ್ರಾಣ ದಾನಮಾಡಬೇಕು."

'ಇಂತಹ ಬೇಡಿಕೆಯನ್ನು ಮುಂದುವರಿಸಿದ ಕಾರಣವೇನು?' ಜಿಜ್ಞಾಸೆ-ಕಠೋರತೆಗಳಿಂದ ರಾಣಾನು ಪ್ರಶ್ನೆ ಮಾಡಿದನು.

"ಹೃದಯದ ವಾತ್ಸಲ್ಯ! ಹೃದಯದ ಮಮತೆ! ನೈಸರ್ಗಿಕ ವ್ಯಾಮೋಹ! ಇನ್ನಾವ ಕಾರಣವು ಬೇಕು?" ದುಃಖಿತ ಹೃದಯಿಯಾದ ಮಯೂರಧ್ವಜನು ಉತ್ತರವಿತ್ತನು.

"ಏನು! ಮಮತೆಯೆ? ಸೇನಾಪತಿಗಳೇ, ನೀವು ನಿಮ್ಮ ಬಂಧುವಿನ ಕಡೆಗೆ ಹೊರಡುವ ಪೂರ್ವದಲ್ಲಿ ನಾನು ಮಮತೆಯ ಸ್ಮರಣೆ ಮಾಡಿಕೊಟ್ಟದ್ದು ನಿಮ್ಮ ನೆನಪಿನಲ್ಲಿರಬಹುದು. ಆಗ ನೀವು ಏನು ಉತ್ತರ ಕೊಟ್ಟಿದ್ದಿರೆಂಬ ದಾದರೂ ಗೊತ್ತಿರಬಹುದು. 'ಮಮತೆಯು ತಾಯಿಯ ಹೃದಯದಲ್ಲಿರು ತ್ತದೆ; ಮಮತೆಯು ಸ್ತ್ರೀಯ ಆಲಿಂಗನದಲ್ಲಿರುತ್ತದೆ; ವಿಲಾಸ-ಸುಖಗಳ ಲಾಲಸೆಯಲ್ಲಿ ಮಮತೆಯ ವಾಸ್ತವ್ಯವಿರುತ್ತದೆ. ಕರ್ತವ್ಯ ಪಾಲನೆಯಲ್ಲಿ ಮಮತೆಯು ಹೇಗೆ ಬರುವದು? ಕರ್ತವ್ಯವು ಕರ್ತವ್ಯವೇ! ಆದರಿಂದ ದುಃಖ

ವಾಗಲಿ, ಸುಖವಾಗಲಿ ಅವುಗಳ ಪರಿವೆಯು ಕರ್ತವ್ಯಪಾಲನೆ ಮಾಡುವವನಿಗೆ ಇರುವದಿಲ್ಲ.' ಮೊದಲಾದ ಮಾತುಗಳನ್ನು ನೀವು ನಿಮ್ಮ ಮುಖದಿಂದಲೇ ಹೊರಡಿಸಿರಲಿಲ್ಲವೆ?"

ಮಯೂರಧ್ವಜನು ಸ್ವಲ್ಪ ವೇಳೆಯ ವರೆಗೆ ನಿರುತ್ತರನಾಗಿದ್ದನು; ಯಾಕಂದರೆ, ರಾಣಾನೆದುರಿಗೆ ಆವೇಶದ ಭರದಲ್ಲಿ ಅವನು ಆ ಮಾತುಗಳನ್ನು ಆಡಿದ್ದನು ಕೆಲವು ವೇಳೆಯ ವರೆಗೆ ವಿಚಾರ ಮಾಡಿ, ಅವನು ರಾಣಾನನ್ನು ಕುರಿತು:—"ರಾಣಾಜಿ, ವಾತ್ಸಲ್ಯದ ಹೊಟ್ಟೆಯಲ್ಲಿ ಜನಿಸಿದ ಮಮತೆಯು ಪ್ರಚಂಡವಾದ ಲತ್ತಾಪ್ರಹಾರದಿಂದ ಸಹ ನಾಶವಾಗುವದಿಲ್ಲ. ಇದಕ್ಕಾಗಿ ನಾನು ನಿರುಪಾಯನಾಗಿರುವೆನು.'

"ಇವನನ್ನು ಜೀವಂತವಾಗಿ ಬಿಟ್ಟರೆ ನಗದೇಶದ ಅನಿಷ್ಟ ಚಿಂತನೆಗಾಗಿ ಇವನು ಅವ್ಯಾಹತವಾಗಿ ಯತ್ನಿಸುವನು; ಹಾಗು ನನ್ನ ಪ್ರಾಣಕ್ಕೆ ಮುಳುವು ಆಗುವನು. ಸದ್ಯಕ್ಕೆ ನಗದೇಶಕ್ಕೆ ಇವನ ಹೊರತು ಬೇರೆ ಯಾರೂ ಶತ್ರುಗಳಿಲ್ಲ ಇಂತಹ ಪ್ರಬಲ ಶತ್ರುವನ್ನು ಬಿಡುವದೆಂದರೆ, ಗಂಡಾಂತರಕ್ಕೆ ನಿಮಂತ್ರಣ ಕೊಟ್ಟಂತಾಗುವದಿಲ್ಲವೆ?"

"ರಾಣಾಜಿ, ಸಂತಾನಸ್ನೇಹವು ಅನಿವಾರ್ಯವಿರುವದು. ಅದಕ್ಕಾಗಿ ನಾನು ಇವನ ಜೀವದಾನ ಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುವೆನು. ನಿಮ್ಮ ಪ್ರಶ್ನೆಗಳಿಗೆ ನಾನು ನಿಶ್ಚಿತವಾದ ಉತ್ತರ ಕೊಡಲಾರೆನು."

"ಸೇನಾಪತಿಗಳೇ, ರಾಜನೀತಿ ರಕ್ಷಣೆಯಲ್ಲಿಯೂ ಕರ್ತವ್ಯ ಪಾಲನೆಯಲ್ಲಿಯೂ ಮಮತೆ-ಸ್ನೇಹಗಳು ನಿರುಪಯುಕ್ತವಾಗಿರುವವು ನೀವು ಕರ್ತವ್ಯಶೀಲರಿರುವದರಿಂದ ಕರ್ತವ್ಯದ ಮಾತನಾಡಿರಿ. ನಾನು ಇವನನ್ನು ಬಿಡುಗಡೆ ಮಾಡಲಿಕ್ಕೆ ಅಸಮರ್ಥನಿರುವೆನು"

"ನನ್ನ ಸೇವೆಯನ್ನು ಲಕ್ಷ್ಯದಲ್ಲಿ ತಂದೂ ಸಹ ಇವನನ್ನು ಮುಕ್ತಗೊಳಿಸಲು ಸಾಧ್ಯವಿಲ್ಲವೆ?" "ಇಲ್ಲ!"

"ನನ್ನ ಸ್ವಾಮಿಭಕ್ತಿಯನ್ನು ತಕ್ಕಡಿಯ ಒಂದು ಪರಡಿಯಲ್ಲಿ ಹಾಕಿಯಾದರೂ........"

"ಈ ಪ್ರಶ್ನೆಗಾದರೂ 'ಇಲ್ಲ' ಎಂದೇ ರಾಜನೀತಿಯು ಉತ್ತರಿಸುವದು."

'ಪ್ರಿಯಬಂಧುವಿನ ಪುತ್ರನಾದೀ ನನ್ನ ವಾತ್ಸಲ್ಯದ ರಣಮಲ್ಲನ ವಿಷಯವಾಗಿ ಕರುಣಾರ್ದ್ರತೆಯನ್ನು ಹೊಂದಿದ ನನ್ನ ಹೃದಯದ ಕಡೆಗೆ ಲಕ್ಷ್ಯಗೊಟ್ಟಾದರೂ?'

"ರಾಜಕಾರಣದಲ್ಲಿ ಹೃದಯಕ್ಕೆ ಸ್ಥಳವಿಲ್ಲ. ಅಲ್ಲಿ ನ್ಯಾಯ-ಕರ್ತವ್ಯ

ಗಳಿಗೆ ಆಸ್ಪದವುಂಟು." ರಾಣಾನು ದೃಢನಿಶ್ಚಯದಿಂದ ನುಡಿದನು.

"ದಯಾ ಯಾಚನೆ ಮಾಡುವ ನನ್ನ ಕರುಣಾಸ್ವರವನ್ನು ಕೇಳಿಯಾದರೂ ರಣಮಲ್ಲನನ್ನು ಮುಕ್ತಗೊಳಿಸಲಾರಿರಾ?"

"ರಾಜಧರ್ಮವು ನಿಮ್ಮ ಯಾಚನೆಯನ್ನು ಮನ್ನಿಸುವದಿಲ್ಲ."

ಮಯೂರಧ್ವಜನು ಕೈ ಜೋಡಿಸಿ ದೀನವಾಣಿಯಿಂದ:--"ಮಹಾರಾಜಾಧಿರಾಜರೇ, ನಗದೇಶದ ಮುಕುಟಮಣಿಗಳೇ, ದುಃಖಾಶ್ರುಪೂರ್ಣವಾದ ನನ್ನ ನೇತ್ರಗಳನ್ನೂ, ಮಮತೆಯ ಪುತ್ರನ ಮೇಲೆ ಬಂದ ಗಂಡಾಂತರದಿಂದುಂಟಾದ ದೇಹಕಂಪನವನ್ನೂ ನೋಡಿಯಾದರೂ ದಯೆದೋರಲಾರಿರಾ?"

"ಕಣ್ಣೀರುಗಳೂ, ದೇಹಕಂಪನವೂ, ಹೃದಯದ ಕರುಣಧ್ವನಿಯೂ ರಾಜಶಾಸನದಲ್ಲಿ ನಿರರ್ಥಕವಾಗಿವೆ." ಎಂದು ರಾಣಾನು ಕಠೋರತೆಯಿಂದ ಹೇಳಿದನು.

ಮಯೂರಧ್ವಜನು ನಿರುಪಾಯನಾದನು. ಅವನ ಹೃದಯದಲ್ಲಿ ಅನೇಕ ವಿಧದ ವಿಚಾರಗಳ ಆಲೆದಾಟವು ನಡೆಯಿತು. ಸ್ವಲ್ಪ ವೇಳೆಯಲ್ಲಿ ಅವನು ಮನದಲ್ಲಿ ಏನನ್ನೋ ನಿಶ್ಚಯಿಸಿಕೊಂಡನು. ಕೂಡಲೆ ಅವನ ಮುಖದಲ್ಲಿ ನಿಷ್ಠುರಭಾವವು ವ್ಯಕ್ತವಾಗತೊಡಗಿತು. ಕಣ್ಣುಗಳು ತೇಜಸ್ವಿಯಾದವು. ಆಗ ಅವನು ಗಾಂಭೀರ್ಯದಿಂದಲೂ ಸಂತಾಪದಿಂದಲೂ:--"ರಾಣಾಜಿ! ನಿಮ್ಮ ರಾಜನೀತಿಯು ಅಂತಹ ಕಟ್ಟುನಿಟ್ಟಿನದಿದ್ದರೆ, ಈ ಖಡ್ಗವನ್ನೂ ಸೇನಾಪತಿ ಪದವನ್ನೂ ತೆಗೆದುಕೊಳ್ಳಿರಿ!"

ಮಯೂರಧ್ವಜನು ಖಡ್ಗವನ್ನೂ ಶಿರಸ್ತ್ರಾಣವನ್ನೂ ರಾಜಸಿಂಹಾಸನದ ಮುಂದಿಟ್ಟನು. ರಾಣಾನು ಚಕಿತಮುದ್ರೆಯಿಂದ ಅವನನ್ನು ನೋಡತೊಡಗಿದನು. ಓಲಗವು ಬೆರಗಾಯಿತು!

'ಮಹಾರಾಜರೆ!' ಮಯೂರಧ್ವಜನು ತನ್ನ ಓಜಸ್ವಿಯಾದ ವಾಣಿಯಿಂದ:-"ಯಾವ ಸ್ವಾಮಿಯು ಸೇವಕನ ಸೇವೆಯ ಬೆಲೆಯನ್ನು ತಿಳಿಯುವನೋ ಅವನ ಸೇವೆಯನ್ನೇ ಮಾಡಬೇಕು. ಭಕ್ತನ ಭಕ್ತಿಯನ್ನು ಅರಿಯದಂತಹ ದೇವರ ಆರಾಧನೆಯಿಂದ ಪ್ರಯೋಜನವೇನು? ರಾಣಾಜಿ, ಇಂದಿನವರೆಗೆ ನಿಮ್ಮ ಸೇವೆಯಲ್ಲಿಯೂ ಭಕ್ತಿಯಲ್ಲಿಯೂ ಯಾವ ಉತ್ಕಟತೆಯನ್ನು ತೋರಿಸಿರುವೆನೋ, ಅದರ ಶತಾಂಶವನ್ನಾದರೂ ದೇವರ ವಿಷಯಕ್ಕೆ ತೋರಿಸಿದ್ದರೆ, ಇಂದಿನ ನನ್ನ ಯಾಚನೆಯು ಎಂದೂ ನಿಷ್ಫಲವಾಗುತ್ತಿದ್ದಿಲ್ಲ; ಕೈ ಜೋಡಿಸಿ ಬೇಡಿದ ಬೇಡಿಕೆಯು ನಿರರ್ಥಕವಾಗುವಂತಿರಲಿಲ್ಲ. ನನ್ನ ದುಃಖಾಶ್ರುಗಳ ಹಾಗು ಕರುಣಾಹೃದಯದ ಮತ್ತು ದೇಹಕಂಪನದ ಉತ್ತರವು ನನಗೆ

ಸಿಗುತ್ತಿತ್ತು. ನನ್ನ ವಿನಯದ ಮೇಲೆ ಕುಠಾರ ಪ್ರಹಾರವಾಗುತ್ತಿದ್ದಿಲ್ಲ. ಮಹಾರಾಜರೆ, ಇದರಲ್ಲಿ ಬೇರೆಯವರ ತಪ್ಪಿಲ್ಲ; ಸೇವಕನ ಸೇವೆಯ ಮಹತ್ವವನ್ನರಿಯದಂತಹ ಸ್ವಾರ್ಥಿಯಾದ ಸ್ವಾಮಿಯಲ್ಲಿ ಆಶ್ರಯ ಹೊಂದಿಕೊಂಡಿದ್ದ ನನ್ನದೇ ತಪ್ಪು! ಉಪಾಯವಿಲ್ಲ.''

ವೀರಸೇನಾಪತಿಯ ನೇತ್ರಗಳಿಂದ ಅಶ್ರುಗಳು ಧಾರೆಗಟ್ಟಿ ಹರಿಯತೊಡಗಿದ್ದವು. ದುಃಖಿತ ಹೃದಯಿಯಾದ ಅವನನ್ನು ನೋಡಿ ಓಲಗದೊಳಗಿನ ಪ್ರತಿಯೊಬ್ಬನ ಅಂತಃಕರಣವೂ ದ್ರವಿಸಿತು. ರಾಣಾಜಿಯ ಮನಸ್ಸಾದರೂ ಹೊಯ್ದಾಡತೊಡಗಿತು. ಕೂಡಲೆ ಅವನ ದೃಷ್ಟಿಯು ಸೆರೆಯಾಳಾಗಿದ್ದ ರಣಮಲ್ಲನ ಮೇಲೆ ಬಿತ್ತು. ಆ ಪ್ರಚಂಡಕಾಯದ ಭೀಮಶಕ್ತಿಯ ರಣಮಲ್ಲನನ್ನು ನೋಡಿದೊಡನೆಯೆ ಅವನ ಮನಃಸ್ಥಿತಿಯು ಮುನ್ನಿನಂತಾಯಿತು. ಇಂತಹ ಶೂರ ಸಾಹಸಿಯನ್ನು ಜೀವದಿಂದ ಬಿಟ್ಟರೆ, ಈತನು ತನಗೆ ಮೃತ್ಯುವಾಗದಿರಲಾರನೆಂದು ಅವನ ಮನವರಿಕೆಯಾಯಿತು.

ಮಯೂರಧ್ವಜನ ಮನಃಸ್ಥಿತಿಯನ್ನು ನೋಡಿ ರಣಮಲ್ಲನ ಹೃದಯವು ಕರಗಿತು. ಜಗತ್ತಿನಲ್ಲಿ ಸಂತಾನಪ್ರೇಮಹೀನನು ಯಾವನೂ ಇಲ್ಲವೆಂದು ಅವನು ತಿಳಿದನು.

ಮಯೂರಧ್ವಜನ ಮಾತಿಗೆ ಏನು ಉತ್ತರ ಕೊಡಬೇಕೆಂಬ ವಿಷಯದಲ್ಲಿ ರಾಣಾನು ಅರ್ಧಗಳಿಗೆ ಕಳೆದನು. ಆಗ ಅವನು ಏನೋ ನಿರ್ಧರಿಸಿ:—''ಸೇನಾಪತಿಗಳೇ, ನೀವು ಇಂದಿನ ವ್ಯವಹಾರದಿಂದ ಇವತ್ತಿನ ವರೆಗೆ ಮಾಡಿದ ಸೇವೆಯನ್ನು ಹಾಳು ಮಾಡತೊಡಗಿರುವಿರಿ.''

''ಮಹಾರಾಜ!'' ಮಯೂರಧ್ವಜನು ಸ್ಪಷ್ಟವಾಣಿಯಿಂದ:—''ಮನುಷ್ಯರ ಸೇವೆಯೆಂದರೇನು? ಅದೊಂದು ಪುಣ್ಯವಲ್ಲ, ಪುರುಷಾರ್ಥವಲ್ಲ. ಅದರಲ್ಲಿ ಹಿತವನ್ನರಿಯದವರ ಸೇವೆಯಂತೂ ಯಾತಕ್ಕೂ ಉಪಯೋಗವಿಲ್ಲ. ಇಂದಿನವರೆಗೆ ಮಾಡಿದ ಸೇವೆಯ ಗಳಿಕೆಯು ಏನಾದರೂ ಇದ್ದರೆ ತಾನೇ ಹಾಳಾಗುವದಷ್ಟೇ? ನನ್ನ ಸೇವಾಧರ್ಮದ ಪಾರಜವು ಶೂನ್ಯಾಂಶದಲ್ಲಿರುವದು. ಇನ್ನು ಮುಂದೆ ನಾನು ಬರಿಯ ಪರಮಾತ್ಮನ ಸೇವೆಯನ್ನಷ್ಟೇ ಮಾಡತಕ್ಕವನು. ಅವನು ನಿಜವಾದ ದಯಾಸಾಗರನು. ಭಕ್ತನ ಭಕ್ತಿಸ್ಪರ್ಶದಿಂದಲೂ, ಸೇವಕನ ಯಾಚನೆಯ ಉಷ್ಣತೆಯಿಂದಲೂ ಅವನ ಹೃದಯವು ನೀರಿಗಿಂತ ನೀರಾಗುವದು. ಇನ್ನು ಮೇಲೆ ನಾನು ಆ ದಯಾಘನನ ಸೇವೆಯಲ್ಲಿ ಶೇಷಾಯುಷ್ಯವನ್ನು ಕಳೆಯುವೆನು. ನೀವು ರಾಜಶಾಸನವನ್ನು ಅವಶ್ಯವಾಗಿ ಪೂರೈಸಿರಿ. ಇಡೀ ಜಗತ್ತಿನಲ್ಲಿಯ ನನ್ನ ಒಂದೇ ಒಂದು ಮಮತಾಂಶವನ್ನು ನಾಶಮಾಡಿ,

ನಗದೇಶದ ಕಲ್ಯಾಣವನ್ನು ಸಾಧಿಸಿರಿ. ಉಪಕಾರ, ಭಕ್ತಿ, ಸೇವೆಗಳಿಗಿಂತ ಹೆಚ್ಚಿನದಾದ ನಗದೇಶವು ನಿಮಗೆ ಅತ್ಯಂತ ಬೆಲೆಯುಳ್ಳದ್ದಾಗಿರುವದು. ನೀವು ನಿಮ್ಮ ರಾಷ್ಟ್ರವನ್ನು ಅವಶ್ಯವಾಗಿ ಜತನ ಮಾಡಿರಿ ಇಂದಿನಿಂದ ನಾನು ಅಧಿಕಾರತ್ಯಾಗ ಮಾಡುವೆನು. ನಾನು ಈಗಲೆ ಹೊರಟು ಹೋಗುವೆನು. ಪ್ರಸಂಗವೊದಗಿದರೆ, ಮಾತೃಭೂಮಿಯಾದ ನಗದೇಶದ ಸೇವೆಯನ್ನು ಮಾಡಿ ತೋರಿಸಿಯೇ ತೋರಿಸುವೆನು. ಬರುತ್ತೇನೆ; ನಿಮಗೂ ನಿಮ್ಮ ಸಿಂಹಾಸನಕ್ಕೂ ಪ್ರಣಾಮಗಳಿರಲಿ!"

ಸ್ವಾಮಿನಿಷ್ಠನೂ, ಕರ್ತವ್ಯದಕ್ಷನೂ, ಸ್ವಾಮಿಸೇವಾ ಧುರಂಧರನೂ ಆದ ಮಯೂರಧ್ವಜ ಸೇನಾಪತಿಯು ವಿದ್ದ್ಯುದ್ವೇಗದಿಂದ ಓಲಗವನ್ನು ಬಿಟ್ಟು ತೆರಳಿದನು!

---

## ವಿಸ್ಮಯಜನಕವಾದ ವಿಜಯ!

ಮಯೂರಧ್ವಜನು ಅಧಿಕಾರತ್ಯಾಗ ಮಾಡಿ ಹೊರಟು ಹೋದದ್ದರಿಂದ, ಎಲ್ಲ ಸಭಿಕರೂ ಪರಮಾಶ್ಚರ್ಯಗೊಂಡರು. ರಾಣಾನ ಕಠೋರವೃತ್ತಿಯ ಬಗ್ಗೆ ಎಲ್ಲರೂ ಅವನನ್ನು ಮನಸ್ಸಿನಲ್ಲಿಯೇ ನಿಂದಿಸತೊಡಗಿದರು ಸಭೆಯಲ್ಲಿ ಶಾಂತತೆಯು ಪ್ರಸ್ಥಾಪಿತವಾಗಿತ್ತು. ಯಾರ ಮುಖದಿಂದಲೂ ಒಂದು ಶಬ್ದವು ಕೂಡ ಹೊರಡದಾಗಿತ್ತು. ರಾಣಾನು ಆ ಶಾಂತತೆಯನ್ನು ಒಮ್ಮೆಲೆ ಭಂಗಗೊಳಿಸಿ ಉಚ್ಚಕಂಠದಿಂದ:—"ಸೇನಾಪತಿಗಳು ವ್ಯಾಮೋಹದಲ್ಲಿ ಸಿಲುಕಿ, ಸ್ವಕರ್ತವ್ಯವನ್ನು ಮರೆತರು. ಅವರು ಹಾಗೆ ಮಾಡಿದರೆಂದು ನಾನು ರಾಜಧರ್ಮವನ್ನು ಬಿಡುವಂತಿಲ್ಲ ಸೈನಿಕರೇ, ಈ ಸೆರೆಯಾಳನ್ನು ಈಗ ತೆಗೆದುಕೊಂಡು ಹೋಗಿರಿ. ನಾಳೆ ಮುಂಜಾನೆ ಇವನನ್ನು ಓಲಗದ ಪಟಾಂಗಣದಲ್ಲಿ........"

ರಾಣಾನು ಹೀಗೆ ನುಡಿಯುವಷ್ಟರಲ್ಲಿ ಒಂದು ಸೋಜಿಗದ ಸಂಗತಿಯು ಘಟಿಸಿ ಸಭಿಕರೆಲ್ಲರನ್ನೂ ದಂಗುಬಡಿಸಿತು! ರಾಜಕುಮಾರಿ ಶೀಲವತಿಯು ಅವಸರದಿಂದ ಸಭೆಯನ್ನು ಪ್ರವೇಶಿಸಿ:—"ಪಿತಾಜಿ! ನೀವು ಇನ್ನೂ ನಿಮ್ಮ ನಿಶ್ಚಯವನ್ನು ಬಿಟ್ಟಿಲ್ಲವೆ?" ಎಂದು ಪ್ರಶ್ನೆ ಮಾಡಿದಳು.

ಈ ಪ್ರಸಂಗದಲ್ಲಿ ಶೀಲವತಿಯು ಬಂದು ಮೇಲಿನಂತೆ ವಿಚಾರಿಸಿದ್ದನ್ನು ಕೇಳಿ, ರಾಣಾನೂ ಓಲಗದ ಜನರೂ ವಿಸ್ಮಿತರಾದರು. ರಣಮಲ್ಲನ ರಕ್ಷಣೆಗಾಗಿ ಶೀಲವತಿಯು ಪ್ರಯತ್ನಿಸಬಂದದ್ದರ ಇಂಗಿತವೇ ಸಭಿಕರಿಗೆ ತಿಳಿಯದಾಯಿತು.

ಶೀಲವತಿಯ ಮಾತುಗಳನ್ನು ಕೇಳಿ ರಾಣಾನು ನಿಶ್ಚಯವಾಣಿಯಿಂದ:

"ಪುತ್ರೀ, ಉಪಾಯವಿಲ್ಲದಾಗಿದೆ. ನಾನು ನ್ಯಾಯದಾನಕ್ಕಾಗಿ ರಾಜಸಿಂಹಾಸನದ ಮೇಲೆ ಕುಳಿತಿರುವೆನು. ಅಪರಾಧಿಗೆ ದಯೆದೋರಿದರೆ, ನಾನು ನಗದೇಶ ರಾಷ್ಟ್ರದ ಅಹಿತಚಿಂತನೆ ಮಾಡಿದಂತಾಗುವದು. ಅಪಾತ್ರದಲ್ಲಿ ದಯೆದೋರುವದು ಅನುಚಿತವಾಗಿರುವದು."

"ಅಪಾತ್ರದಲ್ಲಿ ದಯೆದೋರಲಿಕ್ಕೆ ಯಾರೂ ಹೇಳುತ್ತಿರುವದಿಲ್ಲ. ಋಣವನ್ನು ಋಣದಿಂದ ಇಳಿಸದಂತಹ ನ್ಯಾಯವು ಏನು ಕೆಲಸದ್ದು? ಮಾನವೀ ಹೃದಯದ ನೈಸರ್ಗಿಕ ಉಪಕಾರವೃತ್ತಿಯು ಕೊಲೆಮಾಡುವಂತಹ ನ್ಯಾಯದ ಹಾಗು ರಾಜಶಾಸನದ ಬೆಲೆಯೇನು? ಯಾವನು ಉಪಕಾರಕ್ಕಾಗಿ ಪ್ರತ್ಯುಪಕಾರ ಮಾಡುವದಿಲ್ಲವೋ, ಅವನ ಪ್ರತಿಷ್ಠೆಯು ನಾಶವಾಗುವದಿಲ್ಲವೆ?"

"ಕುಮಾರಿ, ಸುಮ್ಮನೆ ದಾವತಿ ಮಾಡಿ ದಣಿದುಕೊಳ್ಳಬೇಡ. ನಾನು ಈ ಅಪರಾಧಿಗೆ ಕ್ಷಮಾದಾನ ಮಾಡಲಾರೆನು. ಇವನು ನಗದೇಶ ರಾಷ್ಟ್ರದ ಹಾಗು ಪ್ರಜಾಜನರ ಅಸ್ಥಿವೈರಿಯಿರುವನು."

'ಹಾಗಿದ್ದರೆ ಶತ್ರುವನ್ನು ಜಯಿಸಿ ಸ್ವಾಧೀನಪಡಿಸಿಕೊಳ್ಳುವದಿಲ್ಲವೇಕೆ?"

"ಹೇಗೆ ವಶಪಡಿಸಿಕೊಳ್ಳಬೇಕು?"

"ಔದಾರ್ಯವನ್ನು ತೋರಿಸಿ ಹಾಗು ಕ್ಷಮಾಗುಣವನ್ನು ಅವನ ಮುಂದಿರಿಸಿ; ಕಠೋರತೆಯ ಬದಲಾಗಿ ಕೋಮಲತೆಯನ್ನು ತೋರಿಸಿ! ಪಿತಾಜಿ, ಪಶ್ಚಾತ್ತಾಪದ ಖಡ್ಗದಿಂದ ಇವನು ವಶನಾಗುವದಿಲ್ಲವೆ?"

"ಪ್ರಿಯ ಪುತ್ರೀ, ಔದಾರ್ಯ, ಕ್ಷಮೆ, ಕೋಮಲತೆಗಳಿಗೆ ಮನೆಯಲ್ಲಿ ಆಸ್ಪದ ದೊರಯುವದು; ಆದರೆ ನ್ಯಾಯಸಭೆಯಲ್ಲಿ ರಾಜಶಾಸನವನ್ನು ಪ್ರಚಾರದಲ್ಲ ತರುವಾಗ, ಅವು ನಿರರ್ಥಕವಾಗಿವೆ. ದಂಡನೆ, ಭೀತಿ, ರಾಜಶಾಸನ, ಆಜ್ಞಾಪಾಲನ ಮೊದಲಾದವುಗಳು ಇಲ್ಲಿ ಅವಶ್ಯಕವಾಗಿವೆ. ನಾನು ಮನಸ್ಸಿನಲ್ಲ ದೃಢಪಡಿಸಿಕೊಂಡಂತೆ ವರ್ತಿಸುವೆನು. ಈ ವಿಷಯದಲ್ಲಿ ನೀನು ವ್ರಥಾ ದುರಾಗ್ರಹಗೊಳ್ಳಬೇಡ."

"ಏನು, ನನ್ನ ಅಭಿಪ್ರಾಯವನ್ನು ನ್ಯಾಯವು ಮನ್ನಿಸುವದಿಲ್ಲವೆ? ಅದು ನಿಮ್ಮ ಪಕ್ಷಪಾತಿಯಾಗಿರುವದೆ? ನನ್ನ ಪಕ್ಷವನ್ನು ಹಿಡಿಯುವಂತಿಲ್ಲವೇ?"

"ಅರಸೊತ್ತಿಗೆಯ ಅಧಿಕಾರದಿಂದ ಈ ಅಪರಾಧಿಗೆ ದಂಡನೆ ಮಾಡುವದೊಂದೇ ಕರ್ತವ್ಯವು ನನಗೆ ಉಳಿದದೆ. ನಾನು ನ್ಯಾಯದ ದಾಸನು. ನ್ಯಾಯವು ವಿಧಿಸಿದ ತೀರ್ಪನ್ನು ತಿರುಗಿಸುವದು, ರಾಜನಾಗಿದ್ದರೂ ನನಗೆ ಅಸಾಧ್ಯವಿರುವದು."

ರಾಜನ ಖಂಡಿತವಾದ ಉತ್ತರದಿಂದ ರಾಜಕುಮಾರಿಯ ಹೃದಯದ

ಮೇಲೆ ವಜ್ರಾಘಾತವಾದಂತಾಯಿತು. ಅವಳು ಸಿಂಹಾಸನದ ಬಳಿಗೆ ಹೋಗಿ ಕೈಜೋಡಿಸಿ:---"ಪಿತಾಜಿ, ಪಿತಾಜಿ, ನಾನು ನಿಮಗೆ ಒಳ್ಳೇ ವಾತ್ಸಲ್ಯದ ಪುತ್ರಿಯಲ್ಲವೆ? ನಿಮ್ಮ ಹೃದಯದೊಳಗಿನ ವಾತ್ಸಲ್ಯವು ನಾನೇ ಇರುವೆನಲ್ಲವೆ? ನಿಮ್ಮ ಮಮತೆಯ ಪುತ್ರಿಯ ಈ ಯಾಚನೆಯನ್ನು ಈಡೇರಿಸುವದಿಲ್ಲವೆ? ನನ್ನ ಬೇಡಿಕೆಯನ್ನು ಪೂರ್ಣವಾಗಿ ನೆರವೇರಿಸದಿದ್ದರೆ, ಅಲ್ಪವನ್ನಾದರೂ ಈಡೇರಿಸಿರಿ. ಈ ಸೆರೆಯಾಳಿಗೆ ಪ್ರಾಣದಂಡನೆಯನ್ನು ವಿಧಿಸದೆ, ಆಜನ್ಮವಾಗಿ ಕಾರಾಗೃಹದಲ್ಲಿಡಿರಿ. ಆ ಮೇಲೆ ನಗದೇಶಕ್ಕೆ ಇವನಿಂದ ಅನಿಷ್ಟವೊದಗುವ ದೆಂಬ ಭಯವು ಉಳಿಯುವದಿಲ್ಲವಷ್ಟೆ? ನೀವು ಈ ವೀರ ರಣಮಲ್ಲನಿಗೆ ಪ್ರಾಣ ದಾನ ಮಾಡಲಿಕ್ಕೇ ಬೇಕು. ಇಷ್ಟೇ ನನ್ನ ಕೊನೆಯ ಪ್ರಾರ್ಥನೆಯು."

"ಪುತ್ರಿ...."

ಶೀಲವತಿಯು ರಾಣಾನನ್ನು ಮಾತಾಡಗೊಡದೆ:-"ಯಾವನು ನನ್ನ ಶೀಲರಕ್ಷಣೆಗಾಗಿ ತನ್ನ ಪ್ರಾಣವನ್ನು ಗಂಡಾಂತರದಲ್ಲಿ ಹಾಕಿದ್ದನೋ ಅಂತಹ ನನ್ನು ಕೊಲೆಗೀಡು ಮಾಡುವದು ನಿಮ್ಮ ನ್ಯಾಯನೀತಿಗೆ ಸಮ್ಮತವಿರುವದೇ? ನಗದೇಶದ ರಾಜಕುಮಾರಿಯ ಸತೀತ್ವ ರಕ್ಷಣೆ ಮಾಡಿದ್ದಕ್ಕಾಗಿ ನಗದೇಶದ ರಾಜನೂ ಪ್ರಜೆಗಳೂ ಅವನ ಉಪಕಾರದಲ್ಲಿದ್ದಂತಾಗಲಿಲ್ಲವೆ? ರಣಮಲ್ಲನು ನಗದೇಶದ ಮೇಲೆ ಉಪಕಾರದ ಭಾರವನ್ನು ಹೊರಿಸಿರುವನು. ಇಂತಹನಿಗೆ ಪ್ರಾಣದಂಡನೆಯು ವಿಧಿಸಲ್ಪಡುವದು ಅನುಚಿತವೆಂಬದನ್ನು ಮಾನವ ಹೃದಯಧಾರಿಯಾದ ಪ್ರತಿಯೊಬ್ಬ ನಗದೇಶ ವಾಸಿಯು ಒಪ್ಪಬಹುದು ನನ್ನ ಮಾತಿನ ಪ್ರತ್ಯಯವಾಗಬೇಕಾಗಿದ್ದರೆ, ಇಲ್ಲಿ ನೆರೆದ ಪ್ರಚಂಡ ಜನಸಮುದಾಯ ದಲ್ಲಿ ಪ್ರತಿಯೊಬ್ಬರ ಅಭಿಪ್ರಾಯ ಕೇಳಿಕೊಳ್ಳಿರಿ"

ರಾಜಕುಮಾರಿಯ ಭಾಷಣವು ಸಯುಕ್ತಿಕವಾಗಿದ್ದುದರಿಂದ, ಓಲಗ ದೊಳಗಿನ ಎಲ್ಲ ಜನರೂ ತಲೆದೂಗಿದರು! ರಾಣಾನು ಸ್ತಂಭಿತನಾದನು ತನ್ನ ಕುಮಾರಿಯು ಇಂತಹ ಬುದ್ಧಿಕುಶಲಳಿರುವಳೆಂಬದನ್ನು ಅವನು ಇದುವರೆಗೆ ತಿಳಿದಿರಲಿಲ್ಲ ಪ್ರತಿಭಾಸಂಪನ್ನಳಾದ ಅವಳ ಭಾಷಣವು ರಾಣಾನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮಕಾರಿಯಾಯಿತು. ಆಗ ಅವನು ಓಲಗದೊಳಗಿನ ಜನರನ್ನು ಕುರಿತು:-"ರಾಜಕುಮಾರಿಯ ಅಭಿಪ್ರಾಯವು ನಿಮ್ಮೆಲ್ಲರಿಗೆ ಸರಿ ಯಾಗಿ ತೋರುವದೆ?"

'ದೇವಿಯವರು ಹೇಳಿದಂತೆ ಸೆರೆಯಾಳಿಗೆ ಮೃತ್ಯುದಂಡನೆಯನ್ನೀಯದೆ, ಕಾರಾಗೃಹದಲ್ಲಿರಿಸಬೇಕು' ಓಲಗದೊಳಗಿನ ಜನರೆಲ್ಲರೂ ಏಕಕಂಠದಿಂದ ಹೇಳಿದರು.

"ಕುಮಾರಿ!" ರಾಣಾನು ಸಂತುಷ್ಟತೆಯಿಂದ:—"ನಿನ್ನ ಬುದ್ಧಿಕೌಶಲ್ಯದ ಹಾಗು ತೇಜಸ್ವಿತೆಯ ಮತ್ತು ಕೃತಜ್ಞತಾಬುದ್ಧಿಯ ವಿಜಯವಿದು! ನಿನ್ನ ಹೇಳಿಕೆಯಂತೆ ರಣಮಲ್ಲನಿಗೆ ವಿಧಿಸಿದ ಮೃತ್ಯುದಂಡನೆಯನ್ನು ತಪ್ಪಿಸಿ, ಆಜನ್ಮ ಕಾರಾಗೃಹವಾಸದ ಶಿಕ್ಷೆಯನ್ನು ವಿಧಿಸಿದ್ದೇನೆ."

"ಬಹಳೇ ಉತ್ತಮವಾಯಿತು. ಬಹಳೇ ಒಳಿತಾಯಿತು." ಓಲಗದೊಳಗಿನ ಜನರ ಮುಖದಿಂದ ಮಾತುಗಳು ತಾವಾಗಿ ಹೊರಬಿದ್ದವು.

ರಣಮಲ್ಲನು ರಾಣಾನನ್ನೊಮ್ಮೆ ರಾಜಕುಮಾರಿಯನ್ನೊಮ್ಮೆ ನೋಡುತ್ತ ವಿಸ್ಮಯಭರಿತನಾಗಿ ನಿಂತನು. ರಾಜಕನ್ಯೆಯು ರಣಮಲ್ಲನ ಮುಖವನ್ನು ನೋಡಿದಳು. ಒಮ್ಮೆ ಇಬ್ಬರ ದೃಷ್ಟಿಗಳೂ ಒಂದಾದವು ರಣಮಲ್ಲನಿಗೆ ಶೀಲವತಿಯ ದೃಷ್ಟಿಯಲ್ಲಿ ಅದೇ ಅನುರಾಗವು, ಅದೇ ಸಹಾನುಭೂತಿಯು, ಅದೇ ಅನುಕಂಪೆಯು, ಅದೇ ಗುಪ್ತಭಾಷೆಯು ಗೋಚರವಾಯಿತು. ಅವನು ವಿಕಾರಯುಕ್ತ ಹೃದಯಿಯಾಗಿರಲಿಲ್ಲ; ಆದ್ದರಿಂದ ಅವನು ಶೀಲವತಿಯ ವಿಕಾರಯುಕ್ತ ದೃಷ್ಟಿಗೆ ಮಹತ್ವಕೊಡಲಿಲ್ಲ. ಪರಕ್ಷಣದಲ್ಲಿ ತನ್ನ ದೃಷ್ಟಿಯನ್ನು ಕಿತ್ತು ಬೇರೆ ಕಡೆಗೆ ಒಯ್ದನು.

ಅವನು ನಿಜವಾದ ವೀರನಿದ್ದುದರಿಂದ, ದಾನದಿಂದ ತನ್ನ ಜೀವಿತವನ್ನು ರಕ್ಷಿಸಿಕೊಳ್ಳಲಿಕ್ಕೆ ಸಿದ್ಧನಿದ್ದಿಲ್ಲ ಜಗತ್ತಿನೊಳಗಿನ ಪ್ರತಿಯೊಂದು ವಸ್ತುವನ್ನು ಜನ್ಮಸಿದ್ಧವಾದ ಅಧಿಕಾರದಿಂದಾಗಲಿ, ವೀರತೆಯಿಂದಾಗಲಿ ಪ್ರಾಪ್ತಮಾಡಿಕೊಳ್ಳಬೇಕೆಂಬ ಧ್ಯೇಯದ ಅಚ್ಚ ರಜಪುತನು ಅವನಾಗಿದ್ದನು. ಆಗ ಅವನು:—"ಈ ಬಗೆಯ ದಾನದಿಂದ ದೊರೆತ ಜೀವನವನ್ನು ಸ್ವೀಕರಿಸಲಿಕ್ಕೆ ನಾನು ಸಿದ್ಧನಿಲ್ಲ."

"ಮುಂದೆ ಏನು ಮಾಡಬೇಕೆನ್ನುವೆ?" ಕುತೂಹಲದಿಂದ ಕೇಳಿದನು.

"ನಾನು ರಜಪುತನಿರುವೆನು; ಶೂರನಿರುವೆನು. ನಿರಾಧಾರಿಯೂ ಆಶ್ರಯಹೀನನೂ ಆದ ಭಿಕ್ಷುಕನು ನಾನಲ್ಲ."

"ಹೀಗೆಂದರೇನು? ನಿನ್ನ ಮಾತಿನ ಅರ್ಥವಾಗಲೊಲ್ಲದು."

"ರಾಣಾ, ನನ್ನ ಮಾತಿನ ಅರ್ಥವು ಇಷ್ಟೆ. ನನ್ನ ಪ್ರಾಣನಾಶಮಾಡಬಾರದೆಂದು ರಾಜಕುಮಾರಿಯ ಮನೀಷೆಯಿದ್ದುದರಿಂದ ನೀನು ನನಗೆ ಪ್ರಾಣದಾನ ಮಾಡಿರುವೆ. ಇಂತಹ ಜೀವದಾನವು ನನಗೆ ಬೇಕಾಗಿಲ್ಲ. ನನ್ನ ಶೃಂಖಲೆಗಳನ್ನು ತೆಗೆಯಿಸಿ ಒಂದು ಖಡ್ಗವನ್ನು ಕೊಡು. ನಗದೇಶದ ಪ್ರಜೆಗಳಲ್ಲಿ ಯಾವನು ಖಡ್ಗಪಟುವಿರುವನೋ, ಅವನನ್ನು ನನ್ನೊಡನೆ ದ್ವಂದ್ವಕ್ಕಾಗಿ ಸಿದ್ಧಮಾಡು. ದ್ವಂದ್ವದಲ್ಲಿ ನಾನು ವಿಜಯಿಯಾದರೆ ನನ್ನ ಜೀವಕ್ಕೆ ಅಪಾಯ

ಮಾಡುವ ಅಧಿಕಾರವನ್ನು ನೀನು ಕಳಕೊಂಡಂತಾಗುವದು; ಒಂದು ವೇಳೆ ಪರಾಭವವಾದರೆ, ನಿನ್ನ ಶೀರ್ಷಿನ ಮೇರೆಗೆ ಶೂಲಕ್ಕೇರಲು ಸಿದ್ಧನಾಗುವೆನು."

"ಎಂತಹ ಗರ್ವಿಷ್ಠತನವಿದು!" ರಾಣಾನು ಉದ್ಗಾರ ತೆಗೆದನು.

"ಸ್ವಂತ ಬಲವನ್ನು ಅವಲಂಬಿಸುವದು ಗರ್ವಿಷ್ಠತನವಲ್ಲ. ದಾನವನ್ನು ಸ್ವೀಕರಿಸದಿರುವದೂ ಗರ್ವದ ಲಕ್ಷಣವಲ್ಲ. ಎರಡನೆಯವರ ದಯೆಯಿಂದ ಜೀವಿಸುವ ವಿಚಾರ ಮಾಡದಿರುವದೂ ಗರ್ವವೆನಿಸಿಕೊಳ್ಳಲಾರದು."

"ಮಹಾರಾಣಾಜಿಯವರು ಈ ಉದ್ದಾಮನಿಗೆ ಖಡ್ಗವನ್ನು ಕೊಟ್ಟು ದ್ವಂದ್ವಯುದ್ಧಕ್ಕೆ ಹಚ್ಚಬೇಕು. ಇವನು ಕ್ಷಮಾಯೋಗ್ಯನಲ್ಲ ಇವನಿಗೆ ಸ್ವ-ಪರಾಕ್ರಮದ ಹೆಮ್ಮೆ ಬಹಳವಿರುವದು ದ್ವಂದ್ವ ಮಾಡಿ, ಇವನು ಅದರ ಫಲವನ್ನು ಅನುಭವಿಸಲಿ." ಓಲಗದ ಜನರ ಮುಖದಿಂದ ಹೀಗೆ ಮಾತುಗಳು ಹೊರಡತೊಡಗಿದವು

"ಕುಮಾರಿ!" ರಾಣಾನು ಶೀಲವತಿಯನ್ನು ಕುರಿತು:-"ನೋಡಿದೆಯಾ, ಈ ತರುಣನ ಉದ್ದಾಮತನವನ್ನು? ನಿನ್ನ ದಯೆಯ ಪ್ರತಿಧ್ವನಿಯಿದು! ನಿನ್ನ ಉಪಕಾರ ಬುದ್ಧಿಯ ಪ್ರತಿಫಲವಿದು!"

"ಪಿತಾಜಿ!" ಶೀಲವತಿಯು:—"ನಾನು ನನ್ನ ಕರ್ತವ್ಯವನ್ನು ಮಾಡಿರುವೆನು. ಸೆರೆಯಾಳು ತನ್ನ ಕರ್ತವ್ಯವನ್ನು ನನಗಿಂತಲೂ ಉತ್ತಮವಾದ ರೀತಿಯಿಂದ ತಿಳಿಯುತ್ತಿರುವ ಸಂಭವವಿದೆ."

"ಒಳ್ಳೇದು" ರಾಣಾನು ತನ್ನ ಮೀಸೆಗಳನ್ನು ಹುರಿ ಮಾಡುತ್ತ:—"ಸೈನಿಕರೇ, ರಣಮಲ್ಲನ ಶೃಂಖಲೆಗಳನ್ನು ತೆಗೆಯಿರಿ."

ಸೈನಿಕರು ಶೃಂಖಲೆಗಳನ್ನು ತೆಗೆಯತೊಡಗಿದರು. ಅಂದಿನ ಓಲಗದಲ್ಲಿ ಒಂದಕ್ಕಿಂತ ಮತ್ತೊಂದು ವಿಸ್ಮಯಜನಕ ಘಟನೆಗಳು ನಡೆಯಹತ್ತಿದ್ದನ್ನು ನೋಡಿ ಸಭಿಕರು ಬೆರಗಾಗಿ ಕುಳಿತಿದ್ದರು. ಅವರು ಭಾವೀ ಪರಿಸ್ಥಿತಿಯ ಬಗ್ಗೆ ತಮ್ಮ ತಮ್ಮೊಳಗೆ ಕುಚುಕುಚು ಮಾತನಾಡುತ್ತಿದ್ದರು. ಆಗ ರಾಣಾನು ಸಭೆಯಲ್ಲಿ ಕುಳಿತ ಒಬ್ಬ ಪ್ರಚಂಡ ದೇಹದ ವ್ಯಕ್ತಿಯ ಕಡೆಗೆ ನೋಡಿ:--"ಜಸವಂತಸಿಂಹ!"

'ಸರಕಾರ!' ಜಸವಂತಸಿಂಹನು ತನ್ನ ಗೊಗ್ಗರಧ್ವನಿಯಿಂದ ನುಡಿದನು.

"ಶಸ್ತ್ರಾಸ್ತ್ರ ಪಾಂಡಿತ್ಯದಲ್ಲಿ ನಿಮಗೆ ಸರಿಯಾದವರು ನಗದೇಶದಲ್ಲಿ ಯಾರೂ ಇಲ್ಲವೆಂದು ಪ್ರಸಿದ್ಧಿ ಪಡೆದಿರುವಿರಿ. ನಿಮ್ಮ ಖಡ್ಗವನ್ನು ಒರೆಯಿಂದ ಹಿರಿಯಿರಿ. ಶೂರನೆಂಬ ಅಹಂಕಾರದಿಂದ ಮೆರೆಯುವ ಈ ರಣಮಲ್ಲನ ಗರ್ವಭಂಗ ಮಾಡಿರಿ."

"ಮಹಾರಾಜರೆ," ಜಸವಂತಸಿಂಹನು ಮನಃಪೂರ್ವಕವಾಗಿ:— "ತಮ್ಮ ಆಜ್ಞೆಯು ಶಿರಸಾವಂದ್ಯವಿರುವದು; ಆದರೆ ಈ ಎಳೆ ಬಾಲಕನೊಡನೆ ಹೇಗೆ ದ್ವಂದ್ವ ಮಾಡಲಿ? ಸರಿಮಾನಸ್ಕಂಧರೊಡನೆ ಯುದ್ಧಮಾಡುವದು ಶ್ರೇಯಸ್ಕರವು ನಾನು ಇವನನ್ನು ಪರಾಭವಗೊಳಿಸಿದರೂ ಕೀರ್ತಿಯುತ ನಾಗುವಂತಿಲ್ಲ ಆದ್ದರಿಂದಲೇ ಮನಸ್ಸು ಹಿಂಜರಿಯತೊಡಗಿದೆ."

"ಪರವಿಲ್ಲ, ಪರವಿಲ್ಲ. ಈ ಬಾಲಕನು ತಾನಾಗಿಯೇ ಮೃತ್ಯುವಿಗೆ ಆಮಂತ್ರಣವಿತ್ತಿರುವನು. ಅದಕ್ಕಾಗಿ ನಾವು ಮಾಡತಕ್ಕದ್ದೇನು? ಇವನ ಇಚ್ಛೆಯನ್ನು ಪೂರೈಸಲಿಕ್ಕೇಬೇಕು."

"ಅರೆಕ್ಷಣದಲ್ಲಿ ಇವನ ಗರ್ವಭಂಗ ಮಾಡುವೆನು." ಜಸವಂತ ಸಿಂಹನು ಅಹಂಕಾರಯುಕ್ತವಾಣಿಯಿಂದ ನುಡಿದನು.

ಸೈನಿಕರು ರಣಮಲ್ಲನ ಶೃಂಖಲೆಗಳನ್ನು ತೆಗೆದಮೇಲೆ ರಾಣಾನು:-- "ಸಂಗ್ರಾಮಸಿಂಹ!" ಎಂದು ಒಬ್ಬ ವೀರನನ್ನು ಕೂಗಿದನು.

ಸಂಗ್ರಾಮಸಿಂಹನು ಆಸನದಿಂದೆದ್ದು, ಅಭಿವಂದನೆ ಮಾಡಿ:-"ಮಹಾ ರಾಜ, ಆಜ್ಞೆಯಾಗಬೇಕು."

"ನೀವು ನಿಮ್ಮ ಖಡ್ಗವನ್ನು ರಣಮಲ್ಲನಿಗೆ ಕೊಡಿರಿ."

ಸಂಗ್ರಾಮಸಿಂಹನು ತನ್ನ ಖಡ್ಗವನ್ನು ರಣಮಲ್ಲನ ಕೈಯಲ್ಲಿ ಕೊಟ್ಟನು. ಅನಂತರದಲ್ಲಿ ರಾಣಾನು:—"ರಣಮಲ್ಲ! ಯುದ್ಧದಲ್ಲಿ ನೀನು ಪರಾಭೂತ ನಾದರೆ, ಜಗತ್ತಿನೊಳಗಿನ ಯಾವ ಶಕ್ತಿಯೂ ನಿನ್ನ ಪ್ರಾಣರಕ್ಷಣೆ ಮಾಡ ಲಾರದೆಂಬದನ್ನು ಲಕ್ಷ್ಯದಲ್ಲಿಡು. ನೀನೇ ವಿಜಯಿಯಾದರೆ, ಪ್ರಾಣವು ಸುರಕ್ಷಿತವಾಗುವದು; ಆದರೂ ಆಜನ್ಮ ಕಾರಾಗೃಹದಲ್ಲಿರಬೇಕಾಗುವದು. ಇನ್ನು ಎಲ್ಲ ಸಭಿಕರಿಗೆ ನಾನು ದೃಢವಾಗಿ ಹೇಳುವದೇನಂದರೆ, ಈ ರಣ ಮಲ್ಲನು ಕಾರಾಗೃದಲ್ಲಿರುವಾಗ ಯಾರಾದರೂ ಇವನನ್ನು ಮುಕ್ತಗೊಳಿಸ ಲಿಕ್ಕೆ ಪ್ರಯತ್ನಿಸಕೂಡದು. ಹಾಗೆ ಯತ್ನ ನಡೆದದ್ದು ತಿಳಿಯಿತೆಂದರೆ, ತತ್ ಕ್ಷಣದಲ್ಲಿ ನಾನೇ ನನ್ನ ಕೈಮುಟ್ಟಿ ಇವನ ವಧೆಮಾಡುವೆನು. ಇದು ಏಕ ವಚನೀಯ ರಜಪುತನಾದ ರಾಣಾ ರಾಯಸಿಂಹನ ಪ್ರತಿಜ್ಞೆಯೆಂದು ತಿಳಿ ಯಿರಿ. ಈ ವಿಷಯದಲ್ಲಿ ಎಲ್ಲರೂ ಸಾವಧಗೊಂಡಿರತಕ್ಕದ್ದು."

ರಣಮಲ್ಲನು ಸಂಗ್ರಾಮಸಿಂಹನು ಕೊಟ್ಟ ಖಡ್ಗವನ್ನು ಕೈಯಲ್ಲಿ ತೆಗೆದುಕೊಂಡು ಅನಿಮೇಷಭಾವದಿಂದ ಆಕಾಶದ ಕಡೆಗೆ ನೋಡತೊಡಗಿ ದನು. ಭಾವೀ ಸಂಗ್ರಾಮದಲ್ಲಿ ತನಗೆ ವಿಜಯವಾಗಬೇಕೆಂಬ ಉದ್ದೇಶದಿಂದ ಅವನು ತನ್ನ ಇಷ್ಟ ದೇವತೆಯ ಪ್ರಾರ್ಥನೆ ಮಾಡುತ್ತಿರುವನೆಂದು ನೋಡು

ವವರಿಗೆ ಭಾಸವಾಗದಿರಲಿಲ್ಲ.

ರಾಜನಂದಿನಿಯಾದ ಶೀಲವತಿಯು ರಣಮಲ್ಲನಿಗೆ ಜಯವಾಗ ಬೇಕೆಂದು ಪರಮಾತ್ಮನನ್ನು ಮನಸಾ ಸ್ಮರಿಸುತ್ತಿದ್ದಳು:—"ಭಗವನ್ ನನ್ನ ಉಪಕಾರ ಕರ್ತೃವಿಗೆ ವಿಜಯವುಂಟಾಗುವಂತೆ ಮಾಡು. ಅವನಲ್ಲಿ ಶೌರ್ಯ-ಸಾಹಸಗಳು ಹೆಚ್ಚಾಗುವಂತೆ ಕರುಣಿಸು. ದಯಾನಿಧೆ, ಈ ದಾಸಿಯ ಪ್ರಾರ್ಥನೆಯನ್ನು ಉಪೇಕ್ಷಿಸಬೇಡ."

"ಬಚ್ಚಾ, ರಣಕ್ಕೆ ಸಿದ್ಧನಾಗಿರುವೆಯಲ್ಲವೆ?" ರಾಣಾನು ರಣಮಲ್ಲನನ್ನು ಕೇಳಿದನು.



"ಓಹೋ! ಒಂದು ಕೈಯಲ್ಲಿ ಖಡ್ಗವನ್ನೂ, ಮತ್ತೊಂದು ಕೈಯಲ್ಲಿ ಪ್ರಾಣವನ್ನೂ ಹಿಡಿದುಕೊಂಡು ಸಿದ್ಧನಾಗಿದ್ದೇನೆ."

"ಬಾಲಕಾ, ಎಚ್ಚರದಿಂದ ಕಾದು." ಎಂದು ಜಸವಂತಸಿಂಹನು ರಣ

ಮಲ್ಲನಿಗೆ ಹೇಳಿ, ಖಡ್ಗವನ್ನು ಹಣೆಗೆ ಹಚ್ಚಿಕೊಂಡು:-''ಮಾತಾ ಶಕ್ತಿ, ಸಹಾಯ ಮಾಡು.'' ಎಂದು ಇಷ್ಟದೇವತೆಯನ್ನು ಪ್ರಾರ್ಥಿಸಿದನು.

''ಸ್ವರ್ಗಸ್ಥ ಪಿತೃವೆ, ಆಶೀರ್ವಾದ ಕೊಡು.'' ರಣಮಲ್ಲನು ಖಡ್ಗವನ್ನು ನಮಿಸಿ, ಮುಂದೆ ಸಾಗಿದನು.

ಕ್ಷಣಮಾತ್ರದಲ್ಲಿ ಇಬ್ಬರೂ ವೀರರ ಖಡ್ಗಗಳು ವಹಿಲದಿಂದ ಝಳಪಿಸತೊಡಗಿದವು. ಪರಸ್ಪರರ ಖಡ್ಗಾಘಾತದಿಂದುಂಟಾದ ಸಪ್ಪಳವು ಕಿವಿಗಳನ್ನು ಗಡಚಿಕ್ಕಿಸಿತು. ರಣಮಲ್ಲನ ಖಡ್ಗಚಾಪಲ್ಯವನ್ನು ಶೂರತನವನ್ನೂ ನೋಡಿ, ಜನರು ಬೆರಳು ಕಚ್ಚಿದರು; ರಾಣಾನು ತಲೆದೂಗಿದನು ಸ್ವಂತ ಶಕ್ತಿಯ ಗರ್ವವುಳ್ಳ ಜಸವಂತಸಿಂಹನ ಅಹಂಕಾರ ಬುದ್ಧಿಯು ಲಯಹೊಂದಿತು!

ಅರ್ಧಗಳಿಗೆಯಲ್ಲಿ ರಣಮಲ್ಲನು ಜಸವಂತಸಿಂಹನನ್ನು ಹಣ್ಣು ಮಾಡಿದನು. ರಾಣಾನೂ ರಾಜಕನ್ಯೆಯೂ ಯುದ್ಧವನ್ನು ನೋಡುತ್ತಲಿದ್ದರು. ರಾಣಾನ ಮನಸ್ಸಿನ ಉಲ್ಲಾಸವು ನಾಶವಾಗಿತ್ತು; ರಾಜಕುಮಾರಿಯ ಮನಸ್ಸು ಉಲ್ಲಸಿತವಾಗಿತ್ತು. ಕಡೆಗೆ ಜಸವಂತಸಿಂಹನ ಖಡ್ಗವು ರಣಮಲ್ಲನ ಖಡ್ಗಾಘಾತದಿಂದ ಕೈ ಬಿಟ್ಟು ದೂರ ಸಿಡಿದು ಬಿತ್ತು. ಕೂಡಲೆ ರಣಮಲ್ಲನು ಅವನ ಮೇಲೇರಿ ಹೋಗಿ, ಅವನನ್ನು ನೆಲಕ್ಕೆ ಕೆಡಹಿ, ಎದೆಯ ಮೇಲೆ ಕುಳಿತನು. ರಣವೀರ ರಣಮಲ್ಲನ ವಿಜಯಿೂ ಖಡ್ಗವು ವಿಜಯ ಸಂಪಾದನೆ ಮಾಡಿತು. ನಗದೇಶದಲ್ಲೆಲ್ಲ ಖ್ಯಾತಿಗೊಂಡಿದ್ದ ನಾಮಾಂಕಿತ ಕಲಿಯಾದ ಜಸವಂತಸಿಂಹನನ್ನು ಯಃಕಶ್ಚಿತ ಬಾಲಕನೊಬ್ಬನು ಪರಾಭವಗೊಳಿಸಿದ್ದನ್ನು ನೋಡಿ, ಸಭಿಕರು ಕಲ್ಪನಾತೀತವಾಗಿ ವಿಸ್ಮಯಗೊಂಡರು ಆಗ ರಾಣಾನ ಮನಃಸ್ಥಿತಿಯು ಹೇಗಾಗಿರಬಹುದು? ರಾಜಕುಮಾರಿಯ ಮನಸ್ಸು ಹೇಗಾಗಿರಬಹುದು?

---

## ಮೃತ್ಯು! ಮೃತ್ಯು!!

ನಗದೇಶರಾಜಧಾನಿಯ ವಿಶಾಲವಾದ ಅಟ್ಟಾಲಿಕೆಯಲ್ಲಿ ರಾಜಕುಮಾರಿಯಾದ ಶೀಲವತಿಯು ಮಂಚದ ಮೇಲೆ ಕುಳಿತು ಅತ್ಯಂತ ಗಹನ ವಿಚಾರದಲ್ಲಿ ಮುಳುಗಿದ್ದಳು. ಅವಳ ಮನಸ್ಸು ಚಿಂತಾವ್ಯಗ್ರವಾಗಿತ್ತು. ನಗದೇಶದ ರಾಣಾನ ವಾತ್ಸಲ್ಯದ ಒಬ್ಬಳೇ ಒಬ್ಬ ಮಗಳಾದ ಅವಳು ಕೆಲವು ದಿನಗಳಿಂದ ವಿಷಣ್ಣಮನಸ್ಕಳಾಗಿಯೇ ಇದ್ದಳು. ರಣಮಲ್ಲನು ತನ್ನ ವಿಜಯಿೂ ಖಡ್ಗದಿಂದ ವಿಜಯ ಸಂಪಾದನೆ ಮಾಡಿ ಸೆರೆಮನೆಯಲ್ಲಿ ಬಿದ್ದಾಗಿನಿಂದ, ಅವಳ ಮನಃಸ್ಥಿತಿಯು ಮತ್ತಿಷ್ಟು ಉದ್ವೇಗಗೊಂಡಿತ್ತು. ತನ್ನ ಪ್ರಣಯ ಮೂರ್ತಿಯು-

ಹೃದಯೇಶ್ವರನಾದ ರಣಮಲ್ಲನು-ಕಾರಾಗೃಹದಿಂದ ಬಿಡುಗಡೆಯಾಗಿ, ಅಂತಃ ಕರಣದಲ್ಲಿ ಹೊತ್ತುತ್ತಿರುವ ಪ್ರಣಯದ ಉಷ್ಣತೆಯನ್ನು ಎಂದು ಶಾಂತ ಮಾಡುವನೋ, ಎಂಬ ವಿಚಾರದಲ್ಲಿ ಅವಳು ಮುಳುಗಿದ್ದಳು. ಮಧ್ಯಾಹ್ನದ ಸಮಯವಾಗಿತ್ತು. ಭಾಸ್ಕರನ ಪ್ರಚಂಡವಾದ ಉಷ್ಣ ಕಿರಣಗಳಿಂದ ಧರಿತ್ರಿ ಯೆಲ್ಲ ತಪ್ತವಾಗಿತ್ತು. ಪ್ರಖರವಾದ ಉಷ್ಣತೆಗೆ ಬೆದರಿದ ಪ್ರಾಣಿಕೋಟಿಯು, ತನ್ನ ನಿವಾಸವನ್ನು ಬಿಟ್ಟು ಹೊರಬೀಳದಾಗಿತ್ತು; ಆದ್ದರಿಂದ ಇಡೀ ಸೃಷ್ಟಿ ಯಲ್ಲಿ ಶಾಂತತೆಯು ನೆಲೆಗೊಂಡಿತ್ತು. ರಾಜಕುಮಾರಿಗೆ ಹೊರಗಿನ ಈ ಪರಿ ಸ್ಥಿತಿಯ ಪರಿವೆಯಿದ್ದಿಲ್ಲ. ಹೊರಗಿನ ಉಷ್ಣತೆಯು ಅವಳ ಅಂತಃಕರಣದಲ್ಲಿ ಪ್ರದೀಪ್ತವಾಗತೊಡಗಿದ ಪ್ರಣಯದಾಹದ ಪಾಸಂಗಕ್ಕೆ ಸಹ ಹತ್ತುವಂತಿ ದ್ದಿಲ್ಲ. ದಾಸಿಯರು ಶಿತೋದಕಗಳಲ್ಲಿ ತೊಯ್ಯಿಸಿದ ವ್ಯಜನಗಳನ್ನು ಬೀಸುತ್ತ ಲಿದ್ದರು. ಹೊರಗಿನ ಉದ್ಯಾನದಲ್ಲಿದ್ದ ಕಾರಂಜಿಯ ತಂತುರ್ವನಿಗಳು ಮಂದ ವಾದ ಗಾಳಿಯೊಡನೆ ಒಳಗೆ ಪ್ರವೇಶಿಸುತ್ತಿದ್ದವು. ಇವೆಲ್ಲ ಉಪಚಾರಗಳು ಅವಳ ಮನಸ್ಸನ್ನು ಶಾಂತಪಡಿಸಲಿಕ್ಕೆ ಅಸಮರ್ಥವಾಗಿದ್ದವು. 'ರಣಮಲ್ಲನು ತನ್ನನ್ನು ವಿಲಾಸವಿಜಯನ ಕೈಯಿಂದ ಏಕೆ ಬಂಧಮುಕ್ತ ಮಾಡಿರಬಹುದು? ಆ ಆತತಾಯಿಯ ಮಂದಿರದಲ್ಲಿ ವಿಷಪ್ರಾಶನ ಮಾಡಿ ಪ್ರಾಣ ಬಿಡುವದು ಸದ್ಯದ ದುಃಸ್ಥಿತಿಗಿಂತ ಎಷ್ಟೋಪಾಲು ಮೇಲಾಗಿರುತ್ತಿತ್ತು.' ಮೊದಲಾದ ವಿಚಾರಗಳು ಅವಳ ತಲೆಯಲ್ಲಿ ತುಂಬಿದ್ದವು.

ಅವಳು ವಿಚಾರಮಗ್ನ ಅವಸ್ಥೆಯಲ್ಲಿದ್ದಾಗ ಯಾರೋ 'ರಾಜಕನ್ಯೆ ಯವರೇ,' ಎಂದು ಕೂಗಿದರು. ಕೂಡಲೆ ಅವಳು ಮುಖವನ್ನು ತಿರುಗಿಸಿದಳು. ಅವಳ ಅನುಚರಿಯಾದ ವತ್ಸಲೆಯು ನಿಂತಿದ್ದಳು ಕೂಡಲೆ ಅವಳು:—

"ವತ್ಸೇ, ಏನು ಬೇಕಾಗಿದೆ?"

"ನನಗೆ ಏನೂ ಬೇಡ. ಹೊರಗೆ ಒಬ್ಬ ರಜಪುತಸ್ತ್ರೀಯು ಬಂದಿರು ವಳು. ಅವಳಿಗೆ ಮಾತ್ರ ನಿಮ್ಮ ಭೆಟ್ಟಿಯು ಬೇಕಾಗಿರುವದಂತೆ."

"ನನ್ನ ಭೆಟ್ಟಿಗಾಗಿ ರಜಪುತ ಸ್ತ್ರೀಯು ಬಂದಿರುವಳೇ?"

"ಹೌದು. ದೇವಿ!"

"ಹೋಗು, ಅವಳನ್ನು ಇಲ್ಲಿಗೆ ಕರೆದುಕೊಂಡು ಬಾ."

ದಾಸಿಯು ರಜಪುತ ತರುಣಿಯನ್ನು ಕರೆತಂದಳು. ಆಗಂತುಕ ಸ್ತ್ರೀಯು ಶೀಲವತಿಯ ಮುಖವನ್ನು ನೋಡುತ್ತ ನಿಂತಳು. ಶೀಲವತಿಯಾದರೂ ಅವಳ ಮುಖ ನಿರೀಕ್ಷಣೆ ಮಾಡತೊಡಗಿದ್ದಳು. ಸ್ವಲ್ಪ ವೇಳೆಯಲ್ಲಿ ಅವಳಿಗೆ ರಜ ಪುತ ಯುವತಿಯ ಮುಖವು ಗುರುತಿಸಿತು ಕೂಡಲೆ ಅವಳು ವಿಸ್ಮಯ

ಯುಕ್ತವಾಣಿಯಿಂದ:—“ಯಾರು? ಸೌಮ್ಯವತಿದೇವಿಯವರೇನು? ಹೌದು, ನಿಮ್ಮ ಹೆಸರು ನನ್ನ ಧ್ಯಾನದಲ್ಲಿದೆ. ವಿಲಾಸವಿಜಯ ರಾಣಾನ ಕೈಯೊಳಗಿಂದ ಪಾರದ ಮೇಲೆ ನೀವು ಶಿವಮಂದಿರ ಬಳಿಯಲ್ಲಿ ಭೆಟ್ಟಿಯಾಗಿದ್ದಿರಿ. ಆಗ ನೀವು ರಣಮಲ್ಲರೊಡನೆ ಸ್ವಲ್ಪ ವೇಳೆಯ ವರೆಗೆ ಮಾತನಾಡುತ್ತ ನಿಂತಿದ್ದಿಲ್ಲವೆ?”

“ನಿಜವು.” ಸೌಮ್ಯವತಿಯು ನುಡಿದು, ಮುಖವನ್ನು ಕೆಳಗಿಟ್ಟಳು.

ರಾಜಕನ್ಯೆಯು ಸೌಮ್ಯವತಿಯ ಅಂಗ-ಪ್ರತ್ಯಂಗಗಳನ್ನು ದಿಟ್ಟಿಸಿ ನೋಡಿದಳು. ಅಪ್ಸರೆಯನ್ನು ನಾಚಿಸುವಂತಹ ಅವಳ ರೂಪಾತಿಶಯಕ್ಕೆ ಶೀಲವತಿಯು ಬೆರಗಾದಳು. ಅವಳು ಉಟ್ಟ ಕೇಶರೀ ವರ್ಣದ ವಸ್ತ್ರವು ಅವಳ ಗೌರವರ್ಣಕ್ಕೆ ಒಳ್ಳೆಯ ಒಪ್ಪತಕ್ಕಂಥಾದ್ದಾಗಿತ್ತು. ಮುಖದ ಕಾಂತಿಯನ್ನು ವರ್ಧಿಸುವ ಮುತ್ತಿನ ಕಂಠಾಭರಣವು ಕಂಠಪ್ರದೇಶಕ್ಕೆ ಶೋಭಾಯಮಾನವಾಗಿತ್ತು. ನೂಪುರಗಳಿಂದ ಸುಲಲಿತವಾದ ಪಾದಗಳು ಸೊಬಗುಗೊಂಡಿದ್ದವು. ‘ಅಹಹಾ! ಈ ಪೂರ್ಣವಿಕಸಿತವಾದ ಪುಷ್ಪರಾಗವು ರಣಮಲ್ಲನ ಅನುರಾಗವನ್ನು ಸಂಪಾದಿಸದೆ ಇರಬಹುದೆ? ಎಂದಿಗೂ ಸಂಪಾದಿಸದಿರಲಾರದು.’ ಎಂಬ ವಿಚಾರವು ಶೀಲವತಿಯ ಮನಸ್ಸಿನಲ್ಲಿ ಉತ್ಪನ್ನವಾಯಿತು. ಕೂಡಲೆ ಈರ್ಷಾ-ಮತ್ಸರ-ದ್ವೇಷ ಭಾವನೆಗಳು ಅವಳಲ್ಲಿ ಹುಟ್ಟಿದವು. ಸೌಮ್ಯವತಿಯ ಸ್ಥಳದಲ್ಲಿ ತಾನು ಇರುತ್ತಿದ್ದರೆ, ಎಷ್ಟು ಒಳಿತಾಗುತ್ತಿತ್ತಲ್ಲ! ಎಂಬ ಆಲೋಚನೆಯು ಅವಳಲ್ಲಿ ಹುಟ್ಟಿತು.

“ಕುಳಿತುಕೊಳ್ಳಿರಿ, ಭಾಗ್ಯವಂತರಾದ ದೇವಿಯವರೇ!”

ಸೌಮ್ಯವತಿಯು ಆಸನದ ಮೇಲೆ ಕುಳಿತಳು.

“ನನ್ನ ಕಡೆಗೆ ಯಾವ ಕೆಲಸವಿದೆ?”

“ಕೆಲಸವುಂಟು. ಅದಕ್ಕಾಗಿ ನಿಮಗೆ ತೊಂದರೆ ಸಂಭವಿಸುವದು. ಉಪಾಯವಿಲ್ಲ. ಆ ಕಾರ್ಯಕ್ಕಾಗಿ ನಿಮಗೆ ತೊಂದರೆ ಕೊಡಬೇಕಾಗುವದು.”

‘ಯಾವ ಕೆಲಸವದು?’ ಉತ್ಕಂಠೆಯಿಂದ ಶೀಲವತಿಯು ವಿಚಾರಿಸಿದಳು.

“ಇಡೀ ನಗದೇಶದ ಪ್ರಜಾಜನರ ವಿಶ್ವಾಸವಾಗಿರುವದೇನಂದರೆ, ‘ರಣಮಲ್ಲರಲ್ಲಿ ನೀವು ಅನುರಾಗವುಳ್ಳವರಾಗಿರುವಿರೆ’ಂದು!”

ರಾಜಕುಮಾರಿಯು ಬೆರಗಾದಳು.

“ಅವರ ವಿಷಯವಾಗಿ ನಿಮ್ಮಲ್ಲಿ ವಾಸವಾಗಿದ್ದ ಅನುರಾಗವೊ,-ಪ್ರೇಮವೊ? ಬಚ್ಚಿಡದೆ ನಿಜಸ್ಥಿತಿಯನ್ನರುಹಿರಿ. ಅವಾಸ್ತವ ವಿಷಯ ಹೊರಟಿತೆಂದು ಕ್ರುದ್ಧರಾಗದೆ, ಕ್ಷಮಿಸಿರಿ.” ಸೌಮ್ಯವತಿಯು ಆಡಿದಳು.

ರಾಜಕುಮಾರಿಯು ವಿಸ್ಮಯಕ್ಕೆ ಮೇರೆದಪ್ಪಿತು.

ಸೌಮ್ಯವತಿಯು ರಾಜದುಹಿತೆಯ ಕಡೆಗೆ ದಿಟ್ಟಿಸಿ ನೋಡಹೊಡಗಿದ್ದಳು. ಶೀಲವತಿಯ ಮುಖದ ಸ್ವರೂಪವು ಅಭ್ಯಂತರವಾದದ್ದು ಅವಳ ಲಕ್ಷ್ಯಕ್ಕೆ ಬಾರದೆ ಇರಲಿಲ್ಲ.

ರಾಜಕುಮಾರಿಯು ಕೆಲವು ನಿಮಿಷಗಳ ವರೆಗೆ ವಿಚಾರಿಸಿ:-"ಸೌಮ್ಯವತಿದೇವಿ, ರಣಮಲ್ಲರ ವಿಷಯವಾಗಿ ನನ್ನಲ್ಲಿ ವಾಸವಾಗಿದ್ದದ್ದು ಪ್ರೇಮವು. ನಗದೇಶದ ರಾಜಕನ್ಯೆಯ ಮುಖದಿಂದ ಅನೃತವಾಣಿಯು ಎಂದೂ ಹೊರ ಬೀಳಲಾರದೆಂದು ದೃಢವಾಗಿ ನಂಬಿರಿ. ಈ ಮಾತಿನ ಸತ್ಯತೆಯ ಬಗ್ಗೆ ಹೃದಯಸ್ಥ ಪರಮಾತ್ಮನೇ ಸಾಕ್ಷಿಭೂತನಾಗಿರುವನು."

"ಹೀಗಿದ್ದರೆ ಶಾಂತವೃತ್ತಿಯಿಂದ ಕುಳಿತುಕೊಂಡಿರುವಿರೇಕೆ?"

"ಏನು? ನಾನು ಶಾಂತಳಾಗಿ ಕುಳಿತುಕೊಂಡಿರುವೆನೆಂದು ತಿಳಿದಿರುವಿರಾ? ನನ್ನ ಹೃದಯವನ್ನು ಗುರುತಿಸದೆ, ನ್ಯಾಯನಿರ್ಣಯ ಮಾಡುವ ಪ್ರಯತ್ನವನ್ನೇಕೆ ಮಾಡುವಿರಿ? ನಾನು ಅವರ ಬಂಧವಿಮೋಚನ ಮಾಡುವ ವಿಚಾರದಲ್ಲಿರುವೆನು. ಅವರನ್ನು ಮುಕ್ತಗೊಳಿಸಿದರೆ, ನನ್ನ ತಂದೆಯ ಪ್ರತಿಜ್ಞೆಯಂತೆ ಪ್ರಾಣದಂಡಕ್ಕೆ ಗುರಿಯಾಗುವೆನೆಂಬ ಭೀತಿಯು ನನ್ನಲ್ಲಿ ತಿಲಾಂಶವಾದರೂ ಇರುವದಿಲ್ಲ ಸೌಮ್ಯವತಿದೇವಿ, ನಾನು ರಣಮಲ್ಲರ ಸಲುವಾಗಿ ಪ್ರಾಣಾರ್ಪಣೆ ಮಾಡಲಿಕ್ಕೂ ಸಿದ್ಧಳಿರುವೆನು. ನೀವಾದರೂ ನನ್ನ ರಣಮಲ್ಲರಲ್ಲಿ ಪ್ರೇಮವುಳ್ಳವರಿರುವಿರಲ್ಲವೆ?"

ಸೌಮ್ಯವತಿಯು ಲಜ್ಜಿತಳಾದಳು. ಅವಳು ಮುಖವನ್ನು ಕೆಳಗೆ ಮಾಡಿ ಸುಮ್ಮನೆ ಕುಳಿತಳು. ಅವಳನ್ನು ನೋಡಿ ಶೀಲವತಿಯು:—"ಸೌಮ್ಯವತಿದೇವಿ, ನೀವು ನಿಮ್ಮ ಅಂತರಂಗವನ್ನು ನನ್ನೆದುರಿಗೆ ಇಡಲಿಕ್ಕೆ ಇಷ್ಟು ಸಂಕೋಚಪಡುತ್ತಿರುವದನ್ನು ನೋಡಿ ಮನಸ್ಸು ಅಸಮಾಧಾನಗೊಳ್ಳುತ್ತಿದೆ."

"ರಾಜಕನ್ಯೆ!" ಸೌಮ್ಯವತಿಯು ಲಜ್ಜಿತಭಾವದಿಂದ:—"ಜಗತ್ತಿನಲ್ಲಿ ಪ್ರತಿಯೊಬ್ಬರಿಗೆ ಪ್ರಾಣವು ಅತ್ಯಂತ ಪ್ರೇಮವು; ಆದರೆ ನನಗೆ ಪ್ರಾಣಲಾಲಸೆಗಿಂತ ರಣಮಲ್ಲರ ಲಾಲಸೆಯೇ ಅಧಿಕವಾಗಿದೆ!"

"ನನ್ನ ತಂದೆಯ ಕೈಯಿಂದ ಮೃತ್ಯುವು ಸಂಭವಿಸುತ್ತಿದ್ದರೂ ಅದರ ಪರಿವೆಯು ನಿಮಗಿಲ್ಲವಷ್ಟೆ?"

"ಇಲ್ಲ; ಇಲ್ಲ, ನಿಜವಾಗಿಯೂ ಪ್ರಾಣದ ಪರಿವೆಯು ನನಗಿಲ್ಲ."

"ಹಾಗಾದರೆ ನೀವು ಅವರನ್ನು ಬಿಡುಗಡೆ ಮಾಡಿರಿ."

"ದೇವೀ, ಅವರ ಬಿಡುಗಡೆಯಾದ ವೇಳೆ ನನಗೆ ಮೃತ್ಯುದಂಡನೆಯೊದಗುವದು. ಈ ಘಟನೆಯಿಂದ ಅವರ ಹೃದಯದ ಮೇಲೆ ಭಯಂಕರ

ವಾದ ಆಘಾತವಾಗುವದು. ಆ ಆಘಾತವನ್ನು ಸಹನ ಮಾಡುವ ಶಕ್ತಿಯು ಅವರಲ್ಲಿಲ್ಲ. ಕೊನೆಗೆ ಅವರು ತಮ್ಮ ಆಯುಷ್ಯವನ್ನು ನಾಶಮಾಡಿಕೊಳ್ಳುವರು. ಅದಕ್ಕಾಗಿಯೇ ಹೆದರಿ ಕುಳಿತಿದ್ದೆನು."

ರಾಜಕುಮಾರಿಯು ಚಕಿತಳಾದಳು. ಸೌಮ್ಯವತಿಯ ಮಾತುಗಳು ಅವಳ ಹೃದಯುವನ್ನು ವಿದೀರ್ಣಗೊಳಿಸಿದವು. ಪ್ರೇಮನೈರಾಶ್ಯದಿಂದ ಅವಳ ಜೀವನವು ಶೂನ್ಯವತ್ತಾಗಿ ತೋರಲಾರಂಭಿಸಿತು. ಕೂಡಲೆ ಅವಳ ನೇತ್ರಗಳಿಂದ ನೀರುಗಳು ಹೊರಬಿದ್ದವು. ಅದೇ ಸಮಯದಲ್ಲಿ ರಣಮಲ್ಲನ ಮೂರ್ತಿಯು ಅವಳ ಕಣ್ಣೆದುರಿಗೆ ನಿಂತಂತಾಯಿತು. ಆಗ ಅವಳು ಮನದಲ್ಲಿಯೆ:-"ಪ್ರಿಯ ರಣಮಲ್ಲ, ಈ ಸೌಮ್ಯವತಿಯು ಸತ್ಯವನ್ನೇ ಆಡುತ್ತಿದ್ದರೆ, ಈ ಜಗತ್ತಿನಲ್ಲಿ ಮೃತ್ಯುವಿನ ಹೊರತು ನನಗೆ ಏನು ಉಳಿದಿರುವದು! ಮೃತ್ಯುವೇ ನನ್ನನ್ನು ಮುಂದಿನ ಜನ್ಮದಲ್ಲಿ ನಿಮ್ಮ ಚರಣ ಸೇವೆಗೆ ಹಚ್ಚುವದು. ನನಗೆ ಸದ್ಯದ ಇಚ್ಛೆಯೆಂದರೆ ಮೃತ್ಯುವು!" ಎಂದು ನುಡಿದು, ಗಟ್ಟಿಯಾಗಿ:-"ಸೌಮ್ಯವತಿದೇವಿ, ನೀವು ನನ್ನ ಹೃದಯೇಶ್ವರರ ಹೃದಯೇಶ್ವರಿಯಾಗಿರುವಿರಿ. ನಿಮ್ಮಂತಹ ಭಾಗ್ಯಶಾಲಿನಿಯರು ನೀವೇ! ನಾನು ನಿಮ್ಮ ಹಾಗು ರಣಮಲ್ಲರ ಸೌಖ್ಯಕ್ಕಾಗಿ ನನ್ನ ಬಲಿದಾನ ಮಾಡಲಿಕ್ಕೆ ಸಿದ್ಧಳಾಗಿರುವೆನು. ನನಗೆ ಈ ಜಗತ್ತಿನಲ್ಲಿ ಮೃತ್ಯುವೇ ಪ್ರಿಯಕರವಾದದ್ದಾಗಿರುವದು. ನಾನು ಉಲ್ಲಾಸದಿಂದ ಮೃತ್ಯುಪಥವನ್ನಾಶ್ರಯಿಸಲಿಕ್ಕೆ ಸಿದ್ಧಳಾಗಿರುವೆನು."

'ದೇವಿ!' ಸೌಮ್ಯವತಿಯು ವಿಸ್ಮಯದಿಂದ:-"ನಿಮ್ಮ ಈ ವಿಚಾರವು ನಿಮ್ಮ ಹೃದಯದ ದೌರ್ಬಲ್ಯವನ್ನು ವ್ಯಕ್ತಪಡಿಸುವದು. ರಣಮಲ್ಲರ ಪ್ರಾಣರಕ್ಷಣೆಯಾದರೆ, ನೀವೂ ಅವರ ಹೃದಯೇಶ್ವರಿಯಾಗುವಿರಿ."

"ಅವರು ನಿಮ್ಮನ್ನು ತಮ್ಮ ಹೃದಯದೇವತೆಯನ್ನು ಮಾಡಿಕೊಂಡಿರುವದರಿಂದ, ಅಲ್ಲಿ ಮತ್ತೊಂದು ಪ್ರೇಮಕ್ಕೆ ಅವಕಾಶವಿಲ್ಲ. ಅದಕ್ಕಾಗಿ ನನಗೆ ತಿಲಾಂಶವಾದರೂ ಅಸಮಾಧಾನವಿಲ್ಲ. ನನ್ನ ಪ್ರಾಣನಾಥನಿಗೆ ಸುಖವಾದರೆ, ನಿಮಗೆ ಸೌಖ್ಯವಾಗುವದು. ನಿಮ್ಮಿಬ್ಬರ ಸೌಖ್ಯದಲ್ಲಿಯೆ ಸೌಖ್ಯವನ್ನು ಕಲ್ಪಿಸಿಕೊಂಡು ನಾನು ಸಂತುಷ್ಟಳಾಗಿ, ಮೃತ್ಯುವಿನ ತೊಡೆಯ ಮೇಲೆ ಮಲಗಿ ಸುಖನಿದ್ರೆ ಮಾಡುವೆನು. ದೇವಿ, ನನ್ನ ಬಲಿದಾನದಿಂದ ನಿಮಗೂ ರಣಮಲ್ಲರಿಗೂ ಸೌಖ್ಯವು ದೊರೆಯುವದು."

"ಶೀಲವತಿದೇವಿ, ನೀವು ಮಾನವಿಯರಲ್ಲ; ದೇವಿಯರು! ನಿಮ್ಮ ಘನವಂತಿಕೆಯು ಪ್ರಶಂಸನೀಯವಿರುವದು. ನಿಮ್ಮ ಚರಣಗಳಿಗೆ ಅನಂತ ಪ್ರಣಾಮಗಳಿರಲಿ. ದೇವೀ, ನೀವು ಸಹನಶೀಲತೆಯ ಮೂರ್ತಿಯಿರುವಿರಿ.

ಜ್ವಲಂತ ಬಲಿದಾನದ ಉದಾಹರಣೀಯು ದೇವತೆಗಳಿರುವಿರಿ!''

ಸೌಮ್ಯವತಿಯ ನೇತ್ರಗಳು ಅಶ್ರುಪೂರ್ಣವಾದವು. ಅವಳು ದೇವತಾ ಸ್ವರೂಪಿಯಾದ ಶೀಲವತಿಯನ್ನು ಮನಸಾ ವಂದಿಸಿದಳು.

''ಸೌಮ್ಯವತಿ, ಕಣ್ಣೀರುದುರಿಸಬೇಡಿರಿ. ನೀವು ನನ್ನ ಪ್ರಾಣನಾಥರ ಪ್ರಣಯಿನಿಯಿರುವಿರಿ; ಅವರ ಸುಖ-ಸಾಮಗ್ರಿಗಳಾಗಿರುವಿರಿ!" ಹೀಗೆ ನುಡಿದು, ಶೀಲವತಿಯು ತನ್ನ ದುಕೂಲದಿಂದ ಅವಳ ನೇತ್ರಾಶ್ರುಗಳನ್ನು ಒರಸಿದಳು.

ಆ ವೇಳೆಯ ತಪ್ತವ್ಯೋಮಪಟದಲ್ಲಿ ಸಹ ದೇವದೇವತೆಗಳು ಆ ಅಪೂರ್ವ ಬಲಿದಾನ ನೋಟವನ್ನು ನೋಡಹತ್ತಿದ್ದರು.

ಶೀಲವತಿಯು ಗಂಭೀರತೆಯಿಂದ:-''ಸೌಭಾಗ್ಯಶಾಲಿನಿದೇವಿ, ನೀವು ನಿಶ್ಚಿಂತೆಯಿಂದ ನಿಮ್ಮ ನಿವಾಸಕ್ಕೆ ತೆರಳಿರಿ. ಮೂರು-ನಾಲ್ಕು ದಿನಗಳಲ್ಲಿ ನೀವು ಬಂಧಮುಕ್ತರಾದ ರಣಮಲ್ಲರ ದರ್ಶನ ಹೊಂದುವಿರಿ. ಯಾವುದಕ್ಕೆ ಇಡೀ ಜಗತ್ತು ಅಂಜಿ ನಡುಗುವದೋ, ಅಂತಹ ಮೃತ್ಯುವನ್ನಾಶ್ರಯಿಸಿಯಾದರೂ ನಾನು ನನ್ನ ಹೃದಯೇಶ್ವರರನ್ನು-ನಿಮ್ಮ ಪ್ರಿಯಕರರನ್ನು-ಬಿಡುಗಡೆ ಮಾಡುವೆನು ನನ್ನ ವಾಣಿಯು ಸತ್ಯವಾದದ್ದೆಂದು ನಂಬಿ, ನಿಶ್ಚಿಂತೆಯಿಂದ ತೆರಳಿರಿ."

''ಸ್ವಾರ್ಥತ್ಯಾಗಿನಿಯಾದ ದೇವಿ! ನೀವು ನಿಮ್ಮ ಪ್ರಾಣನಾಥರ ಸೌಖ್ಯಕ್ಕಾಗಿ ಆತ್ಮ ಬಲಿದಾನ ಮಾಡುವಿರಾ? ಅವರಬಿಡುಗಡೆಯಾದ ಮೇಲೆ ನಿಮ್ಮ ತಂದೆಯವರು ನಿಮ್ಮನ್ನು ಕ್ಷಮಿಸಿ, ಜೀವದಾನ ಮಾಡಲಾರರೆ? ದೇವಿ, ನಾವೀರ್ವರೂ ಒಬ್ಬನೇ ಹೃದಯೇಶ್ವರನ ಪ್ರೇಮದ ಪಾಲುಗಾರರಾಗಲಿಕ್ಕಿಲ್ಲವೆ?''

''ಸೌಮ್ಯವತಿದೇವಿ, ನೀವು ಸದ್ಯಕ್ಕೆ ಯಾವ ವಿಧದ ಯೋಚನೆಯನ್ನೂ ಮಾಡಬೇಡಿರಿ. ರಣಮಲ್ಲರ ಬಿಡುಗಡೆ ಮಾಡುವದು ಆದ್ಯ ಕರ್ತವ್ಯವಾಗಿದೆ. ಮುಂದಿನ ಘಟನೆಗಳ ವಿಚಾರವನ್ನು ಈಗಲೆ ಮಾಡಲಿಕ್ಕೆ ಬರುವಂತಿಲ್ಲ. ನಾನಂತು ನನ್ನ ಪ್ರಿಯಕರರ ಸಲುವಾಗಿ ಮೃತ್ಯುವಿನ ಆಲಿಂಗನ ಮಾಡಲು ಸಿದ್ಧಳಾಗಿರುವೆನು. ನೀವು ಈಗ ಹೊರಡಿರಿ. ಪ್ರಾಣಪಣ್ಯದಿಂದಲಾದರೂ ರಣಮಲ್ಲರ ಬಿಡುಗಡೆ ಮಾಡುವೆನು; ಇದೇ ನನ್ನ ಪ್ರತಿಜ್ಞೆಯು!''

ಸೌಮ್ಯವತಿಯು ಶೀಲವತಿಗೆ ಅಭಿವಾದನೆ ಮಾಡಿ, ವಿಚಾರ ಸಾಗರದಲ್ಲಿ ತೇಲಾಡುತ್ತ ಅವಳ ಅಟ್ಟಾಲಿಕೆಯನ್ನು ಬಿಟ್ಟು ತೆರಳಿದಳು.

ಸೌಮ್ಯವತಿಯು ಹೋದ ಮೇಲೆ ಶೀಲವತಿಯು ತನ್ನ ಮಂಚದ ಮೇಲೆ ಮಲಗಿ:-'ಮೃತ್ಯು! ಮೃತ್ಯು!!' ಎಂದು ಉದ್ಗಾರ ತೆಗೆದಳು. ಆಗ ಅವಳು ಮೃತ್ಯುವನ್ನು ಆಲಂಗಿಸುದಳೋ-ಏನೋ, ಎಂಬಂತೆ ತನ್ನ ಎರಡೂ ಕೈಗಳನ್ನು ಮುಂದೆ ಚಾಚಿದ್ದಳು!

---

# ಬಂಧವಿಮೋಚನೆ.

---

ಭಗವಾನ್ ಅಂಶುಮಾಲಿಯು ಪಶ್ಚಿಮಾಂಬುಧಿಯನ್ನು ದುಮುಕಲುದ್ಯುಕ್ತನಾಗಿದ್ದನು. ಅಸ್ತಮಾನ ಭಾಸ್ಕರನ ಆರಕ್ತವರ್ಣ ಕಿರಣಗಳು ಸೃಷ್ಟಿಯ ನೈಸರ್ಗಿಕ ಶೋಭೆಯನ್ನು ವೃದ್ಧಿಂಗತ ಮಾಡಿದ್ದವು.

ಇಂತಹ ಸಮಯದಲ್ಲಿ ನಗದೇಶ ರಾಜಧಾನಿಯ ಕಾರಾಗೃಹದಲ್ಲಿ ರಣಮಲ್ಲನು ಒಂದು ಚಾಪೆಯ ಮೇಲೆ ಒರಗಿಕೊಂಡಿದ್ದನು. ಅವನ ಸಮ್ಮುಖದಲ್ಲಿದ್ದ ಸಣ್ಣ ಭಿತ್ತಿವಾತಾಯನದಲ್ಲಿ ಸೂರ್ಯನ ಆರಕ್ತಕಿರಣಗಳು ಒಳಗೆ ಬಿದ್ದಿದ್ದವು. ಮನುಷ್ಯನ ಆಯುಷ್ಯವು ಪ್ರತಿದಿವಸಕ್ಕೆ ಹೇಗೆ ಕಡಿಮೆಯಾಗುತ್ತ ಹೋಗುವದೋ, ಅದರಂತೆ ಪ್ರತಿಪಳದಿಂದ ಆ ಪ್ರಕಾಶವು ಕಡಿಮೆಯಾಗತೊಡಗಿತ್ತು.

ರಣಮಲ್ಲನಿಗೆ ಆ ಕಾರಾಗೃಹವೇ ಜಗತ್ತಾಗಿ ಹೋಗಿತ್ತು. ಸಶಸ್ತ್ರ ಕಾವಲುಗಾರರಿಂದ ಪರಿವೇಷ್ಟಿತವಾದ ಆ ಗೃಹದ ಹೊರಗೆ ವಿಶಾಲವಾದ ಜಗತ್ತಿದ್ದರೂ, ಅದು ಆಗ ರಣಮಲ್ಲನಿಗಾಗಿ ಇದ್ದಿಲ್ಲ. ಆರಾಮ-ವಿರಾಮ ಸುಖ-ದುಃಖ, ಗ್ಲಾನಿ-ಹರ್ಷ ಮೊದಲಾದವುಗಳು ನಾಲ್ಕು ಗೋಡೆಗಳಿಂದ ಪರಿವೇಷ್ಟಿತವಾದ ಆ ಕಾರಾಗೃದಲ್ಲಿ ಹುಟ್ಟಿ ಅಲ್ಲಿಯೇ ನಾಶವಾಗುತ್ತಿದ್ದವು. ಕಾರಾಗೃಹದ ಮೇಲೆ ವಿಶಾಲವಾದ ಆಕಾಶವಿತ್ತು. ಅದು ಎಷ್ಟು ಭವ್ಯವೂ ಉಜ್ವಲವೂ ಇರುವದೆಂಬದರ ಬಗ್ಗೆ ಅವನು ವಿಚಾರ ಮಾಡಹತ್ತಿದ್ದನು; ಆದರೆ ಅವನ ಆಕಾಶವೆಂದರೆ, ಕಾರಾಗೃಹದ ಮೇಲ್ಭಾಗವೇ ಆಗಿತ್ತು. ಅವನಿಗೆ ಹೊರಗಿನ ಆಕಾಶದ ದರ್ಶನವಿಲ್ಲದೆ ಒಂಬತ್ತು ದಿನಗಳಾಗಿದ್ದವು ಅವನು ಸ್ವರ್ಗಸ್ಥ ಪಿತೃವನ್ನು ಮನಸಾ ಧ್ಯಾನ ಮಾಡಿದನು. ಅವನ ಪ್ರಾರ್ಥನೆಯು ಸ್ವರ್ಗವಾಸಿಯಾದ ಜಗಮಲ್ಲನಿಗೆ ತಲುಪಿತು. ಕೂಡಲೆ ಅವನ ಮೂರ್ತಿಯು ರಣಮಲ್ಲನೆದುರಿಗೆ ನಿಂತು, ಆಶೀರ್ವದಿಸಿದಂತಾಯಿತು.

ಮುಂದೆ ಒಂದೆರಡು ನಿಮಿಷಗಳಲ್ಲಿ ರಣಮಲ್ಲನ ವಿಚಾರತಂದ್ರಿಯನ್ನು ನಾಶಮಾಡುವ ಘಟನೆಯೊದಗಿತು. ಯಾರೋ ಕಾರಾಗೃಹದ ಬಾಗಿಲು ತೆರೆಯುತ್ತಿರುವಂತೆ ಅವನಿಗೆ ಭಾಸವಾಯಿತು. ಅವನು ಎದ್ದು ಕುಳಿತನು ಅಷ್ಟರಲ್ಲಿ ಬಾಗಿಲವು ತೆರೆಯಲ್ಪಟ್ಟಿತ್ತು. ಅವನಿಗೆ ಅಲ್ಲಿ ಏನು ಕಂಡಿತು?

ಮೆಲ್ಲಡಿಗಳನ್ನಿಡುತ್ತ ರಾಜಕುಮಾರಿ ಶೀಲವತಿಯು ತನ್ನ ಬಳಿಗೆ ಬರುವಂತೆ ಅವನಿಗ ಕಂಡಿತು. ಇದೇನು ಸ್ವಪ್ನಸೃಷ್ಟಿಯೊ!-ಸತ್ಯಸೃಷ್ಟಿಯೊ?

ಸತ್ಯವಾಗಿದ್ದರೂ ರಣಮಲ್ಲನಿಗೆ ವಿಶ್ವಾಸ ಹುಟ್ಟಲಿಲ್ಲ. ಅವನು ಕಣ್ಣು

ತಿಕ್ಕಿಕೊಂಡು ನೋಡಿದನು. ಎದುರಿಗೆ ಬರುತ್ತಿರುವವಳು ಶೀಲವತಿಯೆಂಬಂತೆಯೇ ಅವನಿಗೆ ತಿಳಿಯಿತು. ಕೂಡಲೆ ಅವನು ಏನೋ ಮಾತಾಡಬೇಕೆಂದು ಸಾಹಸ ಮಾಡಿದನು; ಆದರೆ ರಾಜಕುಮಾರಿಯು ಮೂಗಿನ ಮೇಲೆ ಬೆರಳಿಟ್ಟು, ಸುಮ್ಮನಿರುವ ಬಗ್ಗೆ ಸನ್ನೆ ಮಾಡಿದಳು. ಅನಂತರದಲ್ಲಿ ಅವಳು ರಣಮಲ್ಲನ ಸಮೀಪದಲ್ಲಿ ಬಂದು:-"ಹೂಂ! ಏಳಿರಿ! ಅರೆಕ್ಷಣ ಕೂಡ ಡಶಮಾಡದೆ ಇಲ್ಲಿಂದ ಹೊರಡಿರಿ!" ಎಂದು ಮೆಲ್ಲನೆ ಹೇಳಿದಳು.

"ಎಲ್ಲಿಗೆ?" ರಣಮಲ್ಲನು ಅಸ್ಪಷ್ಟಧ್ವನಿಯಿಂದ ಪ್ರಶ್ನೆ ಮಾಡಿದನು.

"ಮುಕ್ತಿಪಥದ ಮೇಲೆ! ಸ್ವಾತಂತ್ರ್ಯದ ಮಾರ್ಗ ಹಿಡಿದು ಹೊರಟು ಹೋಗಿರಿ!" "ನಿನ್ನ ಅವಸ್ಥೆಯೇನು?"

"ನನ್ನ ವಿಷಯವಾಗಿ ಯೋಚನೆ ಮಾಡಬೇಡಿರಿ."

"ಹೊರಗೆ ಕಾವಲುಗಾರರಿಲ್ಲವೆ?"

"ಅವರಿಗೆ ಒಂದು ಔಷಧಿಯನ್ನು ಕೊಟ್ಟು ಅಸಾವಧಗೊಳಿಸಿರುವೆನು."

"ಪ್ರಾಣವನ್ನು ಸಂಕಟದಲ್ಲಿ ಹಾಕಿ, ಇಷ್ಟು ಸಾಹಸ ಮಾಡಿದ ಉದ್ದೇಶವೇನು?"

"ಎರಡು ಉದ್ದೇಶಗಳುಂಟು. ಮೊದಲನೆ ಉದ್ದೇಶವೆಂದರೆ, ರಾಣಾ ವಿಲಾಸವಿಜಯನು ನಗದೇಶದ ಮೇಲೆ ದಂಡೆತ್ತಿ ಬರತಕ್ಕವನಿರುವನು. ಅವನು ಈಗಾಗಲೆ ಯುದ್ಧ ಸಿದ್ಧತೆ ಮಾಡಿಕೊಳ್ಳುವ ಬಗ್ಗೆ ನಿರೋಪ ಕಳುಹಿಸಿರುವನು ಯುದ್ಧದಲ್ಲಿ ಅವನು ವಿಜಯಿಯಾದರೆ, ಕಾರಾಗೃಹದಲ್ಲಿದ್ದ ನೀವು ಅವನ ಕೈಗೆ ಸಿಗುವಿರಿ. ಅನಂತರದಲ್ಲಿ ಅವನು ನಿಮ್ಮ ಜೀವಕ್ಕೆ ಅಪಾಯ ಮಾಡದಿರಲಾರನು; ಯಾಕಂದರೆ, ನೀವು ಹಿಂದೆ ಅವನ ಕೈಯಿಂದ ನನ್ನನ್ನು ಬಿಡುಗಡೆ ಮಾಡಿ ಮನೋಭಂಗ ಮಾಡಿರುವಿರಿ. ಅದರ ಸೇಡನ್ನು ಅವನು ತೀರಿಸಿಕೊಳ್ಳದೆ ಬಿಡಲಾರನು ಅದಕ್ಕಾಗಿಯೆ ನಿಮ್ಮನ್ನು ಕಾರಾಗೃಹದಿಂದ ಬಿಡುಗಡೆ ಮಾಡುವ ಸಾಹಸ ಕೈಕೊಂಡೆನು. ಇನ್ನು ಎರಡನೆಯ ಉದ್ದೇಶವೆಂದರೆ—ಇರಲಿ, ಹೂಂ ಬೇಗನೆ ಹೊರಡಿರಿ!"

"ಎರಡನೆಯ ಕಾರಣವನ್ನು ಹೇಳಲಿಲ್ಲವಲ್ಲ?"

"ಎರಡನೆಯ ಕಾರಣವೆ? ಇರಲಿ. ಅದು ಮುಂದೆ ತಾನಾಗಿಯೆ ತಿಳಿಯಬಹುದು."

"ಎರಡನೆಯ ಕಾರಣವು ತಿಳಿದ ಮೇಲೆಯೇ ಇಲ್ಲಿಂದ ಹೊರಡುವ ವಿಚಾರ ಮಾಡುವೆನು."

"ನಿಮ್ಮನ್ನು ಬಿಡುಗಡೆ ಮಾಡುವದಕ್ಕೆ ಎರಡನೆಯ ಕಾರಣವಾವು

ದೆಂದು ಕೇಳುವಿರಾ? ಆ ಕಾರಣವೆಂದರೆ—"

ರಾಜಕುಮಾರಿಯು ಮುಂದೆ ಮಾತಾಡಲಿಕ್ಕೆ ಸಮರ್ಥಳಾಗಲಿಲ್ಲ

ರಣಮಲ್ಲನು ಉತ್ಸುಕತೆಯಿಂದ ಅವಳ ಮುಖವನ್ನು ನೋಡತೊಡಗಿದನು. ಅವಳ ಮುಖದ ಮೇಲೆ ರಕ್ತಿಮೆಯು ವ್ಯಾಪಿಸಿದ್ದು, ಅದು ಅವನತವಾಗಿತ್ತು. ಅವಳ ಮನಸ್ಸಿನೊಳಗಿನ ಇನ್ನೊಂದು ಕಾರಣವು ಯಾವದಿರಬಹುದು? ಹೃದಯಾನುರಾಗವೇ ಸರಿ!

'ರಾಜಕನ್ಯೆ!' ರಣಮಲ್ಲನು ಕೃತಜ್ಞತೆಯಿಂದ "ನಿನ್ನ ಈ ಪ್ರಯತ್ನಕ್ಕಾಗಿ ನಾನು ಕೃತಜ್ಞನಾಗಿರುವೆನು. ಯಾವನು ಮೃತ್ಯುವಿನೊಡನೆ ಕಾದಲಿಕ್ಕೆ ಸಿದ್ಧನಿರುತ್ತಿದ್ದನೋ, ಅಂತಹ ಶೂರ ವೀರ ಜಗಮಲ್ಲನ ಪುತ್ರನಾದ ನಾನು ಒಬ್ಬ ಕಳ್ಳನಂತೆ ಕಾರಾಗೃಹದಿಂದ ಓಡಿ ಹೋಗಲಾ? ಅಸಂಭವ, ಅಸಂಭವ!"

ರಣಮಲ್ಲನ ಮುಖದಿಂದ ಈ ಬಗೆಯ ಮಾತುಗಳು ಹೊರಡುವವೆಂದು ಶೀಲವತಿಯು ಇದಕ್ಕಿಂತ ಮುಂಚಿತವಾಗಿ ತಿಳಿದಿರಲಿಲ್ಲ ರಣಮಲ್ಲನ ಭಾಷಣವು ಅವಳ ಹೃದಯವನ್ನು ವಿದೀರ್ಣಗೊಳಿಸಿತು. ಅವಳು ವಿಚಾರ ಸಾಗರದಲ್ಲಿ ಮುಳುಗಿದಳು. ಆಗ ರಣಮಲ್ಲನು: "ಶೀಲವತಿ, ನಾನು ಇಲ್ಲಿಂದ ಹೊರಟು ಹೋದರೆ, ನಿನಗೆ ಮೃತ್ಯುದಂಡನೆಯು ವಿಧಿಸಲ್ಪಡುವದೆಂಬದನ್ನು ನೆನಪಿನಲ್ಲಿಟ್ಟಿರುವೆಯಾ?"

"ನನ್ನ ಚಿಂತೆಯನ್ನು ನೀವು ಮಾಡುವ ಆವಶ್ಯಕತೆಯಿಲ್ಲ ನನ್ನ ದಾರಿಯನ್ನು ನಾನು ಕಂಡುಕೊಳ್ಳುವೆನು. ನೀವು ವಿಲಂಬಮಾಡದೆ ಹೊರಡಿರಿ."

"ನಿನ್ನನ್ನು ಪ್ರಾಣಾಂತಿಕ ಗಂಡಾಂತರದಲ್ಲಿ ಕೆಡಹಿ ನಾನು ಜೀವವನ್ನು ಉಳಿಸಿಕೊಂಡು ಹೋಗಬೇಕೆ? ಒಬ್ಬ ಅಬಲೆಯ ಪ್ರಾಣಪಣ್ಯದಿಂದ ರಣಮಲ್ಲನ ಜೀವವು ಸುರಕ್ಷಿತವಾಯಿತೆಂಬ ಅಕೀರ್ತಿಕಾರಕ ವಾಕ್ಯವು ಭಾರತದ ಉಜ್ವಲವಾದ ಇತಿಹಾಸದಲ್ಲಿ ಕಡೆತನಕ ಉಳಿಯುವ ಹೀನಕೃತಿಯನ್ನು ನಾನು ಮಾಡಬೇಕೆ? ತೀರ ಅಸಂಭವ!"

"ಈ ವೇಳೆಯಲ್ಲಿ ನೀವು ಹೀಗೆ ಚಂಡಿತನ ಮಾಡಬೇಡಿರಿ. ನಿಮ್ಮ ಕಾಲಿಗೆ ಬೀಳುತ್ತೇನೆ. ದಯಮಾಡಿ ಇಲ್ಲಿಂದ ಹೊರಡಿರಿ. ನೀವು ದೊಡ್ಡ ಮನಸ್ಸು ಮಾಡಿ, ನನ್ನ ಈ ಅಲ್ಪವಾದ ಬೇಡಿಕೆಯನ್ನು ನೆರವೇರಿಸಿರಿ"

"ನಾನು ನನ್ನ ಪ್ರಾಣವನ್ನು ಬೇಡಿದರೂ ಕೊಡಲಿಕ್ಕೆ ಸಿದ್ಧನಿರುವೆನು; ಆದರೆ ಹೀಗೆ ಹೇಡಿಯಂತೆ ಜೀವಗಳ್ಳನಾಗಿ ಓಡಿ ಹೋಗಲಾರೆನು. ನಿನ್ನ ಬೇಡಿಕೆಯು ನನ್ನ ಶೀಲಕ್ಕೆ ಭಂಗವನ್ನುಂಟುಮಾಡುವಂಥಾದ್ದಿರುವದರಿಂದ,

ನಾನು ನಿರುಪಾಯನಾಗಿರುವೆನು. ಶೀಲವತಿ, ನನ್ನ ಈ ವೃತ್ತಿಗಾಗಿ ಖೇದ ಗೊಳ್ಳಬೇಡ."

"ನೀವು ನಿಮ್ಮ ಜೀವದ ಒಡೆಯರಿರುವದರಿಂದ ಬೇಕಾದಹಾಗೆ ಮಾಡ ಬಹುದು; ಆದರೆ ಎರಡನೆಯವರ ಜೀವವನ್ನು ತೆಗೆದುಕೊಳ್ಳಲಿಕ್ಕೂ, ಅವ ರನ್ನು ಸಂಕಟದಲ್ಲಿ ಕೆಡಹಲಿಕ್ಕೂ ನಿಮಗೆ ಅಧಿಕಾರವಿಲ್ಲವೆಂಬ ಮಾತನ್ನು ಮರೆತರೆ ದೋಷಿಗಳಾಗುವಿರಿ"

"ಏನು? ನಾನು ಎರಡನೆಯವರ ಪ್ರಾಣವನ್ನು ತೆಗೆದುಕೊಳ್ಳಲಿಕ್ಕೆ ಸಿದ್ಧನಾಗಿರುವೆನೆ? ರಾಜಕುಮಾರಿ, ಇದೇನು ಹೇಳುವೆ!"

"ನಾನು ನಿಜವನ್ನೇ ಹೇಳುತ್ತಿರುವೆನು."

"ಹಾಗಾದರೆ ನಾನು ಯಾರ ಪ್ರಾಣಕ್ಕೆ ಮುಳುವಾಗಿರುವೆನು?"

"ನೀವು ಮುಳುವಾಗಿಲ್ಲ; ಇದೀಗಿನ ನಿಮ್ಮ ವೃತ್ತಿಯು ಮುಳುವಾ-ಗುತ್ತಲಿದೆ."

"ನನ್ನ ವೃತ್ತಿಯಾದರೂ ಯಾರ ಪ್ರಾಣಕ್ಕೆ ಮುಳುವಾಗುತ್ತಲಿದೆ?"

"ನಿಮ್ಮ ಹೃದಯದ ಮೇಲೆ ಕೈಯಿಟ್ಟು ಈ ಪ್ರಶ್ನೆಯನ್ನು ವಿಚಾರಿ ಸಿರಿ; ಅಂದರೆ ಅದು ನಿಮ್ಮ ಮಾತಿನ ಉತ್ತರ ಕೊಡುವದು."

"ಶೀಲವತಿ, ಲಕ್ಷ್ಯದಲ್ಲಿ ಬರಲೊಲ್ಲದು."

"ನೀವು ನನಗೆ ಉಪಕಾರ ಮಾಡಿಲ್ಲವೆ? ಅದಕ್ಕೆ ಪ್ರತಿಫಲವೆಂದು ಇಂದಿನ ಉಪಕಾರದ ಸ್ವೀಕಾರ ಮಾಡಿರಿ."

"ಇದು ಉಪಕಾರದ ಪ್ರತಿಫಲವಲ್ಲ. ಕರ್ತವ್ಯದ ನಾಶಮಾಡುವಂತಹ ಉಪಕಾರವು ಉಪಕಾರವಲ್ಲ; ಇಷ್ಟಲ್ಲದೆ ನಿಜವಾದ ರಜಪುತನು ಅಸಹಾಯ್ಯ ಸ್ಥಿತಿಯಲ್ಲಿದ್ದ ಅಬಲೆಯನ್ನು ಬಂಧಮುಕ್ತಗೊಳಿಸಿದ ಕೃತಿಯನ್ನು ಉಪಕೃತಿ ಯೆಂದು ಭಾವಿಸುವದಿಲ್ಲ."

ರಾಜಕನ್ಯೆಯು ನಿರುತ್ತರಳಾದಳು. ಮುಂದೆ ಏನು ಉಪಾಯ ಮಾಡ ಬೇಕೆಂದು ಅವಳು ವಿಚಾರಿಸತೊಡಗಿದಳು. ಅವಳು ನಾಲ್ಕೂ ಕಡೆಗೆ ನಿರೀಕ್ಷಿ ಸಿದಳು. ಅಲ್ಲಿ ನೀರು ತುಂಬಿದ ಒಂದು ಪಾತ್ರೆಯು ಕಂಡಿತು. ಆಗ ಅವಳು ರಣಮಲ್ಲನನ್ನು ಕುರಿತು:-"ರಣಮಲ್ಲ, ನನ್ನ ಗಂಟಲಾರಿದೆ. ಈ ಪಾತ್ರೆಯೊಳ ಗಿನ ನೀರನ್ನು ಕುಡಿಯಲಿಕ್ಕೆ ಕೊಡುವಿರಾ?"

'ಒಳ್ಳೇದು' ಎಂದು ನುಡಿದು, ರಣಮಲ್ಲನು ಪಾತ್ರೆಯೊಳಗಿನ ನೀರನ್ನು ಒಂದು ಸಣ್ಣಪಾತ್ರೆಯಲ್ಲಿ ಹಾಕಹತ್ತಿದನು.

ಶೀಲವತಿಯು ತನ್ನಲ್ಲಿ ಬಚ್ಚಿಟ್ಟಿದ್ದ ಒಂದು ಕುಪ್ಪಿಯನ್ನು ಹೊರಗೆ

ತೆಗೆದು ಅವರ ಬೆಣೆಯನ್ನು ತೆಗೆದು ನೀರು ಹಾಕತೊಡಗಿದ್ದ ರಣಮಲ್ಲನ ಹಿಂದೆ ಹೋಗಿ, ಆ ಕುಪ್ಪಿಯನ್ನು ಅವನ ಮೂಗಿಗೆ ಹಿಡಿದಳು. ಕೂಡಲೆ ರಣಮಲ್ಲನ ಕೈಯೊಳಗಿನ ಪಾತ್ರೆಯು ನೆಲಕ್ಕೆ ಬಿತ್ತು. ಪರಕ್ಷಣದಲ್ಲಿ ಅವನೂ ಮೂರ್ಛಿತ ನಾಗಿ ಬಿದ್ದನು!"

ಯಾವ ಔಷಧವನ್ನು ಕಾವಲುಗಾರರ ಮೂಗಿಗೆ ಹಿಡಿದು, ಅವರನ್ನು ಅಸಾವಧಗೊಳಿಸಿ ಒಳಗೆ ಒಂದಿದ್ದಳೋ, ಅದೇ ಔಷಧವನ್ನು ರಣಮಲ್ಲನ ಮೂಗಿಗೆ ಹಿಡಿದು, ಶೀಲವತಿಯು ತನ್ನ ಕಾರ್ಯವನ್ನು ಈಡೇರಿಸಿಕೊಂಡಳು.

ರಣಮಲ್ಲನನ್ನು ಹೀಗೆ ಅಸಾವಧಗೊಳಿಸಲಿಕ್ಕೆ ಕಾರಣವೇನಿರಬಹುದು? ರಣಮಲ್ಲನು ನಿಜವಾದ ರಜಪುತನಿದ್ದನು ಸಾವಧಾನಸ್ಥಿತಿಯಲ್ಲಿ ಅವನು ಪರರ ಸಹಾಯದಿಂದ ಬಂಧಮುಕ್ತನಾಗಲಿಕ್ಕೆ ಅನುಮತಿಯನ್ನೀಯುವಂತಿರಲಿಲ್ಲ. ಆದಕ್ಕಾಗಿ ಶೀಲವತಿಯು ಹೀಗೆ ಉಪಾಯ ಯೋಜನೆ ಮಾಡಿದಳು.

ಶೀಲವತಿಯು ರಣಮಲ್ಲನ ಮೂರ್ಛಿತ ದೇಹದ ಮೇಲೆ ಕೈಯಾಡಿಸಿ, ಅವನು ಎಚ್ಚರದಪ್ಪಿರುವನೋ ಇಲ್ಲವೋ ಎಂಬದನ್ನು ಪರೀಕ್ಷಿಸಿದಳು. ಅನಂತರದಲ್ಲಿ ತುಸ ಹಿಂದೆ ಸರಿದು, ಅವನ ದೇಹ ನಿರೀಕ್ಷಣೆ ಮಾಡತೊಡಗಿದಳು.

ರಣಮಲ್ಲನು ಅವಳ ಪ್ರಾಣನಾಯಕನಾಗಿದ್ದನು; ಸೌಖ್ಯದ ತಂತುವಾಗಿದ್ದನು. ಅಂತೆಯೇ ಅವನ ಸಲುವಾಗಿ ಇಷ್ಟು ಸಾಹಸ ಮಾಡಹತ್ತಿದ್ದಳು.

ಆದರೆ ಈಗ ಅವಳ ಜೀವನವು ನಿರಾಶಾಮಯವಾಗಿತ್ತು. ಸೌಮ್ಯವತಿಯು ಭೇಟಿಯಾದಂದಿನಿಂದ ಅವಳ ಮನಃಸ್ಥಿತಿಯಲ್ಲಿ ಅಭ್ಯಂತರವುಂಟಾಗಿತ್ತು. ಈಗ ಅವಳು ಮಾಡತೊಡಗಿದ ಸಾಹಸವು ಸ್ವಸೌಖ್ಯಕ್ಕಾಗಿಯಲ್ಲ; ರಣಮಲ್ಲನ ಹಾಗು ಅವನ ಪ್ರಣಯಿನಿಯಾದ ಸೌಮ್ಯವತಿಯ ಸೌಖ್ಯಕ್ಕಾಗಿತ್ತು.

ಶೀಲವತಿಯು ಎಷ್ಟೋ ವೇಳೆಯವರೆಗೆ ರಣಮಲ್ಲನನ್ನು ನೋಡುತ್ತ ನಿಂತಿದ್ದಳು. ಅನಂತರದಲ್ಲಿ ದೀರ್ಘವಾದ ನಿಟ್ಟುಸಿರಗರೆದಳು. ಆಗ ಅವಳ ನೇತ್ರಗಳು ಜಲಪೂರ್ಣವಾಗಿದ್ದವು ಅವುಗಳನ್ನು ಅವಳು ಸೆರಗಿನಿಂದ ಒರಸಿಕೊಂಡು, ಮತ್ತೊಮ್ಮೆ ಉಸಿರ್ಗರೆದಳು. ಅನಂತರದಲ್ಲಿ ಕೈಯಲ್ಲಿದ್ದ ಔಷಧದ ಕುಪ್ಪಿಯನ್ನು ಬಳಿಯಲ್ಲಿ ಬಚ್ಚಿಟ್ಟು, ಕಾರಾಗೃಹದ ಬಾಗಿಲಿಗೆ ಹೋಗಿ, ಅಲ್ಲಿ ನಿಂತ ತನ್ನ ನಂಬಿಗೆಯ ಅನುಯಾಯಿಗಳನ್ನು ಕರೆದಳು. ಕೂಡಲೆ ಇಬ್ಬರು ಸೇವಕರು ಅವಳ ಬಳಿಗೆ ಹೋಗಿ ಅಭಿವಾದನ ಮಾಡಿ ನಿಂತುಕೊಂಡರು. ಆಗ ಶೀಲವತಿಯು:—"ಇವರಿಗೆ ಅರಿವೆಯ ಬುರುಕೆ ಹಾಕಿ ಕುದುರೆಯ ಮೇಲೆ ಕುಳ್ಳಿರಿಸಿ, ಇವರನ್ನು ಸೇನಾಪತಿಗಳಾದ ಮಯೂರಧ್ವಜರ ಮಂದಿರದ ಬಳಿಯಲ್ಲಿಟ್ಟು ಹೊರಟು ಹೋಗಿರಿ." ಎಂದು ಆಜ್ಞಾಪಿಸಿದಳು.

ರಾಜಕುಮಾರಿಯಲ್ಲಿ ಭಕ್ತಿ-ವಿಶ್ವಾಸಗಳುಳ್ಳ ಆ ಸೈನಿಕರು ಅದರಂತೆ ಮಾಡುವದಕ್ಕೆ ಒಪ್ಪಿಕೊಂಡರು. ಅನಂತರದಲ್ಲಿ ರಣಮಲ್ಲನಿಗೆ ಬುರುಕೆ ಹಾಕಿದರು; ಹಾಗು ಒಬ್ಬನು ಅವನನ್ನು ಹೆಗಲ ಮೇಲೆ ಹೊತ್ತುಕೊಂಡನು.

'ಈ ಕಾರ್ಯದಲ್ಲಿ ತಿಲಾಂಶವಾದರೂ ಎಚ್ಚರಗೇಡಿತನವು ಆಗಬಾರದು.' ಎಂದು ರಾಜಕುಮಾರಿಯು ಆ ಸೇವಕರಿಗೆ ಹೇಳಿದಳು.

'ತಥಾಸ್ತು' ಎಂದು ಹೇಳಿ, ಆ ಸೇವಕರು ಕಾರಾಗೃದಿಂದ ಹೊರಬಿದ್ದರು

ತರುವಾಯ ರಾಜಕುಮಾರಿಯೂ ಕಾರಾಗೃಹದಿಂದ ಹೊರಬಿದ್ದು:— "ಭಗವಂತಾ! ಇನ್ನು ನನ್ನ ಆಯುಷ್ಯದಲ್ಲಿಯು ಕರ್ತವ್ಯಗಳೇನೂ ಉಳಿಯುಲಿಲ್ಲ. ಶೀಘ್ರವಾಗಿ ಮೃತ್ಯುಪಥವನ್ನು ತೋರಿಸು!" ಎಂದ ಉದ್ಗಾರ ತೆಗೆದು, ಮಾರ್ಗಕ್ರಮಣ ಮಾಡತೊಡಗಿದಳು.

---

## ವಯಂ ಪಂಚೋತ್ತರಂ ಶತಂ!

ಸೂರ್ಯೋದಯಕ್ಕೆ ಇನ್ನೂ ಅವಕಾಶವಿತ್ತು. ಸಂಧ್ಯಾರಾಗದಿಂದ ಪಶ್ಚಿಮದಿಶೆಯು ಸೊಬಗುವಡೆದಿತ್ತು. ತಂಗಾಳಿಯು ಸುಳ್ಳನೆ ಸುಳಿಯುತೊಡಗಿತ್ತು. ಮಯೂರಧ್ವಜನ ಗೃಹೋದ್ಯಾನದೊಳಗಿನ. ಶುಕ-ಪಿಕಗಳು ಕಿಲಿಕಿಲಾಟ ಧ್ವನಿಗೆಯ್ಯತೊಡಗಿದ್ದವು.

ನಗದೇಶ ರಾಜಧಾನಿಯ ತುಂಬ ಯುದ್ಧದ ವರ್ತಮಾನವು ಪಸರಿಸಿತ್ತು. ರಾಣಾ ವಿಲಾಸವಿಜಯನು ರಾಜಧಾನಿಯ ಮೇಲೆ ದಂಡೆತ್ತಿ ಬರುವನೆಂಬದು ಎಲ್ಲರಿಗೂ ಗೊತ್ತಾಗಿತ್ತು.

ರಾಣಾ ರಾಯಸಿಂಹನು ಶತ್ರುವಿನ ಪ್ರತೀಕಾರಕ್ಕಾಗಿ ಸಿದ್ಧನಾಗತೊಡಗಿದ್ದನು. ಅವನ ಸೈನಿಕರು ಸಂಗ್ರಾಮಕ್ಕಾಗಿ ಸುಸಜ್ಜಿತರಾಗಿದ್ದರು.

ಒಮ್ಮೆಲೆ ಯುದ್ಧದ ಬೇಗೆಯು ಹಬ್ಬಿದ್ದನ್ನು ನೋಡಿ, ಸೇನಾಪತಿಯಾದ ಮಯೂರಧ್ವಜನಿಗೆ ವಿಸ್ಮಯವಾಯಿತು. ಭಾವೀ ಯುದ್ಧದ ಕಾರ್ಯ-ಕಾರಣಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಅವನು ತನ್ನ ಮನೆಯನ್ನು ಬಿಟ್ಟು ಹೊರಬಿದ್ದನು.

ಅವನು ಉದ್ಯಾನದೊಳಗಿನ ಮಾರ್ಗವನ್ನು ಹಿಡಿದು ನಡೆದಿರಲು, ಒಬ್ಬ ರಜಪುತನು ಅಸಾವದ ಸ್ಥಿತಿಯಲ್ಲಿ ಬಿದ್ದದ್ದು ಅವನಿಗೆ ಕಂಡಿತು. ಕೂಡಲೆ ಅವನು ಸೋಜಿಗಗೊಂಡು, ಆ ರಜಪುತನ ಬಳಿಗೆ ಹೋದನು; ಮತ್ತು ಅವನನ್ನು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸತೊಡಗಿದನು.

ಆಶ್ಚರ್ಯ! ಅಲ್ಲಿ ಬಿದ್ದವನು ರಣಮಲ್ಲನಾಗಿದ್ದನು!

ಇವನು ಇಲ್ಲಿ ಹೇಗೆ? ಸೇನಾಪತಿಯ ಆಶ್ಚರ್ಯಕ್ಕೆ ಪಾರಾವಾರವಿಲ್ಲ.

ಅವನು ರಣಮಲ್ಲನನ್ನು ಹೆಗಲ ಮೇಲೆ ತಕ್ಕೊಂಡು ತನ್ನ ಮಂದಿರಕ್ಕೆ ತೆರಳಿದನು.

ರಣಮಲ್ಲನು ಕಾರಾಗೃಹದಿಂದ ಇಲ್ಲಿಗೆ ಹೇಗೆ ಬಂದನು? ಇವನನ್ನು ಮುಕ್ತಗೊಳಿಸಿದವರು ಯಾರು? ಮೊದಲಾದ ವಿಷಯಗಳನ್ನು ತಿಳಿದುಕೊಳ್ಳುವ ಕುತೂಹಲವು ಅವನಲ್ಲಿ ಹುಟ್ಟಿದ್ದರೂ, ತಿಳಿದುಕೊಳ್ಳುವ ಸಾಧನವಿದ್ದಿಲ್ಲ; ವೇಳೆಯೂ ಇದ್ದಿಲ್ಲ. ಮೊದಲು ರಣಮಲ್ಲನನ್ನು ಎಚ್ಚರಗೊಳಿಸಬೇಕಾಗಿತ್ತು. ಅವನು ತನ್ನ ಸೇವಕನನ್ನು ಕೂಗಿ, ನೀರು ತರುವದಕ್ಕೆ ಆಜ್ಞಾಪಿಸಿದನು

ನೀರು ಬಂದ ಮೇಲೆ ಮಯೂರಧ್ವಜನು ರಣಮಲ್ಲನಿಗೆ ಶೈತ್ಯೋಪಚಾರ ಮಾಡತೊಡಗಿದನು. ಅಸಾವಧಗೊಂಡಿದ್ದ ರಣಮಲ್ಲನು ಮುಂದೆ ಸ್ವಲ್ಪವೇಳೆಯಲ್ಲಿ ಎಚ್ಚತ್ತನು ತರುವಾಯ ಅವನು ಮೆಲ್ಲನೆ ಕಣ್ಣು ತೆರೆದು, ನಾಲ್ಕೂ ಕಡೆಗೆ ನಿರೀಕ್ಷಿಸಿದನು. ಅವನ ಮುಖದಿಂದ 'ರಾಜಕನ್ಯೆ! ಶೀಲವತಿ!' ಎಂಬ ಶಬ್ದಗಳು ಹೊರಟವು

"ರಣಮಲ್ಲ!" ಮಯೂರಧ್ವಜನು ಮಗನ ಎದೆಯ ಮೇಲೆ ಕೈಯಿಟ್ಟು: "ಏನಿದು ಪ್ರಸಂಗ?" ಎಂದು ಕೇಳಿದನು.

ರಣಮಲ್ಲನು ಮಯೂರಧ್ವಜನನ್ನು ನೋಡಿ ವಿಸ್ಮಯದಿಂದ:—'ಯಾರು? ಕಾಕಾಸಾಹೇಬರೇನು?'

"ಹೌದು ಕುಮಾರಾ!" "ಈಗ ನಾನು ಎಲ್ಲಿರುವೆನು?"

"ನನ್ನ ಮಂದಿರದಲ್ಲಿ." "ನಾನು ಇಲ್ಲಿಗೆ ಹೇಗೆ ಬಂದೆನು?"

"ನೀನು ನನ್ನ ಉದ್ಯಾನದಲ್ಲಿ ಅಸಾವಧ ಸ್ಥಿತಿಯಲ್ಲಿ ಬಿದ್ದುಕೊಂಡಿದ್ದೆ. ನಾನು ನಿನ್ನನ್ನು ಇಲ್ಲಿಗೆ ತಂದೆನು"

ರಣಮಲ್ಲನು ವಿಚಾರ ಶರಧಿಯಲ್ಲಿ ಮುಳುಗಿದನು ಅವನಿಗೆ ಮುಂಚಿನ ದಿನದ ಘಟನೆಗಳು ಒಂದೊಂದಾಗಿ ಸ್ಮೃತಿಪಥದಲ್ಲಿ ಬರತೊಡಗಿದವು ಆಗ ಅವನು:—"ಹಾ! ತಿಳಿಯಿತು!"

"ರಣಮಲ್ಲ, ಏನಿದು ಚಮತ್ಕಾರ? ನೀನು ಕಾರಾಗೃಹದಿಂದ ಇಲ್ಲಿಗೆ ಹೇಗೆ ಬಂದೆ?" "ಈ ಕೃತಿಯು ನಿಶ್ಚಯವಾಗಿ ಅವಳದೇ!"

"ಯಾರದು?" "ರಾಜಕುಮಾರಿ ಶೀಲವತಿಯ ಕಾರಸ್ಥಾನವಿದು."

"ಏನು, ರಾಜಕನ್ಯೆಯ ಕಾರಸ್ಥಾನವೆ? ಅವಳೇ ನಿನ್ನನ್ನು ಬಂಧಮುಕ್ತಗೊಳಿಸಿದಳೆ?"

“ನನ್ನನ್ನು ಮೂರ್ಛಿತಗೊಳಿಸಿ, ಅವಳೇ ಬಿಡುಗಡೆ ಮಾಡಿದಳೆಂಬದರಲ್ಲಿ ಏನೂ ಸಂದೇಹವಿಲ್ಲ.”

“ನಿನ್ನನ್ನು ಬಿಡುಗಡೆ ಮಾಡಬೇಕೆಂಬದು ಶೀಲವತಿಯ ಮನಸ್ಸಿನಲ್ಲಿದ್ದರೆ, ಹೀಗೆ ಮೂರ್ಛೆಯುಂಟಾಗುವಂತೆ ಏಕೆ ಮಾಡಿದಳು?”

“ಅವಳು ನನ್ನನ್ನು ಸೆರೆಮನೆಯಿಂದ ಪಾರುಮಾಡಬೇಕೆಂದು ಬಂದಿದ್ದಳು; ಆದರೆ ಹೇಡಿಯಂತೆ ಓಡಿ ಹೋಗುವದು ನನ್ನ ಮನಸ್ಸಿಗೆ ಬಾರದ್ದರಿಂದ, ಅವಳು ಯಾವದೋ ಒಂದು ಔಷಧವನ್ನು ನನ್ನ ಮೂಗಿಗೆ ಹಿಡಿದು ಅಸಾವಧಗೊಳಿಸಿದಳು. ಮುಂದೆ ತನ್ನ ಸೇವಕರಿಂದ ಇಲ್ಲಿಗೆ ತಂದುಬಿಟ್ಟಿದ್ದಾಳೆ.”

“ಅವಳು ನಿನ್ನ ಮೇಲೆ ಈ ಬಗೆಯ ಉಪಕಾರಬುದ್ಧಿಯನ್ನು ತೋರಿಸುವ ಉದ್ದೇಶವೇನು?”

“ರಾಣಾ ವಿಲಾಸವಿಜಯನ ಕೈಯಿಂದ ನಾನು ಅವಳನ್ನು ಪಾರು ಮಾಡಿದ್ದರಿಂದ ಉಪಕೃತಳಾಗಿರುವಳು. ಅದಕ್ಕಾಗಿಯೇ ಅವಳು ಈ ಕೃತಿಯನ್ನು ಮಾಡಿದಳು. ಕಾಕಾಸಾಹೇಬರೆ, ಯುದ್ಧದ ವರ್ತಮಾನವೇನು?”

“ರಣಮಲ್ಲ!” ಮಯೂರಧ್ವಜನು ವಿಸ್ಮಯದಿಂದ:—“ಸೆರೆಮನೆಯಲ್ಲಿದ್ದ ನಿನಗೆ ಯುದ್ಧದ ಸಮಾಚಾರವು ಹೇಗೆ ಗೊತ್ತಾಯಿತು?”

“ರಾಜಕನ್ಯೆಯೇ ಈ ವಿಷಯವನ್ನು ತಿಳಿಸಿದಳು.”

“ಯುದ್ಧವು ಬಹಳ ಮಾಡಿ ಬೇಗನೆ ಪ್ರಾರಂಭವಾಗುವದೆಂಬ ವಾರ್ತೆಯಿದೆ. ಇಂದೇ ಆರಂಭವಾದರೂ ಆಗುವ ಸಂಭವವುಂಟು.”

“ಭಾವೀ ಯುದ್ಧದಲ್ಲಿ ನೀವು ಯಾವ ಬಗೆಯ ಧೋರಣವನ್ನಿಡುವಿರಿ?”

“ಹೇಗೆ ನಡೆಯುವದು ನಿನಗೆ ವಿಹಿತವೆಂದು ತಿಳಿಯುವದು?”

“ಅನೀತಿಯ ರಾಣಾನು ಕರ್ಮಕ್ಕೆತಕ್ಕ ಫಲವನ್ನು ಹೊಂದುವದು ಯೋಗ್ಯವು. ಅದಕ್ಕಾಗಿ ನೀವು ಅವನ ವೈರಿ ವರ್ಗಕ್ಕೆ ಸಹಾಯ ಮಾಡುವದು ಉಚಿತವು. ಹಾಗೆ ಮಾಡಲಿಕ್ಕೆ ಮನವೊಪ್ಪದಿದ್ದರೆ, ತಟಸ್ಥವೃತ್ತಿಯಿಂದಾದರೂ ಇರಬೇಕು.”

“ರಣಮಲ್ಲ, ನಾನು ರಾಣಾನ ಉಪ್ಪು ಆಜನ್ಮವಾಗಿ ಉಂಡಿರುವೆನು. ನಗದೇಶದ ಅನ್ನದಿಂದ ಪರಿಪೋಷಿತವಾದ ಕಾಯವು ರಾಷ್ಟ್ರದ್ರೋಹದ ಕಾರ್ಯಕ್ಕಾಗಿ ಸವಿಸಲ್ಪಡಬೇಕೆ? ಹಾಗೆ ಮಾಡಿದರೆ ನಗದೇಶದ ಪ್ರಜಾಪರಿವಾರವು ನನಗೆ ಏನೆನ್ನಬಹುದು? ರಾಣಾನು ಅನೀತಿಯುವನಿದ್ದರೆ, ನಗದೇಶದ ಪ್ರಜಾಜನರು ಅನೀತಿಯುವರಿಲ್ಲ ನಾನು ವಿಲಾಸವಿಜಯನ ಪಕ್ಷವನ್ನು ವಹಿಸಿದರೆ, ನನ್ನ ಕೃತ್ಯವು ಪ್ರಜಾಪರಿವಾರಕ್ಕೆ ಸಂಕಟಪ್ರದವಾಗುವದಿಲ್ಲವೆ?

ಸದ್ಯದ ಕಾಳಗವು ರಾಣಾನ ಮೇಲಿನದಲ್ಲ; ನಗದೇಶದ ಮೇಲಿನದು. ಸ್ವಾತಂತ್ರ್ಯಪೂರ್ಣವಾದ ನಗದೇಶವನ್ನು ಪಾರತಂತ್ರ್ಯಪಂಕದಲ್ಲಿ ಕೆಡಹುವಂತಹ ಸಂದರ್ಭವುಂಟು. ಈ ವೇಳೆಯಲ್ಲಿ ನಾನು ರಾಣಾ ವಿಲಾಸವಿಜಯನನ್ನು ಕೂಡಿದರೆ, ನಗದೇಶದ ಪ್ರಜೆಗಳ ಕೊರಳು ಕೊಯ್ದಂತಾಗುವದಿಲ್ಲವೆ? ರಣಮಲ್ಲ, ಆಯತ್ತವಾದ ಸಮಯದಲ್ಲಿ ಅವಸಾನಘಾತಮಾಡುವದಕ್ಕಾಗಿಯೆ ನಗದೇಶ ರಾಷ್ಟ್ರವು ನನ್ನನ್ನು ಇಂದಿನ ವರೆಗೆ ಪರಿಪೋಷಿಸಿಲ್ಲ. ನಾನು ರಾಣಾನ ಸೇವೆಯಿಂದ ನಿವೃತ್ತಿಹೊಂದಿದ್ದರೂ, ನಗದೇಶದ ರಾಷ್ಟ್ರಸೇವೆಯಿಂದ ನಿವೃತ್ತಿ ಹೊಂದಿಲ್ಲ ಹಾಗೆ ನಿವೃತ್ತಿಹೊಂದುವದು ಸಾಧ್ಯವೂ ಇಲ್ಲ. ಕುಮಾರ, ನಾನು ವೇಷಾಂತರದಿಂದಲಾದರೂ ಕಾದಿ, ರಾಷ್ಟ್ರಸೇವೆಯನ್ನು ಸಾಧಿಸಿಯೇ ತೀರುವೆನು. ಪ್ರಸಂಗವೊದಗಿದಾಗ ರಾಷ್ಟ್ರಸೇವೆಯ ಕಾರ್ಯವನ್ನು ಸಾಧಿಸಬೇಕೆಂಬ ಉದ್ದೇಶದಿಂದಲೇ ನಾನು ಈ ರಾಜಧಾನಿಯನ್ನು ತ್ಯಜಿಸಲಿಲ್ಲ."

"ಕಾಕಾಸಾಹೇಬ!" ಮಯೂರಧ್ವಜನ ಮಾತುಗಳಿಂದ ವಿಸ್ಮಯಚಕಿತನಾದ ರಣಮಲ್ಲನು:—"ನಿಮ್ಮ ಮಾತುಗಳು ಅಯಥಾರ್ಥವಾದವುಗಳೆಂದು ನಾನು ಅನ್ನಲಾರೆನು; ಆದರೆ ರಾಣಾ ರಾಯಸಿಂಹನು ನಿಮ್ಮ ವಿಷಯವಾಗಿ ಎಷ್ಟು ಅನ್ಯಾಯ ಮಾಡಿರುವನೆಂಬದನ್ನು ನೆನಸಿದರೆ, ನಿಮ್ಮ ಹೃದಯದಲ್ಲಿ ಸಂತಾಪವು ಹುಟ್ಟದೆ ಇರಲಾರದು. ಈ ಸಮಯದಲ್ಲಿ ರಾಣಾನಿಗೆ ಪ್ರಾಯಶ್ಚಿತ್ತ ವಿಧಿಸಲಿಕ್ಕೇ ಬೇಕು. ಮುಂದೆ ಪ್ರಸಂಗವನ್ನು ಸಾಧಿಸಿ ರಾಷ್ಟ್ರದ ಹಿತ ಮಾಡಲಿಕ್ಕೆ ಬಂದೇ ಬರುವದು."

"ರಣಮಲ್ಲ, ನಿನ್ನ ಅಭಿಪ್ರಾಯವು ಸರಿಯಾದದ್ದಲ್ಲ. ಒಂದು ಕುಟುಂಬದಲ್ಲಿ ತಂದೆ-ಮಕ್ಕಳು, ಅಣ್ಣ-ತಮ್ಮಂದಿರು ಇವರು ಪರಸ್ಪರರಲ್ಲಿ ಕಲಹ ಮಾಡುತ್ತಿದ್ದರೂ, ಕುಟುಂಬದ ಮೇಲೆಯೇ ಗಂಡಾಂತರವೊದಗಿದಾಗ ಎಲ್ಲರೂ ಒಂದಾಗುವರು. ದೇಶದ ವಿಷಯಕ್ಕಾದರೂ ಇವೇ ಬಗೆಯ ನಿಯಮವು ಹತ್ತುವದು. ರಾಣಾ ವಿಲಾಸವಿಜಯನು ಪರಕೀಯನು. ಅವನಿಗೆ ಸಹಾಯ ಮಾಡಿ ರಾಯಸಿಂಹರಿಗೆ ಪ್ರಾಯಶ್ಚಿತ್ತ ವಿಧಿಸಹೋದರೆ, ಮುಂದೆ ಅವನೇ ನಗದೇಶವನ್ನು ಪಾರತಂತ್ರ್ಯದಲ್ಲಿ ಕೆಡಹುವನು. ಒಮ್ಮೆ ದಾಸ್ಯಪಂಕದಲ್ಲಿ ಸಿಲುಕಿದ ಮೇಲೆ, ಆ ರಾಷ್ಟ್ರವು ಮತ್ತೆ ಸ್ವಾತಂತ್ರ್ಯವನ್ನನುಭವಿಸಬೇಕಾದರೆ, ಬಹಳ ಪರಿಶ್ರಮ ಪಡಬೇಕಾಗುವದು. ಯುಧಿಷ್ಠಿರ ಸಮ್ರಾಟನು ವನವಾಸದಲ್ಲಿದ್ದಾಗ ಕೌರವೇಶ್ವರ ದುರ್ಯೋಧನನು ಘೋಷಯಾತ್ರೆಯ ನೆವದಿಂದ ಕಾಮ್ಯಕವನಕ್ಕೆ ಹೋಗಿದ್ದನು. ಆಗ ಅವನು ಗಂಧರ್ವರಾಜನ ಬಂಧನೆಯಲ್ಲಿ ಸಿಲುಕಲು, ಅವನನ್ನು ಬಿಡಿಸುವ ಬಗ್ಗೆ ಯುಧಿಷ್ಠಿರನು ತನ್ನ ಅಭಿಪ್ರಾಯವನ್ನು ಒಳ್ಳೆಯ

ಮಾರ್ಮಿಕವಾಗಿ ವ್ಯಕ್ತಪಡಿಸಿರುವನು. ಅದರಂತೆ ನಡೆದರೆ ಬಹಳ ಮಾಡಿ ಯಾವ ರಾಷ್ಟ್ರವೂ ಪಾರತಂತ್ರ್ಯದುಃಖವನ್ನನುಭವಿಸಲಿಕ್ಕಿಲ್ಲ."

"ಕಾಕಾಸಾಹೇಬರೆ! ಯುಧಿಷ್ಠಿರನು ಆಗ ಭೀಮಾರ್ಜುನರಿಗೆ ಏನು ಉಪದೇಶ ಮಾಡಿದನು?" ರಣಮಲ್ಲನು ಉತ್ಕಂಠಿತನಾಗಿ ಕೇಳಿದನು.

"ರಣಮಲ್ಲ, ಧರ್ಮರಾಜನು ಭೀಮಾರ್ಜುನರಿಗೆ ಹೇಳಿದ್ದೇನಂದರೆ:— 'ಪರೈಃ ಪರಿಭವೇ ಪ್ರಾಪ್ತೇ ವಯಂ ಪಂಚೋತ್ತರಂ ಶತಂ | ಪರಸ್ಪರ ವಿರೋಧೇಷು ವಯಂ ಪಂಚೈವ ತೇ ಶತಂ' ಹೀಗೆ ಉಪದೇಶಿಸಿ, ದುರ್ಯೋಧನನನ್ನು ಶತ್ರುಗಳ ಕೈಯಿಂದ ಪಾರಮಾಡಿದನು. ರಾಣಾ ವಿಲಾಸವಿಜಯನ ದಾಳಿಯು ನಗದೇಶದ ಹಾಗು ಶೀಲವತಿಯ ಪ್ರಾಪ್ತಿಗಾಗಿಯೇ ಇರುವದು. ಈ ಸಮಯದಲ್ಲಿ ಕ್ಷುದ್ರವಾದ ದ್ವೇಷಾಸೂಯೆಗಳನ್ನು ಮುಂದೆ ಮಾಡುವದು ವಿಹಿತವಲ್ಲ. ರಾಯಸಿಂಹನು ನಮ್ಮ ವೈರಿಯೆಂದು ಒಂದು ವೇಳೆ ಕಲ್ಪಿಸಿದರೂ, ನಗದೇಶವು ನಮ್ಮ ವೈರಿಯಿರುವದಿಲ್ಲ. ರಾಜಕುಮಾರಿ ಶೀಲವತಿಯನ್ನೂ, ಅವಳೊಡನೆ ನಗದೇಶವನ್ನೂ ಪಾದಾಕ್ರಾಂತ ಮಾಡಿಕೊಳ್ಳಬೇಕೆಂದು ವಿಲಾಸವಿಜಯನ ಸಾಹಸವುಂಟು. ಈಗ ನಾವು ಯುಧಿಷ್ಠಿರನ ಉಪದೇಶದಂತೆ 'ವಯಂ ಪಂಚೋತ್ತರಂ ಶತಂ' ಎಂದು ಅನ್ನದಿದ್ದರೆ, ಗತ್ಯಂತರವಿಲ್ಲ. ಧರ್ಮರಾಜನ ಈ ಸೂತ್ರವು ರಾಷ್ಟ್ರಧರ್ಮದ ಗುಟ್ಟಾಗಿದೆ. ನಾವು ಈ ಸೂತ್ರದಂತೆ ನಡೆದರೆ ಅಭ್ಯುದಯ ಹೊಂದುವೆವು."

ಮಯೂರಧ್ವಜನ ಮಾತುಗಳು ರಣಮಲ್ಲನ ಮನಸ್ಸಿನ ಮೇಲೆ ಬಹು ಚೆನ್ನಾಗಿ ಪರಿಣಮಿಸಿದವು. ಅವನಲ್ಲಿ ನವವಿಚಾರಗಳೂ ನವ್ಯಸ್ಫೂರ್ತಿಯೂ ಹುಟ್ಟಿದವು. ಕೂಡಲೆ ಅವನು ಆವೇಶಯುಕ್ತ ವಾಣಿಯಿಂದ:—"ಕಾಕಾ ಸಾಹೇಬರೇ, ನಿಮ್ಮೊಡನೆ ನಾನೂ ಸಂಗ್ರಾಮಕ್ಕೆ ಬರುವೆನು."

"ಮಗೂ, ನೀನು ರಾಣಾಜಿಯ ಆಜನ್ಮ ಶತ್ರುವಿರುವೆ. ನಿನ್ನ ತಂದೆಯ ಧ್ಯೇಯವನ್ನು ಪೂರ್ಣ ಮಾಡಲಿಕ್ಕೆ ಬದ್ಧಕಂಕಣನಾಗಿರುವೆ. ಹೀಗಿದ್ದ ಮೇಲೆ, ನಿನ್ನಿಂದ ನಗದೇಶದ ಹಿತಕ್ಕಾಗಿ ಕಾದುವ ಕಾರ್ಯವು ನೆರವೇರಬಹುದೆ?"

"ಕಾಕಾಸಾಹೇಬರೆ, ನಾನು ರಾಜಸಿಂಹನ ಶತ್ರುವು ನಿಜವು; ಆದರೆ ಈಗ ನಗದೇಶದ ಶತ್ರುವು ನಾನಿರುವುದಿಲ್ಲ. ನಗದೇಶ ರಾಷ್ಟ್ರದ ಪ್ರಜೆಯಾದ ನಾನು, ಅದರ ಕಲ್ಯಾಣಕ್ಕಾಗಿಯೂ ಅದರ ಮೇಲೆ ಬಂದ ಗಂಡಾಂತರದ ನಿವಾರಣೆಗಾಗಿಯೂ ಯತ್ನಮಾಡದಿದ್ದರೆ, ರಾಷ್ಟ್ರದ್ರೋಹಿಯೆನಿಸಿಕೊಳ್ಳಬಹುದು. ನಿಮ್ಮ ಉಪದೇಶದಿಂದ ನನ್ನ ಮನೋಭೂಮಿಕೆಯು ಸ್ಥಿತ್ಯಂತರ ಹೊಂದಿದೆ. ಮೊದಲು ರಾಷ್ಟ್ರದ ಮೇಲಿನ ಗಂಡಾಂತರವನ್ನು ನಿವಾರಣೆ ಮಾಡ

ಲಿಕ್ಕೆ ಬೇಕು. ರಾಷ್ಟ್ರವು ಕಂಟಕಹೀನವಾದ ಮೇಲೆ, ರಾಣಾನ ಮೇಲಿನ ಸೇಡು ತೀರಿಸಿಕೊಳ್ಳಲಿಕ್ಕೆ ಬರುವದಿಲ್ಲವೆಂಬಂತಿಲ್ಲ."

ರಣಮಲ್ಲನ ಮಾತುಗಳನ್ನು ಕೇಳಿ ಮಯೂರಧ್ವಜನಿಗೆ ಮನಸ್ವೀಯಾದ ಆನಂದವಾಯಿತು. ಆಗ ಅವನು ಸಂಭ್ರಮದಿಂದ:—"ವೀರಪುತ್ರ ರಣಮಲ್ಲ! ಕೊನೆಗೆ ನೀನು ನಿಜವಾದ ರಜಪುತ ಧರ್ಮದ ಶೀಲವನ್ನು ಕಾಯ್ದುಕೊಂಡೆ."

"ಕಾಕಾಸಾಹೇಬರೇ, ಯುದ್ಧದ ಪರಿಣಾಮವೇನಾಗುವದು?"

"ಪರಿಣಾಮವು ಕಣ್ಣಿಗೆ ಕಂಡದ್ದೇ ಇದೆ ಧರ್ಮಕ್ಕೆ ವಿಜಯವು ಕಟ್ಟಿಟ್ಟದ್ದೇ. ವಿಲಾಸವಿಜಯನು ಅತ್ಯಂತ ವಿಲಾಸಿಯಿದ್ದು, ಅನೇಕ ಕುಲವಧುಗಳ ಶೀಲವನ್ನು ಸೂರೆಗೈದಿರುವನು. ಆಸೂರಿ ವಿಷಯಲಾಲಸೆ ಹಾಗು ರಾಕ್ಷಸೀ ರಾಜ್ಯತೃಷ್ಣೆ ಇವುಗಳಿಂದ ಅವನ ಸತ್ವವು ನಾಶವಾಗುವದು."

"ಕಾಕಾಸಾಹೇಬರೇ, ಪಿತೃದತ್ತವಾದ ನನ್ನ ವಿಜಯೀ ಖಡ್ಗವೆಲ್ಲಿ? ನನ್ನ ಗೆಲವಿನ ಕತ್ತಿಯನ್ನು ಕಾಣದೆ ಎಂಟು-ಹತ್ತು ದಿನಗಳಾದವಲ್ಲ!"

"ರಣಮಲ್ಲ, ನೀನು ರಾಣಾನ ಸೆರೆಯಲ್ಲಿ ಸಿಕ್ಕ ದಿನವೇ ನಿನ್ನ ಗೆಲವಿನ ಕತ್ತಿಯನ್ನು ನನ್ನ ಸ್ವಾಧೀನಕ್ಕೆ ತೆಗೆದುಕೊಂಡಿರುವೆನು" ಎಂದು ನುಡಿದು, ಮಯೂರಧ್ವಜನು ಗೂಟಕ್ಕೆ ತೂಗಹಾಕಿದ್ದ ರಣಮಲ್ಲನ ಗೆಲವಿನ ಕತ್ತಿಯನ್ನೂ ಢಾಲನ್ನೂ ಅವನ ಕೈಯಲ್ಲಿ ಕೊಟ್ಟನು.

ರಣಮಲ್ಲನು ಖಡ್ಗವನ್ನು ಬಲಗೈಯಲ್ಲಿ ತೆಗೆದುಕೊಂಡು, ವಾತಾವರಣದಲ್ಲೊಮ್ಮೆ ಗರಗರನೆ ತಿರುವಿದನು.

"ರಣಮಲ್ಲ!" ಮಯೂರಧ್ವಜನು ಉತ್ಸಾಹದಿಂದ:-"ಖಡ್ಗನೈಪುಣ್ಯದಲ್ಲಿ ನೀನು ನಿನ್ನ ತಂದೆಗಿಂತಲೂ ಮಿಗಿಲಾದವನಿರುವೆ."

"ಕಾಕಾಸಾಹೇಬರೆ!" ರಣಮಲ್ಲನು ಆನಂದ-ಆವೇಶಯುಕ್ತವಾಣಿಯಿಂದ:—"ನಿಮ್ಮ ಆಶೀರ್ವಾದದ ಫಲವಿದು!"

ರಣಮಲ್ಲನು ಗೆಲುವಿನ ಕತ್ತಿಯನ್ನು ಒರೆಗಾಣಿಸಿದನು. ಅನಂತರದಲ್ಲಿ ಇಬ್ಬರೂ ವೀರರು ಯುದ್ಧದ ಸಮಾಚಾರ ತಿಳಿದುಕೊಳ್ಳಲಿಕ್ಕೆ ರಾಜಧಾನಿಯಲ್ಲಿ ಪ್ರವೇಶಿಸಿದರು.

———

# ಧರ್ಮಕ್ಕೆ ಜಯ.

ನಗದೇಶದ ಸೀಮಾಂತರದಲ್ಲಿ ರಾಣಾ ವಿಲಾಸವಿಜಯನು ಅಮೋಘವಾದ ಸೈನ್ಯದೊಡನೆ ಬೀಡು ಬಿಟ್ಟಿದ್ದನು. ಅವನು ಯುದ್ಧದ ನಿಮಂತ್ರಣವನ್ನು ರಾಣಾ ರಾಯಸಿಂಹನ ಕಡೆಗೆ ಕಳುಹಿಸಿದ್ದನು. ರಾಯಸಿಂಹನಾದರೂ ಅದಕ್ಕೆ ಸರಿಯಾಗಿ ಉತ್ತರ ಕಳುಹಿಸಿದ್ದನು.

ಪ್ರಾತಃಕಾಲವಾದೊಡನೆಯೇ ನಗದೇಶದ ಸೈನ್ಯವು ವಿಲಾಸವಿಜಯನ ಸೈನ್ಯಾಭಿಮುಖವಾಗಿ ಹೊರಟಿತು. ಎರಡೂ ಸೈನ್ಯಗಳಲ್ಲಿ ಕಾಳಗದ ಕೊಂಬು ಊದಲ್ಪಟ್ಟಿತು.

ವಿಲಾಸವಿಜಯನು ತನ್ನ ಕಾಮವಾಸನೆಯ ಪೂರ್ತತೆಗಾಗಿ ಸಹಸ್ರಾವಧಿ ವೀರರ ರಕ್ತವನ್ನು ಕಾಲುವೆಯಾಗಿ ಹರಿಸಲುದ್ಯುಕ್ತನಾಗಿದ್ದನು. ಅವನು ತನ್ನ ಭಾವೀ ವಿಜಯ ಮಂದಿರವನ್ನು ಅಧರ್ಮದ ತಳಹದಿಯ ಮೇಲೆ ಕಟ್ಟ ತೊಡಗಿದ್ದನು; ಆದರೆ ರಾಣಾ ರಾಯಸಿಂಹನಿಗೆ ಧರ್ಮವು ಬೆಂಬಲವಿತ್ತು. ಅವನು ಒಬ್ಬ ಕುಲಯುವತಿಯ-ತನ್ನ ಕುಮಾರಿಯಾದ ಶೀಲವತಿಯ-ಶೀಲ ರಕ್ಷಣೆಗಾಗಿ ಸಾಹಸ ನಡೆಯಿಸಿದ್ದನು. ಅವನಿಂದ ಎಷ್ಟೋ ಅನ್ಯಾಯದ ಕೃತಿಗಳು ಜರುಗಿದ್ದರೂ, ಈ ಪ್ರಸಂಗದಲ್ಲಿ ಮಾತ್ರ ಅವನು ಧರ್ಮರಕ್ಷಣೆಗಾಗಿಯೆ ಕಾದಲನುವಾಗಿದ್ದನು.

ರಾಯಸಿಂಹನ ಸೈನ್ಯದಲ್ಲಿ ಒಂದು ನೂನತೆಯಿತ್ತು. ಆ ನ್ಯೂನತೆಯೆಂದರೆ, ಸೇನಾಪತಿ ಮಯೂರಧ್ವಜನದು. ಅಂದಿನ ಯುದ್ಧದಲ್ಲಿ ಮಯೂರಧ್ವಜನಿದ್ದರೆ ವಿಜಯಶ್ರೀಯು ವಶವಾಗುವ ಬಗ್ಗೆ ಸಂದೇಹವುಳಿಯುತ್ತಿದ್ದಿಲ್ಲ ಸೈನಿಕರಿಗೆ ಯುದ್ಧಾವೇಶವು ಶತಗುಣಿತವಾಗುತ್ತಿತ್ತು. ಮಯೂರಧ್ವಜನನ್ನು ಕರೆಯಿಸಬೇಕೆಂಬ ವಿಚಾರವು ರಾಣಾನಲ್ಲಿ ಹುಟ್ಟಿತ್ತು; ಆದರೆ ದುರಭಿಮಾನವು ಆ ವಿಚಾರವನ್ನು ಫಲದ್ರೂಪಗೊಳಿಸಲಿಲ್ಲ. ಆದ್ದರಿಂದ ಅವನು ಜಸವಂತಸಿಂಹನಿಗೆ ಸೈನ್ಯಾಧಿಪತ್ಯ ಕೊಟ್ಟಿದ್ದನು.

ಯುದ್ಧಾರಂಭದ ವೇಳೆಯಲ್ಲಿ ರಾಣಾನು ಎರಡು ಸಂಗತಿಗಳ ವಿಷಯವಾಗಿ ವಿಮನಸ್ಕನಾಗಿದ್ದನು. ಮೊದಲನೆಯ ಸಂಗತಿಯೇನಂದರೆ, ರಣಮಲ್ಲನು ಅಕಸ್ಮಾತ್ತಾಗಿ ಕಾರಾಗೃಹದಲ್ಲಿಲ್ಲದಂತಾದದ್ದು. ಇನ್ನೊಂದು ಸಂಗತಿಯೇನಂದರೆ, ಅದೇ ಸಂಧಿಯಲ್ಲಿ ರಾಜನಂದಿನಿ ಶೀಲವತಿಯು ಅರಮನೆಯಿಂದ ಹೊರಟು ಹೋದದ್ದು. ಶೀಲವತಿಯು ಇಂತಹ ಸ್ಥಳದಲ್ಲಿರುವಳೆಂಬುದು ಕೂಡ ಇದುವರೆಗೂ ತಿಳಿದಿದ್ದಿಲ್ಲ.

ಯುದ್ಧಾರಂಭವಾಯಿತು. ಮಹೋದಧಿಯ ಭೀಷಣವಾದ ಮಹಾ ತರಂಗಗಳಂತೆ ವಿಲಾಸವಿಜಯನ ಸೈನ್ಯವು ರಾಯಸಿಂಹನ ಸೈನ್ಯದ ಮೇಲೆ ಬಿತ್ತು. ಆ ದಾಳಿಯಿಂದ ನಗದೇಶದ ಸೈನ್ಯವು ಹಿಂದೆ ಸರಿಯಹತ್ತಿತು.

"ಮುಂದೆ ಸಾಗಿರಿ, ಮುಂದೆ ಸಾಗಿರಿ! ಮರಣಕ್ಕಂಜಿ ಹೇಡಿಗಳಂತೆ ಹಿಂದೆ ಸರಿಯಬೇಡಿರಿ!" ಎಂದು ಗಂಭೀರವಾಗಿ ಗರ್ಜನೆ ಮಾಡುತ್ತ, ಕಣ್ಣಿಗೆ ಕರೀಪಟ್ಟಿಯನ್ನು ಕಟ್ಟಿದ್ದ ಇಬ್ಬರು ವೀರರು ಹಿಂದೆ ಸರಿಯತೊಡಗಿದ ಸೈನ್ಯ ವನ್ನು ಮುಂದೆ ಸಾಗಿಸತೊಡಗಿದರು. ಆಗ ಆ ವೀರರಲ್ಲೊಬ್ಬನು ಸೈನಿಕರಿಗೆ: "ನೀವು ಹಿಂದಿರುಗಿ ಓಡಿ ಹೋಗಿ ನಿಮ್ಮ ಹೆಂಡಂದಿರ ಸೆರಗಿನಿಂದ ಮುಖ ವನ್ನು ಮುಚ್ಚಿಕೊಂಡು ಕುಳಿತುಕೊಳ್ಳಬೇಕೆನ್ನುವಿರಾ! ನಿಮ್ಮಂತಹ ಪಲಾ ಯನ ಪಟುಗಳನ್ನು ಪ್ರಸವಿಸಿ, ನಿಮ್ಮ ತಾಯಿಯು ವ್ಯರ್ಥವಾಗಿ ದಣಿದಳು. ರಾಣಾ ರಾಯಸಿಂಹರು ಬೊಕ್ಕಸದಲ್ಲಿ ಹಣದ ವಿಪುಲತೆಯಾಗಿರುವದೆಂಬ ಉದ್ದೇಶದಿಂದ ನಿಮ್ಮಂತಹ ಉಂಡಾಡಿ ಸೈನಿಕರನ್ನು ಸಾಕಿದಂತೆ ತೋರುವದು. ಯಾಕಂದರೆ, ನಿಮ್ಮ ಪಕ್ಷವು ಸತ್ಪಕ್ಷವಿರುವದು. ನೀವು ಧರ್ಮಕ್ಕಾಗಿ ಕಾದ ತೊಡಗಿರುವಿರಿ. ಧರ್ಮವು ಬೆಂಬಲವಿರಲಾಗಿ ನೀವು ಪಲಾಯನಸೂಕ್ತ ಪಠಿ ಸುತ್ತಿರುವದನ್ನು ನೋಡಿದರೆ, ರಾಯಸಿಂಹರು ಕೇವಲ ವೇತನಭುಕ್ತರಾದ ನಿಮ್ಮನ್ನು ಸಾಕಿ, ದೊಡ್ಡ ತಪ್ಪು ಮಾಡಿರುವರೆಂದು ಹೇಳಬೇಕಾಗುವದು. ರಣವೀರ ಮಯೂರಧ್ವಜರ ಆಧಿಪತ್ಯದಲ್ಲಿ ಕೆಲಸ ಮಾಡಿದ ನೀವು, ಇಷ್ಟೇಕೆ ಹೀನಬಲರಾದಿರಿ! ನೀವು ಹೀಗೆ ಪಲಾಯನಸೂಕ್ತವನ್ನು ಪಠಿಸಿದರೆ, ರಾಜ ಕುಮಾರಿಯ ಶೀಲವೂ ನಗದೇಶದ ಇದುವರೆಗಿನ ಸುಖಸ್ವಾತಂತ್ರ್ಯವೈಭವ ಗಳೂ ಸೂರೆಮಾಡಲ್ಪಡುವದೆಂಬದನ್ನು ಲಕ್ಷ್ಯಕ್ಕೆ ತೆಗೆದುಕೊಂಡು ಕೆಲಸ ಮಾಡಿರಿ. ನಗದೇಶದ ಸ್ವಾತಂತ್ರ್ಯವು ನಿಮ್ಮ ಸತ್ವವನ್ನವಲಂಬಿಸಿರುವದು. ಇದ್ದರೆ ಕೀರ್ತಿ ಹೊಂದುವಿರಿ; ಸತ್ತರೆ ವೀರಸ್ವರ್ಗ ಪಡೆಯುವಿರಿ. ಮುಂದಕ್ಕೆ ಹೆಜ್ಜೆಯಿಡಿರಿ"

ಈ ಭಾಷಣದಿಂದ ನಗದೇಶದ ಸೈನಿಕರಲ್ಲಿ ರಣೋತ್ಸಾಹವು ಉತ್ಪನ್ನ ವಾಯಿತು. ಅವರು ಒಳ್ಳೆಯ ವೇಗದಿಂದ ವಿಲಾಸವಿಜಯನ ಸೈನಿಕರ ಮೇಲೆ ಬಿದ್ದರು. ತುಮುಲವಾದ ಸಂಗ್ರಾಮವು ನಡೆಯಿತು. ವೀರರ ಅಬ್ಬರವೂ ಗಾಯ ಹೊಂದಿದವರ ನರಳುವಿಕೆಯೂ, ರಣಭೂಮಿಯ ಭೀಷಣಸ್ವರೂಪವನ್ನು ಹೆಚ್ಚಿಸಿದ್ದವು. ವಾತಾವರಣದಲ್ಲಿ ರೌದ್ರರಸ-ಕರುಣಾರಸಗಳು ಸಮ್ಮಿಶ್ರವಾಗಿ ದ್ದವು. ವಿಲಾಸವಿಜಯನ ಸೈನ್ಯವು ನಗದೇಶದ ಸೈನ್ಯದ ಇಮ್ಮಡಿಯಾಗಿತ್ತು. ಆದರೂ ನಗದೇಶದ ಸೈನ್ಯವು ಅದಕ್ಕೆ ಹಿಂಜರಿಯದೆ ಏಳೆಂಟು ಗಳಿಗೆಯವರೆಗೆ

ಯುದ್ಧವನ್ನು ನಡೆಯಿಸಿತು. ಅನಂತರದಲ್ಲಿ ಮಾತ್ರ ಅದು ಹಿಂಜರಿಯುವ ಚಿಹ್ನವು ತೋರಲಾರಂಭಿಸಿತು. ಕೆಲಕೆಲವು ವೇಳೆಯಲ್ಲಿ ಪರಮೇಶ್ವರನು ಅಧರ್ಮಕ್ಕೆ ಸಹ ಜಯಕೊಡುತ್ತಿರುವದು ಅಂದು ಪ್ರತ್ಯಯಕ್ಕೆ ಬಂದಿತು. ಕಣ್ಣಿಗೆ ಕರೀಪಟ್ಟಿ ಕಟ್ಟಿದ್ದ ಇಬ್ಬರು ವೀರರು ನಗದೇಶದ ಸೈನ್ಯದಲ್ಲಿ ಸಂಚಾರ ಮಾಡಿ, ಸೈನಿಕರನ್ನು ಹುರುಪುಗೊಳಿಸುತ್ತಿದ್ದರು.

ಆ ಇಬ್ಬರ ಹೊರತು ಮತ್ತೊಬ್ಬ ವೀರನು ವೀರತನದಿಂದ ಕಾದತೊಡಗಿದ್ದನು. ಆ ವೀರನು ಬಿಳೀ ಕುದುರೆಯ ಮೇಲೆ ಕುಳಿತಿದ್ದನು. ಅವನ ಉಡುಪುಗಳು ಕೇಶರೀ ವರ್ಣದವಿದ್ದವು. ಅವನು ಹಸರು ಬಣ್ಣದ ಪಾದರಕ್ಷೆಗಳನ್ನು ಮೆಟ್ಟಿದ್ದನು. ಶಿರಸ್ತ್ರಾಣವು ನೀಲೀಬಣ್ಣದ್ದಿತ್ತು. ಈ ಸೈನಿಕನು ತೀರ ಹೊಸಬನಿದ್ದನು. ಇವನ ಪರಿಚಯವು ನಗದೇಶದ ಸೈನ್ಯದಲ್ಲಿ ಯಾರಿಗೂ ಇದ್ದಿಲ್ಲ. ರಾಯಸಿಂಹನ ಸೈನ್ಯವು ಹಿಂಜರಿಯ ತೊಡಗಿದೊಡನೆಯೆ ಅವನು ಅಗ್ರಗಾಮಿಯಾಗಿ, ಸೇನಾಧಿಪತ್ಯವನ್ನು ಸ್ವೀಕರಿಸಿ, ಶತ್ರುಸೈನ್ಯದ ಮೇಲೆ ಬಲವಾದ ದಾಳಿಮಾಡಿದನು.

ತನ್ನ ಸೈನ್ಯವು ಹಿಂಜರಿಯ ಹತ್ತಿದ ಕೂಡಲೆ ರಾಯಸಿಂಹನು ಮುಂದೆ ಬಿದ್ದು, ಸೈನ್ಯಕ್ಕೆ ಉತ್ಸಾಹ ಹುಟ್ಟುವಂತೆ ಯತ್ನಿಸತೊಡಗಿದನು ಕರೀ ಪಟ್ಟಿಯನ್ನು ಕಣ್ಣುಗಳಿಗೆ ಕಟ್ಟಿದ್ದ ಸೈನಿಕರಿಬ್ಬರೂ ಅವನ ಹಿಂದೆಯೇ ಇದ್ದರು. "ಮಹಾರಾಣಾಜಿಯವರು ರಣಭೂಮಿಗೆ ಬಂದಿರುವರು. ಎಲ್ಲರೂ ಅಂಜದೆ ಕಾದಿರಿ." ಎಂದು ಆ ವೀರರು ಸೈನಿಕರಿಗೆ ಹೇಳತೊಡಗಿದ್ದರು. ಕೇಶರೀ ಉಡುಪಿನ ಸೈನಿಕನೂ ಕರೀ ಪಟ್ಟಿಯವರಂತೆ ಸೈನಿಕರಿಗೆ ಉತ್ಸಾಹ ಕೊಡತೊಡಗಿದ್ದನು. ಈ ಸೈನಿಕನು ಯಾರಿರಬಹುದೆಂಬದು ನಗದೇಶದ ಸೈನಿಕರಿಗೆ ಅರಿಯದಾಗಿತ್ತು. ರಾಣಾನೂ ಅವನ ಸೇನಾಪತಿಯೂ ವಿಸ್ಮಯಗೊಂಡರು.

ನಗದೇಶದ ಸೈನಿಕರಲ್ಲಿ ನವೋತ್ಸಾಹವು ಹುಟ್ಟಿತು. ಅವರು "ನಗದೇಶಕ್ಕೆ ಜಯವಾಗಲಿ, ರಾಣಾ ರಾಯಸಿಂಹನಿಗೆ ಜಯವಾಗಲಿ!" ಎಂದು ವಿಜಯಧ್ವನಿಗೈದರು.

"ಸತ್ಯಕ್ಕೆ ಜಯವು, ಧರ್ಮಕ್ಕೆ ಜಯವು!" ಎಂದು ಕೇಶರೀ ಉಡುಪಿನ ವೀರನು ಜಯಘೋಷ ಮಾಡಿದನು. ರಾಯಸಿಂಹನ ದೃಷ್ಟಿಯು ಮತ್ತೆ ಆ ತರುಣ ವೀರನ ಮೇಲೆ ಬಿತ್ತು. ತೇಜಸ್ವಿಯಾದ ಅವನ ಮುಖವನ್ನು ನೋಡಿ ರಾಣಾನು ಆಶ್ಚರ್ಯಬಟ್ಟನು. ಆ ವೀರನ ಖಡ್ಗಚಾಪಲ್ಯವನ್ನೂ, ಶೌರ್ಯ-ಧೈರ್ಯ-ಸಾಹಸಗಳನ್ನೂ ಕಂಡು ಎಲ್ಲರೂ ದಂಗುಬಡೆದರು.

ಪ್ರತಿಯೊಬ್ಬರ ಮುಖದಿಂದ 'ಈ ತರುಣ ವೀರನು ಯಾರಿರಬಹುದು?' ಎಂದು ಕುತೂಹಲಯುಕ್ತವಾದ ಮಾತುಗಳು ಹೊರಡಹತ್ತಿದವು ಆ ವೀರನು ತನ್ನ ಕುದುರೆಯನ್ನು ರಾಣಾನ ಬಳಿಗೆ ಒಯ್ದು--"ಮಹಾರಾಜರೆ, ತಮ್ಮ ವೀರತ್ವದಿಂದ ಸಮರಭೂಮಿಯನ್ನು ಅಮರಭೂಮಿಯನ್ನಾಗಿ ಮಾಡಬೇಕು.

"ವೀರಕುಮಾರಾ! ನಿನ್ನ ಇಚ್ಛೆಯಂತೆಯೇ ನಡೆಯುವೆನು. ನೀನು ಸೈನಿಕರಿಗೆ ಪ್ರೋತ್ಸಾಹ ಕೊಡುತ್ತ ಮುಂದೆ ಸಾಗಿಸು." ಎಂದು ರಾಣಾನು ಹೇಳಿದನು

ನಗದೇಶದ ಸೈನಿಕರು ಪ್ರಮುಖ ವೀರರ ಉತ್ತೇಜನದಿಂದ ಉತ್ಸಾಹವುಳ್ಳವರಾಗಿ ಶತ್ರುಸೈನ್ಯದ ಮೇಲೆ ಬಿದ್ದು, ನಿಕರವಾದ ಕಾಳಗವನ್ನು ಪ್ರಾರಂಭಿಸಿದರು. ಕೇಸರೀ ಉಡುಪಿನ ತರುಣನೂ ಕರೀ ಪಟ್ಟೆಯ ವೀರರೂ ರಾಣಾನ ಹಿಂದೆಯೇ ಅವನ ಸಂರಕ್ಷಣ ಮಾಡುತ್ತ ಕಾದಲಾರಂಭಿಸಿದ್ದರು.

ಯುದ್ಧವು ಮುಂದೆ ಸ್ವಲ್ಪವೇಳೆ ನಡೆಯುವಷ್ಟರಲ್ಲಿ, ರಣಭೂಮಿಯು ರಕ್ತಾಭಿಷೇಕ ಮಾಡಿದಂತೆ ಕಾಣಹತ್ತಿತು ನೋಡಿದತ್ತೆಲ್ಲ ಹೆಣಗಳು ರಾಶಿರಾಶಿಯಾಗಿ ಬಿದ್ದವು ಶಸ್ತ್ರಗಳ ಖಣಖಣಾಟವೂ, ವೀರರ ಗರ್ಜನೆಯೂ, ಕುದುರೆಗಳ ಖುರಪುಟಧ್ವನಿಯೂ ಕಿವಿಗಳನ್ನು ಗಡಚಿಕ್ಕಿಸತೊಡಗಿದ್ದವು ನರಳುವ ಗಾಯಾಳುಗಳ ಕರುಣಾಲಾಪವು ಎದೆಯನ್ನು ಕರಗಿಸುತ್ತಲಿತ್ತು ಈ ಎಲ್ಲ ಘಟನೆಗಳಿಂದ ಆ ಭೂಮಿಯ ರೌದ್ರಸ್ವರೂಪವು ಯಥಾಸ್ಥಿತವಾಗಿ ವ್ಯಕ್ತವಾಗಹತ್ತಿತ್ತು.

ರಾಣಾ ರಾಯಸಿಂಹನು ಸೇನಾಧಿಪತ್ಯವನ್ನು ಸ್ವೀಕರಿಸಿದನು. ಕೂಡಲೆ ವಿಲಾಸವಿಜಯನೂ ತನ್ನ ಸೈನ್ಯದ ಆಧಿಪತ್ಯ ಹೊಂದಿ ಮುಂದೆ ಬಿದ್ದನು. ಇಬ್ಬರೂ ರಾಣಾರಲ್ಲಿ ದ್ವಂದ್ವಕ್ಕೆ ಪ್ರಾರಂಭವಾಯಿತು. ಈ ಧರ್ಮಾಧರ್ಮಗಳ ಕಾದಾಟದಲ್ಲಿ ಯಾವುದಕ್ಕೆ ಜಯವೊದಗುವದೆಂಬದು ಪರಿಣಾಮಾಂತ್ಯದಲ್ಲಿ ತಿಳಿಯಬೇಕಾಗಿತ್ತು. ರಾಣಾ ವಿಲಾಸವಿಜಯನು ಶಸ್ತ್ರಪಾಂಡಿತ್ಯದಲ್ಲಿ ಅದ್ವಿತೀಯನಿದ್ದನು. ರಾಣಾ ರಾಯಸಿಂಹನಾದರೂ ಆ ವಿದ್ಯೆಯಲ್ಲಿ ನ್ಯೂನತೆಯುಳ್ಳವನಿದ್ದಿಲ್ಲ ಪರಸ್ಪರರ ಖಡ್ಗಾಘಾತದಿಂದ ಕಿಡಿಗಳು ಹೊರಡಹತ್ತಿದ್ದವು. ಯುದ್ಧವು ಸುಮಾರು ಅರ್ಧಗಳಿಗೆ ನಡೆಯುವಷ್ಟರಲ್ಲಿ ವಿಲಾಸವಿಜಯನ ಖಡ್ಗದ ಹೊಡತದಿಂದ ರಾಯಸಿಂಹನು ಕುದುರೆಯಿಂದ ಕೆಳಗೆ ಬಿದ್ದನು. ವಿಲಾಸವಿಜಯನು ಗರ್ವಪೂರ್ಣ ದೃಷ್ಟಿಯಿಂದ ಅವನನ್ನು ನೋಡಿ, ಆಹ್ಲಾದ ಸೂಚಕ ಚೀತ್ಕಾರ ಮಾಡಿದನು!

ರಾಯಸಿಂಹನು ಗಾಯಹೊಂದಿ ಬಿದ್ದದ್ದನ್ನು ನೋಡಿ, ಕೇಸರಿ ಬಣ್ಣದ

ಉಡುಗೆ ಧರಿಸಿದ ತರುಣ ವೀರನ ಕಣ್ಣುಗಳು ಅಶ್ರುಪೂರ್ಣವಾದವು.

ಕಣ್ಣುಗಳಿಗೆ ಕರೀ ಪಟ್ಟಿಯನ್ನು ಕಟ್ಟಿದ್ದ ಇಬ್ಬರು ವೀರರಲ್ಲಿ ತರುಣ ವೀರನು ವಿದ್ಯುದ್ಗತಿಯಿಂದ ಮುಂದೆ ಬಂದು-'ಮುಂದೆ ಬಾ, ಯುದ್ಧಕ್ಕೆ ಸಿದ್ಧನಾಗು!' ಎಂದು ವಿಲಾಸವಿಜಯನನ್ನು ಕೂಗಿದನು

'ಶಾಬಾಸ! ವೀರಾಧಿವೀರರೇ, ಶಾಬಾಸ್!' ಕೇಸರೀ ವರ್ಣದ ಉಡುಪಿನ ತರುಣನ ಮುಖದಿಂದ ಉದ್ಗಾರ ಹೊರಟಿತು.

ಪರಕ್ಷಣದಲ್ಲಿ ವಿಲಾಸವಿಜಯನಿಗೂ ಕರೀಪಟ್ಟಿಯ ತರುಣನಿಗೂ ಕಾಳಗವು ಪ್ರಾರಂಭವಾಯಿತು ಖಡ್ಗಗಳ ಖಣಖಣಾಟದಿಂದ ಕಿವಿಗಳು ಗಡಚಿಕ್ಕಿದವು. ಯುದ್ಧದ ದೃಶ್ಯವು ಅಪೂರ್ವವಾದದ್ದಿತ್ತು. ಇಬ್ಬರೂ ಯೋಧರು. ಕೆಲವು ವೇಳೆ ಯುದ್ಧವು ನಡೆಯುವಷ್ಟರಲ್ಲಿ ಕರೀಪಟ್ಟಿಯ ತರುಣನು ವಿಲಾಸವಿಜಯನ ಸ್ಕಂಧಪ್ರದೇಶಕ್ಕೆ ಖಡ್ಗಾಘಾತ ಮಾಡಿತನು. ಕೂಡಲೆ ವಿಲಾಸವಿಜಯನು ಕುದುರೆಯ ಮೇಲಿಂದ ಕೆಳಗೆ ಬಿದ್ದನು.

'ಶಾಬಾಸ್! ಶಾಬಾಸ್!' ಕೇಸರೀ ವರ್ಣದ ಉಡಿಗೆಯ ತರುಣನ ಮುಖದಿಂದ ಧನ್ಯೋದ್ಗಾರ ಹೊರಟಿತು.

'ಹಾ, ತಡೆ!' ವಿಲಾಸವಿಜಯನ ಸೈನ್ಯ ಮಧ್ಯಭಾಗದಿಂದ ಗರ್ಜನೆಯು ಕೇಳಿಸಿತು. ಕೂಡಲೆ ಅಶ್ವಾರೋಹಿಯಾದ ಒಬ್ಬ ವೀರನು ರಭಸದಿಂದ ಬಂದು ಕರೀಪಟ್ಟಿಯ ತರುಣನಿಗೆ ಅಭಿಮುಖನಾಗಿ ನಿಂತನು. ಆ ಅಶ್ವಾರೋಹಿಯು ವಿಲಾಸವಿಜಯನ ಸೇನಾಪತಿಯಾಗಿದ್ದನು.

"ಮುಂದೆ ಬಾ! ಯುದ್ಧಕ್ಕೆ ಸಿದ್ಧನಾಗು!" ಎಂದು ಕರೀಪಟ್ಟಿಯ ತರುಣನು ಮಾತನಾಡುವಷ್ಟರಲ್ಲಿ ಸೇನಾಪತಿಯು ಅವನ ಮೇಲೆ ಖಡ್ಗಪ್ರಹಾರ ಮಾಡಿದನು. ಆ ಖಡ್ಗವು ಕರೀಪಟ್ಟಿಯ ತರುಣನಿಗೆ ಬಲವಾಗಿ ಬಡಿಯುವದಿತ್ತು; ಆದರೆ ಕೇಶರೀ ಉಡುಪಿನ ತರುಣನು ಶೀಘ್ರವಾಗಿ ಅಡ್ಡಬಂದು, ಆ ಪೆಟ್ಟನ್ನು ತನ್ನ ಮೇಲೆ ತೆಗೆದುಕೊಂಡನು. ಆ ಪೆಟ್ಟು ಅವನಿಗೆ ಬಲವಾಗಿ ಬಡೆದದ್ದರಿಂದ, ಚೀತ್ಕಾರ ಮಾಡುತ್ತ, ಅವನು ಕುದುರೆಯ ಮೇಲಿಂದ ಬಿದ್ದನು!

ಶತ್ರುಸೇನಾಪತಿಯ ಈ ಅನುಚಿತ ಕೃತಿಯಿಂದ ಕರೀಪಟ್ಟಿಯ ತರುಣನು ಕ್ರೋಧಸಂತಪ್ತನಾದನು. ಆಗ ಅವನು ಪ್ರತಿಸ್ಪರ್ಧಿಯನ್ನು ಕುರಿತು: "ಕುಲಾಂಗಾರಾ, ಧರ್ಮಯುದ್ಧದಲ್ಲಿ ಅಧರ್ಮಾಚರಣೆ ಮಾಡಿದೆಯಾ? ಯುದ್ಧಕ್ಕೆ ಸಿದ್ಧನಾಗುವದಕ್ಕಿಂತ ಪೂರ್ವದಲ್ಲಿಯೇ ಖಡ್ಗಾಘಾತ ಮಾಡಿದೆಯಲ್ಲವೆ? ನೀನು ರಜಪುತಕುಲಕಲಂಕನಿರುವೆ! ಹೇಡಿಯೆ, ಮುಂದೆ ಬಾ, ಧರ್ಮಯುದ್ಧ ಮಾಡು!"

ಶತ್ರುಸೇನಾಪತಿಯು ಹಾಗು ಕರೀಪಟ್ಟೆಯುವನ ನಡುವೆ ತುಮುಲವಾದ ಸಂಗ್ರಾಮವು ನಡೆಯಿತು.

ಗಾಯಹೊಂದಿ ಭೂಮಿಯ ಮೇಲೆ ಬಿದ್ದ ಕೇಶರೀ ಉಡುಪಿನ ತರುಣನು ನರಳುತ್ತಲೇ ಯುದ್ಧವನ್ನು ನೋಡಲಾರಂಭಿಸಿದ್ದನು. ಅವನ ದೃಷ್ಟಿಯಲ್ಲಿ ವಿಲಕ್ಷಣವಾದ ಔತ್ಸುಕ್ಯವಿತ್ತು.

ಸೇನಾಪತಿಯು ಹಾಗು ಕರೀಪಟ್ಟೆಯ ತರುಣನ ನಡುವೆ ನಡೆದ ಸಂಗ್ರಾಮವು ಒಳ್ಳೆಯ ನಿಕರವಾದದ್ದಿತ್ತು. ಸ್ವಲ್ಪ ವೇಳೆಯಲ್ಲಿ ಕರೀಪಟ್ಟೆಯ ತರುಣನು ಶತ್ರುಪಕ್ಷದ ಸೇನಾಪತಿಯನ್ನು ನೆಲಕ್ಕೆ ಕೆಡಹಿದನು.

ಕೂಡಲೆ ನಗದೇಶದ ಸೈನಿಕರು ಒಳ್ಳೆಯ ಆವೇಶಗೊಂಡು, ಪ್ರತಿಪಕ್ಷಿಗಳ ಮೇಲೆ ಬಿದ್ದರು. ಸುಮಾರು ಒಂದು ಗಳಿಗೆಯವರೆಗೆ ಕಾಳಗವು ನಡೆಯಿತು. ಅಷ್ಟರಲ್ಲಿ ಸೇನಾಪತಿಯ ಮರಣದ ವಾರ್ತೆಯು ಎಲ್ಲ ಕಡೆಯಲ್ಲೂ ಪಸರಿಸಿತು. ಕೂಡಲೆ ವಿಲಾಸವಿಜಯನ ಸೈನ್ಯವು ಓಡಲಾರಂಭಿಸಿತು. ನಗದೇಶದ ಸೈನಿಕರು ಅವರನ್ನು ಬೆನ್ನಟ್ಟುವ ಸಾಹಸದಲ್ಲಿದ್ದರು; ಆದರೆ ಕರೀಪಟ್ಟೆಯ ತರುಣನು ಅವರನ್ನು ತಡೆದು, ಓಡಿ ಹೋಗುವವರನ್ನು ಬೆನ್ನಟ್ಟಿ ಕೊಲ್ಲುವದು ಧರ್ಮಯುದ್ಧದ ಲಕ್ಷಣವಲ್ಲೆಂದು ಉಪದೇಶಿಸಿದನು. ಧರ್ಮಕ್ಕೆ ವಿಜಯವಾಯಿತು! ಪಾಪವೃತ್ತಿಯಿಂದ ಬಂದ ವಿಲಾಸವಿಜಯನು ಮೃತ್ಯುಮುಖಕ್ಕೆ ಬಿದ್ದನು! ಅವನ ಸೈನ್ಯವು ದಿಕ್ಕುಪಾಲಾಗಿ ಓಡಿಹೋಯಿತು! ಧರ್ಮಕ್ಕೆ ಜಯ ದೊರೆಯಿತು!

ನಗದೇಶದ ಸೈನಿಕರು "ಧರ್ಮಕೀ ಜಯ! ನಗದೇಶಕೀ ಜಯ!!" ಎಂದು ಜಯಘೋಷ ಮಾಡುತ್ತ, ಒಳ್ಳೆಯ ಅಟ್ಟಹಾಸದಿಂದ ಶಿಬಿರದ ಕಡೆಗೆ ಹೊರಟರು.

---

## ದಿವ್ಯಪ್ರೇಮಕೀ ಜಯ!

ನಗದೇಶಕ್ಕೆ ಗೆಲವು ದೊರೆಯಿತು; ಆದರೆ ಆ ಗೆಲವಿನಲ್ಲಿ ಕಲಂಕವಿತ್ತು. ರಾಣಾ ರಾಯಸಿಂಹನ ಬಲಿದಾನದಿಂದ ವಿಜಯಲಾಭವಾಗಿತ್ತು. ಅದಕ್ಕಾಗಿ ನಗದೇಶದ ಸೈನಿಕರ ವಿಜಯಾನಂದವು ದುಃಖಸಮ್ಮಿಶ್ರಿತವಾಗಿತ್ತು.

ಕರೀಪಟ್ಟೆಯ ತರುಣ ವೀರನು ತನ್ನ ಸಂಗಡಿಗನಾದ ಇನ್ನೊಬ್ಬ ಕರೀಪಟ್ಟೆಯ ವೃದ್ಧವೀರನ ಬಳಿಗೆ ಹೋಗುವದಕ್ಕಾಗಿ ರಣಭೂಮಿಯಿಂದ ತೆರಳಿದನು. ಕೂಡಲೆ:-"ನಿಲ್ಲಿರಿ, ಹಾಗೆಯೆ ಮುಂದೆ ಸಾಗಬೇಡಿರಿ. ಇಲ್ಲಿಗೆ ಬಂದು,

ಎರಡು ಮಾತುಗಳನ್ನಾಡಿ ಹೋಗಿರಿ!" ಎಂದು ಕ್ಷೀಣ ಸ್ವರದಿಂದ ಆಡಿದ್ದು ಅವನಿಗೆ ಕೇಳಿಸಿತು.

ಕರೀಪಟ್ಟಿಯ ತರುಣನು ಆ ಸ್ವರವು ಕೇಳಬರುತ್ತಿರುವ ನಿಟ್ಟಿಗೆ ಹೊರಳಿದನು. ಅಲ್ಲಿ ಕೇಶರೀ ಉಡುಪಿನ ತರುಣನು ನೆಲದ ಮೇಲೆ ಬಿದ್ದು ನರಳತೊಡಗಿದ್ದನು. ಕರೀಪಟ್ಟಿಯ ತರುಣನು ಅಲ್ಲಿಗೆ ಕುದುರೆಯನ್ನು ಸಾಗಿಸಿದನು. ಅವನು ಗಾಯಹೊಂದಿದ್ದ ಆ ತರುಣನ ಬಳಿಗೆ ಬಂದು, ಕುದುರೆಯಿಂದಿಳಿದನು. ಅವನು ಆ ತರುಣನ ಗಾಯಗಳನ್ನು ದಿಟ್ಟಿಸಿ ನೋಡಿ ಉಸಿರ್ಗರೆದನು.

"ಬಳಿಯಲ್ಲಿ ಬನ್ನಿರಿ, ಮೃತ್ಯುಪಥವನ್ನಾಶ್ರಯಿಸಬೇಕೆನ್ನುವ ನನ್ನ ಸಂಗಡ ಎರಡು ಮಾತನ್ನಾಡಿರಿ."

ತರುಣ ಸೈನಿಕನು ಅವನ ಬಳಿಗೆ ಹೋಗಿ, ತಲೆಯ ಮೇಲೆ ಮಮತೆಯಿಂದ ಕೈಯಾಡಿಸಿ:-"ವೀರಾ! ವೀರಸ್ವರ್ಗವನ್ನು ವಶಪಡಿಸಿಕೊಳ್ಳುವೆಯಾ?"

"ಸಂದೇಹವಿಲ್ಲ." ಎಂದು ಗಾಯಹೊಂದಿದ ವೀರನು ನುಡಿದು:— "ನಾನು ನಿಮ್ಮನ್ನು ಗುರುತಿಸಿದ್ದೇನೆ ನೀವು ರಣವೀರ ರಣಮಲ್ಲರಲ್ಲವೆ? ಇನ್ನೊಬ್ಬ ಕರೀಪಟ್ಟಿಯ ವೀರರು ಸೇನಾಪತಿ ಮಯೂರಧ್ವಜರಲ್ಲವೆ?"

ರಣಮಲ್ಲನು ಗಾಯಾಳುವಾದ ವೀರನ ಮಸ್ತಕದ ಮೇಲಿನ ಕೈಯನ್ನು ಹಿಂದಕ್ಕೆ ತೆಗೆದುಕೊಂಡನು.

"ಯಾಕೆ? ನಿಮ್ಮನ್ನು ಗುರುತಿಸಿದ ಮಾತ್ರಕ್ಕೆ ಇಷ್ಟೇಕೆ ಬೆದರುವಿರಿ? ನನ್ನ ಮಸ್ತಕದ ಮೇಲೆ ಕೈಯಿರಿಸಿರಿ. ಹೃದಯದಲ್ಲಿ ಸಂತಾಪಾಗ್ನಿಯು ಧಗಧಗಿಸುತ್ತಲಿದ್ದರೂ ತಲೆಯ ಮೇಲಿರಿಸಿದ ತಮ್ಮ ಹಸ್ತದಿಂದ ಅದು ಶಾಂತವಾಗುವದು."

ರಣಮಲ್ಲನು ಆ ವೀರನ ಮಸ್ತಕದ ಮೇಲೆ ಕೈಯಿರಿಸಿ, ಅನಿಮಿಷ ನೇತ್ರಗಳಿಂದ ಅವನನ್ನು ನೋಡತೊಡಗಿದನು.

ಗಾಯಹೊಂದಿದ ವೀರನೂ ಅನಿಮಿಷ ನಯನದಿಂದ ರಣಮಲ್ಲನ ಮುಖವನ್ನು ನಿರೀಕ್ಷಿಸತೊಡಗಿದ್ದನು. ಪರಸ್ಪರರ ದೃಷ್ಟಿಗಳು ಮಿಲನ ಹೊಂದಿದ್ದವು. 'ಗಾಯಹೊಂದಿದ ಈ ವೀರನು ಯಾರಾಗಿರಬಹುದು? ಇವನ ನೇತ್ರಗಳ ಭಾಷೆಯು ಹಿಂದೆಯೊಮ್ಮೆ ನನ್ನ ಅನುಭವದಲ್ಲಿ ಬಂದಂತಾಗಿದೆ. ಧ್ವನಿಯ ಗುರುತು ಹತ್ತಿದಂತಾಗುವದು' ಎಂದು ರಣಮಲ್ಲನು ಬಹುಪರಿಯಾಗಿ ಯೋಚಿಸಿದನು; ಆದರೆ ಅವನು ಯಾರೆಂಬದು ಸ್ಮರಣೆಗೆ ಬರಲೊಲ್ಲದು. ಆ ವೀರನ ನೇತ್ರಭಾಷೆಯಲ್ಲಿ ಗುಪ್ತವಾದ ಅನುಕಂಪನೆಯೂ ಕಲ್ಪನಾತೀತವಾದ ಸಹಾನುಭೂತಿಯೂ ಇದ್ದವು.

ರಣಮಲ್ಲನು ಇದುವರೆಗೂ ಗಾಯ ಹೊಂದಿದ ತರುಣನ ತಲೆಯ ಮೇಲೆ ಕೈಯಿಟ್ಟಿದ್ದನು ಆಗ ಗಾಯ ಹೊಂದಿದ ತರುಣನು ಅವನ ಕೈಯನ್ನು ಹಿಡಿದು-''ಇನ್ನು ಮೇಲೆ ಸುಖದಿಂದ ಪ್ರಾಣ ಬಿಡುವೆನು ಒಮ್ಮೆ ಈ ಹಸ್ತದ ಸ್ಪರ್ಶವಾಯಿತು. ಜೀವನವು ಕೃತಾರ್ಥಹೊಂದಿತು. ನೀವು ರಾಣಾಜಿಯವರ ಮೃತ್ಯುವಿನ ಸೇಡು ತೀರಿಸಿಕೊಂಡಿರುವಿರಿ. ವಿಷಯಪಿಪಾಸುವಾದ ವಿಲಾಸ ವಿಜಯನನ್ನು ನಾಶಗೊಳಿಸಿರುವಿರಿ. ನಿಮ್ಮಂತಹ ಧರ್ಮಶೀಲ ಕ್ಷತ್ರಿಯರ ಹಸ್ತಸ್ಪರ್ಶವೆಂದರೆ, ಮೃತ್ಯುಮುಖದಲ್ಲಿದ್ದ ನನ್ನ ಮುಖದಲ್ಲಿ ಗಂಗಾಜಲವು ಬಿದ್ದಂತೆಯೆ ಸರಿ!''

ಆ ವೀರನ ಹಸ್ತಸ್ಪರ್ಶದಿಂದ ರಣಮಲ್ಲನ ಶರೀರದಲ್ಲಿ ವಿದ್ಯುತ್ತು ಪ್ರವೇಶ ವಾದಂತಾಯಿತು! 'ಈ ವಿರನ ಹಸ್ತದಲ್ಲಿ ಇಷ್ಟೇಕೆ ಮಾರ್ದವವಿರುವದು?' ಎಂಬ ವಿಚಾರವು ಅವನ ಮನದಲ್ಲಿ ಬಂದಿತು. ಅವನ ಭಾಷಣದಿಂದ ರಣ ಮಲ್ಲನ ಅಂತಃಕರಣವು ದ್ರವಿಸಿತು.

'ವೀರವರಾ!' ರಣಮಲ್ಲನು ಗದ್ಗದವಾಣಿಯಿಂದ-''ನೀನು ಅಡ್ಡ ಬರದಿದ್ದರೆ, ವಿಲಾಸವಿಜಯನ ಸೇನಾಪತಿಯ ಖಡ್ಗವು ನನ್ನ ಅಸುವನ್ನು ಹೀರದಿರುತ್ತಿರಲಿಲ್ಲ; ಆದರೆ ನನ್ನನ್ನುಳಿಸುವದಕ್ಕಾಗಿ ನೀನು ನಿನ್ನ ಆತ್ಮಬಲಿದಾನ ಮಾಡಿದೆ. ವೀರನೆ, ನಿನ್ನ ಮೃತ್ಯುವಿಗೆ ನಾನೇ ಕಾರಣನಾದೆನು. ಹಾಯ! ಹಾಯ!''

''ನಿಮ್ಮ ರಕ್ಷಣೆ ಮಾಡುವದು ನನ್ನ ಧರ್ಮವಾಗಿತ್ತು. ನಮ್ಮ ರಾಣಾಜಿಯವರ ರಕ್ಷಣೆ ಮಾಡುವವರನ್ನು ಕಾಯುವದು ಅವರ ಪ್ರಜೆಗಳ ಧರ್ಮವಾಗಿದೆ. ಹಾಯ್! ಬಹಳೇ ಸಂಕಟವಾಗುತ್ತಲಿದೆ; ನಿಮ್ಮ ತೊಡೆಯ ಮೇಲೆ ನನ್ನ ಮಸ್ತಕವನ್ನಿರಿಸಿಕೊಳ್ಳಿರಿ!''

ರಣಮಲ್ಲನು ಆ ವೀರನ ಮಸ್ತಕವನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಕುಳಿತನು.

'ರಣಮಲ್ಲರೆ! ನನ್ನ ತಲೆಯು ತಿರುಗಿದಂತಾಗುವದು.'

''ಶಿರಸ್ತ್ರಾಣವನ್ನು ತೆಗೆಯಲಾ? ಹಾಗೆ ಮಾಡಿದರೆ ಗಾಳಿಯಿಂದ ಸ್ವಲ್ಪ ವಿರಾಮವೆನಿಸುವದು.'' 'ಬೇಡಿರಿ, ಶಿರಸ್ತ್ರಾಣವನ್ನು ತೆಗೆಯಬೇಡಿರಿ.'

'ತೆಗೆದರೆ ಏನಾಗುವದು?' 'ಮನಸ್ಸಿಗೆ ಸೊಗಸಾಗುವದಿಲ್ಲ.'

ರಣಮಲ್ಲನ ಮನಸ್ಸಿನಲ್ಲಿ ಏನೋ ಒಂದು ವಿಧದ ಸಂಶಯವು ಹುಟ್ಟಿ: ''ವೀರಬಾಲಕಾ, ನೀನು ನನ್ನೆದುರಿಗೆ ಮುಚ್ಚುಮರೆಯಾಗಿ ವರ್ತಿಸತೊಡಗಿರುವೆ.'' ಎಂದು ನುಡಿದು, ಅವನ ಶಿರಸ್ತ್ರಾಣ ತೆಗೆದನು.

ಕಲ್ಪನಾತೀತವಾದ ಆಶ್ಚರ್ಯವು! ರಣಮಲ್ಲನಿಗೆ ತಾನು ಸ್ವಪ್ನದಲ್ಲಿರು

ವೆನೋ, ಜಾಗ್ರತೆಯಲ್ಲಿರುವೆನೋ ಎಂಬದು ಕೂಡ ತಿಳಿಯದಾಯಿತು. ಕೆಲವು ವೇಳೆಯ ವರೆಗೆ ಅವನು ದಂಗು ಬಡೆದು ಕುಳಿತಿದ್ದನು. ಅನಂತರದಲ್ಲಿ ಅವನು "ಯಾರು, ರಾಜನಂದಿನಿ ಶೀಲವತಿ! ಆದರ್ಶ ಆರ್ಯಾಂಗನೆ! ಧನ್ಯ, ಧನ್ಯ!' ಎಂದು ಉದ್ಗಾರ ತೆಗೆದನು.

ಶೀಲವತಿಯು ರಣಮಲ್ಲನ ಮುಖವನ್ನು ಕಣ್ತುಂಬ ನೋಡತೊಡಗಿದ್ದಳು. ಪ್ರಾಣಾಂತಿಕವಾದ ವೇದನೆಯಲ್ಲಿ ಸಹ ಅವಳ ನೇತ್ರಗಳು ಆನಂದಾಶ್ರು ಪರಿಪೂರ್ಣವಾಗಿದ್ದವು. ಆಹಹಾ! ಇದೇ ನಿಜ. ಇದು ಪಾತಿವ್ರತ್ಯ ಭಾವನೆಯ ವಿಲಕ್ಷಣವಾದ ಪ್ರಕಾರವು! ಮಾನವೀ ಜೀವನದ ಉದಾತ್ತವಾದ ವಿಚಾರವು! ಅಪೂರ್ವ ಬಲಿದಾನವು!

'ರಾಜಕನ್ಯೆ! ನೀನು ಮಾನವಿಯಲ್ಲ ದೇವಿಯು!'

"ಇನ್ನು ನಾನು ಸುಖದಿಂದ ಆತ್ಮ ಬಲಿದಾನ ಮಾಡುವೆನು. ರಾಣಾಜಿಯವರ ಅಸ್ಥಿವೈರಿಗಳಾಗಿ, ಅವರ ಮೇಲಿನ ಸೇಡುತೀರಿಸಿಕೊಳ್ಳಲಿಕ್ಕೆ ಬದ್ಧ ಕಂಕಣರಾಗಿದ್ದ ನೀವು, ಅವರ ರಕ್ಷಣೆಗಾಗಿ ಯತ್ನಿಸಿದಿರಿ ಇದೇನು ಸಾಮಾನ್ಯವಾದ ಸಂಗತಿಯಲ್ಲ. ನಿಮ್ಮ ಈ ವರ್ತನವು ಅನುಕರಣೀಯುವಿರುವದು. ನಗ ದೇಶವು ವೈರಿಯ ದಾಸ್ಯದಲ್ಲಿ ತೊಡಕುವ ಸಮಯ ಬಂದಾಗ, ರಾಜಕುಮಾರಿಯ ಶೀಲಕ್ಕೆ ಭಂಗವುಂಟಾಗುವ ಸಂಧಿಯು ಪ್ರಾಪ್ತವಾದಾಗ, ನೀವು ನಿಮ್ಮ ಅಂತರಂಗದ್ವೇಷವನ್ನು ಬದಿಗಿರಿಸಿ, ಕೇವಲ ರಾಷ್ಟ್ರಧರ್ಮವೆಂದು ಐಕ್ಯದಿಂದ ನಗದೇಶದ ಪಕ್ಷವನ್ನು ವಹಿಸಿ ಕಾದಿ, ರಾಷ್ಟ್ರಗೌರವವನ್ನೂ ಸ್ತ್ರೀಗೌರವವನ್ನೂ ಕಾಯ್ದಿರಿ. ನಿಮ್ಮಂತಹ ವಿಭೂತಿಗಳ ಸಲುವಾಗಿ ನಾನು ನನ್ನ ಆತ್ಮಬಲಿದಾನ ಮಾಡಿದ್ದೇನೂ ಅಷ್ಟೊಂದು ಘನವಾದದ್ದಲ್ಲ. ಸೇಡು, ಪ್ರತಿಜ್ಞೆ, ಪಿತ್ರಾಜ್ಞೆಗಳನ್ನು ಬದಿಗಿರಿಸಿ, ಮನಸ್ಸಿನಲ್ಲಿಯ ದ್ವೇಷಾಗ್ನಿಯನ್ನು ನೊಂದಿಸಿ, ಉಜ್ವಲ ರಾಷ್ಟ್ರಧರ್ಮನಿರತರಾದ ನಿಮ್ಮ ಘನವಂತಿಕೆಯನ್ನು ಎಷ್ಟು ಹೊಗಳಿದರೂ ತೀರದು. ನಿಮ್ಮ ಈ ಉಜ್ವಲ ರಾಷ್ಟ್ರಧರ್ಮದ ಸಂಗತಿಯು ಭರತವರ್ಷದ ಇತಿಹಾಸದಲ್ಲಿ ರತ್ನಾಕ್ಷರಗಳಿಂದ ಬರೆದಿಡುವಂತಹದಿರುವದು. ನಿಮ್ಮಂತೆಯೆ ಭಾರತೀಯರು ರಾಷ್ಟ್ರಧರ್ಮನಿರತರಾದರೆ, ದಾಸ್ಯದ ಭಯವಿಲ್ಲ. 'ಒಳಜಗಳಕ್ಕೆ ನಾವು ಐವರು, ಅವರು ನೂರು ಮಂದಿ; ಹೊರಜಗಳಕ್ಕೆ ನಾವು ನೂರಾ ಐದು ಮಂದಿ!' ಎಂದು ಹೇಳಿದ ಯುಧಿಷ್ಠಿರನ ನೀತಿಯನ್ನೇ ನೀವು ಅನುಸರಿಸಿದಿರಿ. ನಿಮ್ಮ ಉಜ್ವಲವಾದ ರಾಷ್ಟ್ರಧರ್ಮದ ಮಹತಿಯನ್ನು ಎಷ್ಟು ಕೊಂಡಾಡಿದರೂ ತೀರದು!"

"ರಾಜಕುಮಾರಿ, ನನಗೀ ಉಜ್ವಲ ರಾಷ್ಟ್ರದರ್ಮವನ್ನು ನನ್ನ ಕಕ್ಕಂದಿ

ರಾದ ಮಯೂರಧ್ವಜರೇ ಕಲಿಸಿದರು. ಯೋಗ್ಯ ವೇಳೆಯಲ್ಲಿ ನನಗೆ ರಾಷ್ಟ್ರಧರ್ಮದ ಉಪದೇಶವಾದದ್ದರಿಂದ, ನನ್ನಿಂದ ಎಷ್ಟಾದರೂ ರಾಷ್ಟ್ರಧರ್ಮದ ಕೃತಿಗಳು ಘಟಿಸಿದವು. ರಾಜನಂದಿನಿ, ನೀನು ಆತ್ಮಬಲಿದಾನ ಮಾಡಿ, ನನಗಿಂತಲೂ ಹೆಚ್ಚಿನ ರಾಷ್ಟ್ರಧರ್ಮಪಾಲನೆ ಮಾಡಿದಂತಾಯಿತು. ನೀನು ನಿನ್ನ ಆತ್ಮಾರ್ಪಣೆ ಮಾಡಿ ನನ್ನನ್ನು ಉಳಿಸಿದ್ದರಿಂದ, ಇಂದಿನ ಯುದ್ಧದಲ್ಲಿ ವಿಜಯ ಲಾಭವಾಯಿತು ನೀನು ನನ್ನನ್ನು ಋಣಿಯನ್ನಾಗಿ ಮಾಡಿದೆ."

"ಮನುಷ್ಯನ ಜೀವನವು ಪರೋಪಕಾರ್ಯಕ್ಕಾಗಿಯೇ ಇರುವದು. ಮಾನವೀ ಜೀವನದ ಉಚ್ಚಧ್ಯೇಯವೆಂದರೆ, ಬಲಿದಾನವು!"

"ರಾಜನಂದಿನಿ, ನೀನು ಪರಮಧನ್ಯಳು!" ರಣಮಲ್ಲನು ಉದ್ಗಾರ ತೆಗೆದನು.

"ರಣಮಲ್ಲರೆ, ನಿಮ್ಮ ಪ್ರಾಣವೇ ನನ್ನ ಪ್ರಾಣವೆಂದು ನನ್ನ ಭಾವನೆ. ಅದರಲ್ಲಿ ನೀವು ನಗದೇಶದ ಸ್ವಾತಂತ್ರ್ಯರಕ್ಷಣೆಗೆ ಮುಂದಾದ್ದರಿಂದ, ನಿಮ್ಮನ್ನು ಕಾಯುವದೇ ನನಗೆ ಕರ್ತವ್ಯವೆನಿಸಿತು. ನಾನು ನನ್ನ ಕೆಲಸವನ್ನು ಪೂರೈಸಿದೆನು ಇನ್ನು ಮೇಲೆ ಸೌಖ್ಯದಿಂದ ಪ್ರಾಣತ್ಯಾಗ ಮಾಡುವೆನು. ರಣಮಲ್ಲ, ಪ್ರಿಯಕರ ರಣಮಲ್ಲ, ನಿಮ್ಮ ಕೈಯನ್ನು ನನ್ನ ಕೈಯಲ್ಲಿ ಕೊಡಿರಿ, ಆಹಾ! ಎಷ್ಟು ಆನಂದವು? ಎಷ್ಟು ವೈಭವವು!"

ಶೀಲವತಿಯು ಹೀಗೆ ನುಡಿದು, ರಣಮಲ್ಲನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಮಂದಸ್ಮಿತಳಾಗಿ, ಪ್ರಿಯಕರನ ಮುಖವನ್ನು ಪ್ರೇಮಲ ದೃಷ್ಟಿಯಿಂದ ನೋಡತೊಡಗಿದಳು. ಅಂದಿನ ರಣಭೂಮಿಯೊಳಗೆ ದೊರೆತ ಆನಂದವು ಅವಳಿಗೆ ಇದುವರೆಗೆ ತನ್ನ ತಂದೆಯ ರಾಜವೈಭವದಲ್ಲಿ ದೊರೆತಿದ್ದಿಲ್ಲ.

"ನಾಥರೆ, ನೀವು ವಿಲಾಸವಿಜಯನಿಂದ ನನ್ನ ರಕ್ಷಣೆ ಮಾಡಿದಂದಿನಿಂದ ನಿಮಗೆ ಆತ್ಮಾರ್ಪಣೆ ಮಾಡಿದ್ದೆನು. ಇಂದು ನಿಮ್ಮ ಸಲುವಾಗಿ ಆತ್ಮಾರ್ಪಣೆ ಮಾಡುವ ಪ್ರಸಂಗವೊದಗಿದ್ದಕ್ಕಾಗಿ ಕೃತಕೃತ್ಯಳಾದೆನು. ಪ್ರಿಯಕರಾ, ಇನ್ನು ಇಹಲೋಕವಾಸದ ಅವಧಿಯು ಸಮೀಪಿಸಿತು. ತಮಗೆ ಇನ್ನೊಂದು ವಿಷಯವನ್ನು ಹೇಳುವದೇನಂದರೆ, ನೀವು ಸೌಮ್ಯವತಿಯನ್ನು ಪ್ರೇಮದಿಂದ ರಕ್ಷಿಸಿರಿ ಅವಳು ಮಹಾ ಸಾಧ್ವಿಯಿರುವಳು. ಅವಳನ್ನು ಸುಖದಲ್ಲಿಡಿರಿ; ಮತ್ತು ಯಾವಾಗಾದರೊಮ್ಮೆ ನನ್ನ ವಿಷಯವನ್ನು ಅವಳೆದುರಿಗೆ ತೆಗೆಯಿರಿ. ನನ್ನ ನೆನಪಿನಿಂದ ಅವಳ ಮನಸ್ಸು ಪರಿಪಕ್ವವಾಗಬಹುದು. ಸೌಮ್ಯವತಿಯೆಂದರೆ, ನಿಜವಾಗಿಯೂ ಪ್ರಶಂಸನೀಯ ಸತಿಶಿರೋಮಣಿಯಿರುವಳು. ಜೋಡು ಚೆನ್ನಾಗಿ ಕೂಡಿತು. ಅದಕ್ಕಾಗಿ ನನಗೆ ಪರಮಾನಂದವಾಗಿದೆ."

"ದೇವಿ!" ರಣಮಲ್ಲನು ಮನಃಪೂರ್ವಕವಾಗಿ:—"ನೀನು ಸಾಕ್ಷಾತ್ ದೇವತೆಯಿರುವೆ. ನಿನ್ನ ಸ್ವಾರ್ಥತ್ಯಾಗವು ಅದ್ವಿತೀಯವಾದದ್ದು. ನಿನ್ನ ಸಮಾನರು ಈ ಲೋಕದಲ್ಲಿ ಯಾರೂ ಇಲ್ಲ. ನೀನು ನನಗೆ ದೇವತಾಸ್ವರೂಪಿಯಾಗಿ ಕಾಣತೊಡಗಿರುವೆ."

"ದೇವಾ, ರಣಮಲ್ಲಜಿ! ನೀವು ಹೀಗೆ ಮಾತನಾಡಬೇಡಿರಿ. ಪ್ರಿಯ ನಾಥರೆ, ನಾನು ನಿಮ್ಮ ಚರಣದಾಸಿಯಿರುವೆನು. ನೀವು ನನ್ನ ದೇವಾಧಿ ದೇವರಿರುತ್ತೀರಿ."

ಶೀಲವತಿ-ರಣಮಲ್ಲರ ದೃಷ್ಟಿಗಳು ಒಂದಾದವು. ಅವರಿಬ್ಬರೂ ಪರಸ್ಪರರನ್ನು ನೋಡುತ್ತಲಿದ್ದರು.

ಶೀಲವತಿಯು ತನ್ನಲ್ಲಿ ಪ್ರೇಮವುಳ್ಳವಳಾಗಿದ್ದದ್ದು ನಿಜವೆಂಬದಕ್ಕೆ ರಣಮಲ್ಲನಲ್ಲಿ ಸಂದೇಹವುಳಿಯಲಿಲ್ಲ. ಆ ಪ್ರೇಮವು ಎಷ್ಟು ಅವಕಾಲ್ಯವೂ, ನಿಃಸ್ವಾರ್ಥವೂ, ಶ್ರೇಷ್ಠತರಗತಿಯದೂ ಎಂಬದರ ಬಗ್ಗೆ ಅವನಿಗೆ ನಂಬಿಗೆಯಾಯಿತು. ಮೃತ್ಯುಕಾಲದಲ್ಲಿ ಸಹ ಅಪೂರ್ವವಾದ ಆನಂದವನ್ನೂ ಕಲ್ಪನಾತೀತವಾದ ಕೃತಜ್ಞತೆಯನ್ನೂ ಹೊಂದಿದ ಶೀಲವತಿಯ ನಿಸ್ವಾರ್ಥ ಪ್ರೇಮದ ಮಹಿಮೆಯು ರಣಮಲ್ಲನಿಗೆ ಅವರ್ಣನೀಯವಾಗಿ ತೋರಿತು ಅವನು ಆ ದೇವಿಯ ದಿವ್ಯಪ್ರೇಮವನ್ನು ಮನಸ್ವೀಯಾಗಿ ಬಣ್ಣಿಸತೊಡಗಿದ್ದನು.

"ಪ್ರಾಣೇಶ್ವರಾ! ಇನ್ನು ನನಗೆ ಅಪ್ಪಣೆಯನ್ನು ಕೊಡಿರಿ; ಹೋಗಿ ಬರುವೆನು! ನಿಮ್ಮ ಚರಣಾರವಿಂದಗಳಿಗೆ ಕೊನೆಯ ನಮಸ್ಕಾರವು!"

ರಣಮಲ್ಲನು ದಿಙ್ಮೂಢನಾಗಿ ಕುಳಿತಿದ್ದನು. ಆಗ ಅವನ ನೇತ್ರಗಳು ನೀರಿನಿಂದ ತುಂಬಿದ್ದವು. ಕುತ್ತಿಗೆಯು ಬಿಗಿದಿತ್ತು. ಆದರೂ ಆತನು ಗದ್ಗದ ಸ್ವರದಿಂದ:—"ಪ್ರಿಯೆ, ಶೀಲವತಿ!"

"ಪ್ರಿಯಕರಾ, ನಾಥಾ, ಹೃದಯೇಶ್ವರಾ, ನನ್ನ ಪರಮೇಶ್ವರಾ! ಧನ್ಯಳಾದೆನು! ಕೃತಾರ್ಥಳಾದೆನು! ಮುಂದಿನ ಜನ್ಮದಲ್ಲಿ ನಾನು ನಿಶ್ಚಯವಾಗಿಯೂ ನಿಮ್ಮ ಚರಣದಾಸಿ. ಪ್ರಿಯಾ, ಪ್ರಣಾಮ........"

"ಶೀಲವತಿ, ರಾಜನಂದಿನಿ, ಪ್ರಿಯ ರಮಣಿ!"

ಅಷ್ಟರಲ್ಲಿ ಶೀಲವತಿಯ ಪ್ರಾಣಪಕ್ಷಿಯು ದೇಹಪಂಜರವನ್ನು ಬಿಟ್ಟು ಹಾರಿಹೋಗಿತ್ತು!

ರಣಮಲ್ಲನು ಭ್ರಮಿಷ್ಟನಂತೆ ಕುಳಿತನು. ಅವನ ಮುಖದಿಂದ "ಪ್ರಿಯೆ, ಶೀಲವತಿ!" ಎಂಬ ಉದ್ಗಾರವು ಒಂದೇಸವನೆ ಹೊರಡತೊಡಗಿತ್ತು.

ಅಷ್ಟರಲ್ಲಿ ನಗದೇಶದ ವಿಜಯಿ ಸೈನ್ಯವು ಶಿಬಿರವನ್ನು ತಲುಪಿ, "ನಗ ದೇಶಕೀ ಜಯ, ಧರ್ಮಕೀ ಜಯ!" ಎಂದು ಜಯಘೋಷ ಮಾಡಿತು.

ಆ ಜಯಘೋಷದ ಪ್ರತಿಧ್ವನಿಯು ರಣಮಲ್ಲನ ಹೃದಯದಲ್ಲಿ ಬೇರೆ ಬಗೆಯಿಂದ ಆಗತೊಡಗಿತು:-"ದಿವ್ಯಪ್ರೇಮಕೀ ಜಯ!-ಆದರ್ಶ ಬಲಿದಾನಕೀ ಜಯ!!"

---

## ಕೊನೆ.

೦

ನಗದೇಶದ ವಿಜಯಿ ಸೇನಾಸಮೂಹವು ಉತ್ಸಾಹದಿಂದ ರಾಜಧಾನಿಯನ್ನು ಪ್ರವೇಶಿಸಿತು. ಅಂದಿನ ಆನಂದವು ದುಃಖಮಿಶ್ರಿತವಾಯಿತು ರಾಣಾ ರಾಯಸಿಂಹನ ಹಾಗು ರಾಜಕುಮಾರಿ ಶೀಲವತಿಯ ಆತ್ಮಬಲಿದಾನಗಳಿಂದ ನಗದೇಶದ ಪ್ರಜೆಗಳು ವ್ಯಾಕುಲಚಿತ್ತರಾಗಿದ್ದರು.

ರಾಯಸಿಂಹನ ಹಾಗು ರಾಜಕುಮಾರಿಯ ದೇಹಗಳು ಚಂದನ ಚಿತೆಯ ಮೇಲೆ ಅಗ್ನಿಸಂಸ್ಕಾರ ಹೊಂದಿದವು. ಪ್ರಜಾಜನರು ತಿಂಗಳುಗಟ್ಲೆ ಅಶೌಚ ಪಾಲನೆ ಮಾಡಿದರು.

ಶೋಕಾಘಾತಕ್ಕೆ ಸರ್ವಶ್ರೇಷ್ಠವಾದ ಔಷಧವೆಂದರೆ, ಕಾಲವು. ಕಾಲವು ಕ್ರಮದಿಂದ ಶೋಕಾವೇಗವನ್ನು ಕಡಿಮೆ ಮಾಡುವದು. ನಗದೇಶದ ಪ್ರಜೆಗಳು ದುಃಖವನ್ನು ಮರೆಯತೊಡಗಿದರು.

ರಾಯಸಿಂಹನ ರಾಜ್ಯವನ್ನು ಸೇನಾಪತಿ ಮಯೂರಧ್ವಜನ ವಶಕ್ಕೆ ಕೊಡಬೇಕೆಂದು ನಗದೇಶದ ಪ್ರಜಾಜನರು ಏಕಮತದಿಂದ ನಿರ್ಧರಿಸಿದರು; ಆದರೆ ಸೇನಾಪತಿ ಮಯೂರಧ್ವಜನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವೆನೆಂದು ಅವರಿಗೆ ತಿಳಿಸಿದನು. ರಾಜ್ಯವನ್ನು ತನ್ನ ಬಂಧುವಾದ ಜಗಮಲ್ಲನ ಪಾತಿತಪುತ್ರ ರಣಮಲ್ಲನಿಗೆ ಸಮರ್ಪಿಸಬೇಕೆಂದು ಅವನು ಇಚ್ಛೆಯನ್ನು ಪ್ರಕಟಿಸಿದನು. ಪ್ರಜಾಜನರಿಗೆ ಅವನ ವಿಚಾರವು ಯೋಗ್ಯವೆನಿಸಿತು ರಣಮಲ್ಲನ ಯೋಗ್ಯತೆಯನ್ನು ಬಹುತರವಾಗಿ ಎಲ್ಲರೂ ಅರಿತಿದ್ದರು. ತಮ್ಮ ರಾಷ್ಟ್ರಕ್ಕೆ ಸರ್ವೋತ್ಕೃಷ್ಟನಾದ ದೊರೆಯು ದೊರೆತನೆಂದು ಎಲ್ಲರೂ ಸ್ವಾನಂದ ಸಾಮ್ರಾಜ್ಯದಲ್ಲಿ ಮುಳುಗಿದರು.

ಸುಮುಹೂರ್ತದಲ್ಲಿ ಸಿಂಹಾಸನಾರೋಹಣ ಸಮಾರಂಭವು ನೆರವೇರಿಸಲ್ಪಟ್ಟಿತು. ರಣಮಲ್ಲನ ಮಸ್ತಕದ ಮೇಲೆ ರಾಜಮುಕುಟವು ವಿರಾಜಿಸತೊಡಗಿತು.

ಸುಲಿಗೆಗಾರನೆಂದು ಕರೆಯಿಸಿಕೊಳ್ಳುತ್ತಿದ್ದ ರಣಮಲ್ಲನು ಉಜ್ವಲ ಧರ್ಮವನ್ನು ಪಾಲನೆ ಮಾಡಿದ್ದರಿಂದ, ರಾಜನಾದನು.

ಒಂದು ದಿನ ಬೆಳದಿಂಗಳ ರಾತ್ರಿಯಲ್ಲಿ ವೀರರಣಮಲ್ಲನು ತನ್ನ ಅಟ್ಟಾಲಿಕೆಯಲ್ಲಿ ಕುಳಿತು ಪ್ರಿಯತಮೆಯೊಡನೆ ಪ್ರೇಮಭಾಷಣ ನಡೆಯಿಸಿದನು. ಆ ಬೆಳದಿಂಗಳ ರಾತ್ರಿಯು ಅವರಿಗೆ ಒಳ್ಳೆಯ ಆಹ್ಲಾದಕರವಾಗಿ ಪರಿಣಮಿಸಿತ್ತು.

ಭಿತ್ತಿವಾತಾಯನದಿಂದ ವಿಲಾಸಮಂದಿರದಲ್ಲಿ ಬಿದ್ದ ಬೆಳದಿಂಗಳಲ್ಲಿ ಆ ದಂಪತಿಗಳು ಕುಳಿತು, ಆಕಾಶಸ್ಥ ಚಂದ್ರನನ್ನು ನಿರೀಕ್ಷಿಸತೊಡಗಿದ್ದರು. ಆಗ ರಾಜಾ ರಣಮಲ್ಲನು:—"ಪ್ರಿಯೆ, ಈ ಕೌಮುದಿಯು ಎಷ್ಟು ಆಹ್ಲಾದಕರವಾಗಿರುವದು ನೋಡು."

"ಪ್ರಾಣನಾಥ, ಅಟ್ಟಾಲಿಕೆಯಲ್ಲಿಯ ಚಂದ್ರಿಕೆಯ ಆಹ್ಲಾದವನ್ನು ಎಷ್ಟೆಂದು ಬಣ್ಣಿಸಬೇಕು? ಪ್ರಿಯಕರಾ, ಇದು ಯಾರ ಪ್ರತಾಪವು? ಯಾರಿಂದ ಇಂತಹ ಸಂಭ್ರಮವನ್ನು ಹೊಂದುವ ಸುಯೋಗವು ದೊರೆಯಿತು?" ಎಂದು ರಾಣೀ ಸೌಮ್ಯವತಿಯು ಪ್ರಶ್ನೆ ಮಾಡಿದಳು.

"ದಿವ್ಯ ಹೃದಯಿಯೂ, ಪರಮ ಸಾಧ್ವಿಯೂ ಆದರ್ಶಕ್ಷತ್ರೀಯ ರಮಣಿಯೂ ಆದ ಆ ಶೀಲವತಿಯ ಪ್ರತಾಪವೇ ಇದು! ನಿಜವಾಗಿ ಹೇಳಬೇಕಾದರೆ, ಆ ದೇವಿಯ ಬಲಿದಾನವು ಆಗಸದೊಳಗಿನ ಚಂದ್ರನಂತೆ ನಿರ್ಮಲವಿರುವದು."

"ನಾಥ, ಚಂದ್ರನಲ್ಲಿ ಕಲಂಕವುಂಟು; ಆದರೆ ಆ ದೇವಿಯ ಬಲಿದಾನದಲ್ಲಿ ತಿಲಾಂಶವೂ ಕಲಂಕವಿಲ್ಲ."

"ಪ್ರಿಯೆ, ನಿಜವು" ಎಂದು ರಣಮಲ್ಲನು ನುಡಿದು, ಒಳ್ಳೇ ಗಾಂಭೀರ್ಯದಿಂದ ಸೌಮ್ಯವತಿಯನ್ನು ಕುರಿತು:—"ರಾಜಕುಮಾರಿ ಶಿಲವತಿಯು ಆತ್ಮ ಬಲಿದಾನ ಮಾಡಿದ್ದರಿಂದಲೂ, ಸೇನಾಪತಿ ಮಯೂರಧ್ವಜರು ನನಗೆ ರಾಷ್ಟ್ರ ಧರ್ಮವನ್ನು ಉಪದೇಶಿಸಿ ರಾಷ್ಟ್ರಕಾರ್ಯಕ್ಕಾಗಿ ತೊಡಗಿಸಿದ್ದರಿಂದಲೂ ನಗದೇಶದ ರಾಜಸಿಂಹಾಸನವು ನನಗೆ ಪ್ರಾಪ್ತವಾಯಿತು ನಗದೇಶರಾಷ್ಟ್ರವು ಸ್ವಾ-ತಂತ್ರ್ಯಸೌಖ್ಯವನ್ನು ಹೊಂದಿತು."

ಆ ದಂಪತಿಗಳ ನೇತ್ರಗಳು ವ್ಯೋಮಪಟಲದಲ್ಲಿದ್ದ ಚಂದ್ರನ ಕಡೆಗೆ ಸ್ವಲ್ಪ ಹೊತ್ತು ಸ್ಥಿರತೆಯನ್ನು ಹೊಂದಿದವು. ಈರ್ವರ ಹೃದಯಗಳೂ ಸ್ವರ್ಗಸ್ಥ ರಾಜಕುಮಾರಿಯ ಬಲಿದಾನದಲ್ಲಿ ನಿಮಗ್ನವಾದವು. ಅವರಿಬ್ಬರೂ ಸಾತ್ವಿಕ ಪ್ರೇಮದ ಅನುಭವವನ್ನು ಹೊಂದತೊಡಗಿದರು

---

ಮುಗಿದುದು.